ಜುಲೈ ೨೦೦೨




ಬೆಲೆ : ರೂ.೧೦

# ಹೊಸತು

ನೆಮ್ಮದಿಯ ನಾಳೆ ನಮ್ಮದು





## ರಾಷ್ಟ್ರಪತಿಯ ಪದವಿ ಪರಮ ವಿಶಿಷ್ಟ ಸೇವಾ ಪದಕವಲ್ಲ



# ಸೌಹಾರ್ದ ಬೆಳೆಸಿ, ಕೋಮುವಾದ ನಿರಾಕರಿಸಿ !



ಕೋಮುವಾದ ವಿರೋಧಿ ಆಂದೋಲನ ಬೆಂಗಳೂರಿನಲ್ಲಿ ಕೋಮು ಸಾಮರಸ್ಯ ಸಮಾವೇಶವನ್ನು ಏರ್ಪಾಟು ಮಾಡಿತ್ತು. ಹಲವು ಖ್ಯಾತ ಹಿರಿಯ-ಕಿರಿಯ ಕಲಾಕಾರರು ಸ್ಥಳದಲ್ಲೇ ಚಿತ್ರ ರಚಿಸಿ ಕೋಮು ಸಾಮರಸ್ಯಕ್ಕೆ ತಮ್ಮ ಬೆಂಬಲ ವ್ಯಕ್ತಪಡಿಸಿದರು.










Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna

# ಹೊಸತು

## ಒಳಗೇನಿದೆ.....




*ಚಿತ್ರಗಳು : ಪಿ. ಮಹಮ್ಮದ್, ಮೋನಪ್ಪ, ಬಿ. ವಿಲ್ಸನ್*
*ಜಿ. ಎಂ. ಬೊಮ್ನಳ್ಳಿ, ಶ್ರೀಹರಿ, ರಾಮಕೃಷ್ಣ*
*ಮುಖಚಿತ್ರ : ರಾಷ್ಟ್ರಪತಿ ಸ್ಥಾನದ ಅಭ್ಯರ್ಥಿಗಳು : ಅಬ್ದುಲ್ ಕಲಾಂ ಮತ್ತು ಲಕ್ಷ್ಮಿ ಸೆಹಗಲ್*
*ವಿನ್ಯಾಸ : ನವಕರ್ನಾಟಕ ವಿನ್ಯಾಸ*
*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

**ಗೋ**ಧ್ರಾದಲ್ಲಿ ರೈಲಿನ ಒಂದು ಬೋಗಿಯಲ್ಲಿದ್ದವರನ್ನೆಲ್ಲಾ ಜೀವಂತ ಸುಟ್ಟುಹಾಕಿದ ಕಡುಪಾಪಿಗಳ ಕೊಳಕು ಮನಸ್ಸು ಹೇಗಿರುತ್ತದೆಯೆಂಬ ಕಲ್ಪನೆ ಬರಬೇಕಾದರೆ ಜೂನ್ ೬ರಂದು ಬೆಂಗಳೂರಿನಲ್ಲಿ ಸಮೀನಾ- ಮತ್ತು ಪಾಲ್‌ರಾಜ್ ದಂಪತಿಗಳನ್ನು ಕೊಂದುಹಾಕಿದ ಧೂರ್ತರನ್ನು ನೋಡಬೇಕು. ಅವರಿಗೆ ಮನುಷ್ಯರನ್ನು ಮನುಷ್ಯರನ್ನಾಗಿ ಕಾಣಲಾಗುವುದಿಲ್ಲ. ಸಹಜವಾಗಿ ಪ್ರೀತಿಸಿ ಮದುವೆಯಾದ ಪಾಲ್ ಮತ್ತು ಸಮೀನಾ ಕುರುಡು ಮತಧರ್ಮೀಯರ ದೃಷ್ಟಿಯಲ್ಲಿ ಕ್ರೈಸ್ತ ಮತ್ತು ಇಸ್ಲಾಂ ಧರ್ಮೀಯರಾಗಿ ಕಾಣುತ್ತಾರೆಯೇ ವಿನಾ ಮಾನವ ಜೀವಿಗಳಾಗಿ ಅಲ್ಲ. ಪಾಲ್ ತನ್ನ ಮತಧರ್ಮವನ್ನು ಬದಲಾಯಿಸಿದರೆ ಅವನದು ಕಂಗೊಳಿಸುವ ವ್ಯಕ್ತಿತ್ವ, ಇಲ್ಲದಿದ್ದರೆ ಪಾತಕಿ. ಇಂತಹ ಹೀನ ಭಾವನೆಯನ್ನು ಜಡ್ಡು ಸಂಪ್ರದಾಯದ ಮುಲ್ಲಾಗಳು ತಮ್ಮ ಅನುಯಾಯಿಗಳ ಮನಸ್ಸಿನಲ್ಲಿ ತುಂಬಿಸುತ್ತಿರುತ್ತಾರೆ. ವಿವೇಚನೆಗೆ ಅವಕಾಶವಿಲ್ಲದಂತಹ ವಾತಾವರಣದಲ್ಲಿ ಬೆಳೆದ ಈ ಅನುಯಾಯಿಗಳು ಪಾಲ್ ಮತ್ತು ಸಮೀನಾರ ಮಗುವನ್ನು ಅಪಹರಿಸಿ ಅದನ್ನು ಮತೀಯ ದೈತ್ಯನನ್ನಾಗಿ ಬೆಳೆಸಲು ತವಕಿಸುತ್ತಾರೆ, ದಂಪತಿಗಳನ್ನು ಕೊಂದುಹಾಕುತ್ತಾರೆ ! ಇದೇ ಪಾತಕಿಗಳನ್ನು ರೈಲಿಗೆ ಬೆಂಕಿ ಹಚ್ಚುವುದಕ್ಕೂ ಬಳಸಬಹುದು. ಕುಟುಂಬದ ಅಂತಸ್ತು, ಘನತೆ, ಜಾತಿ ಮರ್ಯಾದೆ ಮುಂತಾದ ಹೆಸರುಗಳಲ್ಲಿ ಪ್ರೀತಿಯ ಸಂಬಂಧಗಳನ್ನು ಚಿವುಟಿಹಾಕುವ ಸಂಪ್ರದಾಯ ನಮ್ಮಲ್ಲಿ ಇಂದು-ನಿನ್ನೆಯದಲ್ಲ. ಅಂತಹ ಮನಸ್ಸನ್ನು ಪೋಷಿಸುವ ಮತಧರ್ಮೀಯ ಜಡ್ಡುತನವೇ ಗೋಧ್ರಾ, ಗುಜರಾತ್, ಕಾಶ್ಮೀರ ಮುಂತಾದೆಡೆ ಅವ್ಯಾಹತ ಹತ್ಯೆಗಳಿಗೆ ಪ್ರೇರಣೆ ನೀಡುತ್ತದೆ. ಈ ಜಡ್ಡುತನದ ಬಂಧನದಿಂದ ಜನರನ್ನು ಹೊರತರುವ ಕ್ರಿಯೆ ಸುಲಭವಲ್ಲ, ಆದರೆ ಅನಿವಾರ್ಯವಾಗಿ ಕೈಗೊಳ್ಳಬೇಕಾದ್ದು.

ಬೆಂಗಳೂರಿನ ತಿಲಕ್‌ನಗರದ ಮತೀಯ ಗಲಭೆಯಲ್ಲೂ ಇದೇ ಜಡ್ಡು ಮನಸ್ಸುಗಳು ಕೆಲಸ ಮಾಡಿವೆ. ಒಂದು ಮತಧರ್ಮದ ಆಚರಣೆಗಳು ಸ್ಥಿರವಾಗಿ ಏಕಪ್ರಕಾರವಾಗಿರುವುದಿಲ್ಲ, ಇರಬೇಕಾಗಿಲ್ಲ. ಎಂದೋ, ಯಾವುದೋ ಕಾರಣಕ್ಕೆ ಒಂದು ನಂಬಿಕೆ ಮತ್ತು ಆಚರಣೆ ಹುಟ್ಟಿಕೊಂಡಿದ್ದರೆ ಅದು ಆರೋಗ್ಯಕರ ಪಾಲನೆಯ ವಿಷಯವಾಗಿ ಉಳಿಯದೆ ಸಮುದಾಯ ಜೀವನದ ಸಹಬಾಳ್ವೆಗೆ ಕೊಳ್ಳಿಯಿಕ್ಕುವ ಸಾಧನವಾಗಿ ಮಾರ್ಪಾಟಾಗಬಹುದು. ತಿಲಕ್‌ನಗರದ ಸಂದರ್ಭದಲ್ಲಿ ಜರುಗಿದ್ದು ಅದೇ. ಮಸೀದಿಯ ಮುಂದೆ ವಾದ್ಯ ನುಡಿಸಬಾರದು ಎಂಬ ಸಂಪ್ರದಾಯವಿದೆ. ಅದು ಏಕೆ, ಎಲ್ಲಿ ಹುಟ್ಟಿಕೊಂಡಿತೆಂಬುದನ್ನು ಅರಿಯುವ ಸಹನೆ ಇಲ್ಲವಾದಾಗ ಗೊಡ್ಡುತನ ಮನಸ್ಸನ್ನಾವರಿಸುತ್ತದೆ. ಒಂದು ವೇಳೆ ಮಸೀದಿಯ ಮುಂದೆ ತಮಟೆ ಬಾರಿಸಿದರೆ ಏನು ಅನಾಹುತ ಸಂಭವಿಸುತ್ತದೆ, ಬಾರಿಸಲಿ ಬಿಡಿ ಎಂದು ಮುಲ್ಲಾ ಹೇಳಿಬಿಟ್ಟರೆ ಹುಚ್ಚುತನದಿಂದ ಹುಟ್ಟಿಕೊಳ್ಳುವ ಘರ್ಷಣೆ ಇಲ್ಲವಾಗುತ್ತದೆ. ಮಾರನೆಯ ದಿನದಿಂದಲೇ ಬೇರೆ ರೀತಿಯ ಹಿತಕರ ಸಂಬಂಧಗಳು ಸಾಧ್ಯವಾಗುತ್ತವೆ ಅಥವಾ ಮಾರಮ್ಮನ ಆರಾಧಕರು ಮುಲ್ಲಾ ಸಂಪ್ರದಾಯದ ಜಡ್ಡುತನವನ್ನು ಮಾನ್ಯ ಮಾಡಿ ಮಸೀದಿಯ ಮುಂದೆ ತಮಟೆ ಬಾರಿಸದಿದ್ದರೆ ಮಾರಮ್ಮನಿಗೇನೂ ಸಿಟ್ಟು ಬರುವುದಿಲ್ಲವೆಂದು ಆ ಹತ್ತು ಗಜ ಪ್ರದೇಶದ ಆ ಕಡೆ, ಈ ಕಡೆ ಮಾತ್ರವೇ ತಮಟೆ ಬಾರಿಸಲು ತೀರ್ಮಾನಿಸಿದರೂ ತಿಳಿಯಾದ ಸಂಬಂಧಗಳು ಸಾಧ್ಯ. ಹಾಗೆ ಮಾಡುವುದರ ಬದಲು ಮುಲ್ಲಾ ಶಿಷ್ಯರು ಮಸೀದಿಯಿಂದ ಕಲ್ಲು ಒಗೆಯುತ್ತಾರೆ. ಮಾರಮ್ಮನ ಭಕ್ತರು ರೊಚ್ಚಿನಿಂದ ಪ್ರತಿಕ್ರಿಯಿಸುತ್ತಾರೆ. ವರ್ಷಾನುಗಟ್ಟಲೆ ಜೊತೆಯಲ್ಲಿ ದುಡಿದಿದ್ದವರು ಒಮ್ಮೆಲೇ ವೈರಿಗಳಂತೆ ಕಾದಾಡಿ ಇದ್ದ ಅಲ್ಪಸ್ವಲ್ಪ ಆಸ್ತಿಯನ್ನು ಕಳೆದುಕೊಂಡು ತಮ್ಮ ತಮ್ಮ ಮತಧರ್ಮದ ಶ್ರೇಷ್ಠತೆಯನ್ನು ರಕ್ಷಿಸಿಕೊಳ್ಳುತ್ತಾರೆ. ಆಧುನಿಕತೆಯ ಜೀವನದ ಹಿನ್ನೆಲೆಯಲ್ಲಿ ಇಂತಹ ಬರ್ಬರ ಕೃತ್ಯಗಳು ನಡೆಯುವುದು ಜಡ್ಡುಗಟ್ಟಿದ ಮತಧರ್ಮೀಯ ಭಾವನೆಗಳನ್ನು ಪುಷ್ಟೀಕರಿಸುವುದಕ್ಕೆ; ಮೌಲ್ಯಗಳನ್ನು ಮೈಗೂಡಿಸಿಕೊಳ್ಳುವ ಸಂಪ್ರದಾಯವನ್ನು ಕಿತ್ತೊಗೆದು ಮೊಂಡು ಮನಸ್ಸುಗಳನ್ನು ಬೆಳೆಸುವುದು ಶ್ರೇಷ್ಠವೆಂದು ಬಗೆಯುವುದೇ ಮತಧರ್ಮಕ್ಕೆ ಎಸಗಬಹುದಾದ ಒಂದು ಅಪಚಾರ.

ಇಂಥದೆ ಮೊಂಡುತನದ ನೀತಿಯನ್ನು ವಾಜಪೇಯಿ ಸರ್ಕಾರ ಆರ್ಥಿಕ ಕ್ಷೇತ್ರದಲ್ಲಿ ಅನುಸರಿಸುತ್ತಿದೆ. ಮತಧರ್ಮವು ಕೆಲವು ಅರ್ಥರಹಿತ ಆಚರಣೆಗಳನ್ನು ವೈಭವೀಕರಿಸಿ

*(೧೧ನೇ ಪುಟಕ್ಕೆ)*

ತಿಂಗಳ ಪತ್ರಿಕೆ
# ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೩ ಸಂಚಿಕೆ - ೧೨ ಜುಲೈ ೨೦೦೨



*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೮೨೬

*ಹೊಸತು ಕಚೇರಿಯ ವಿಳಾಸ*

ನವಕರ್ನಾಟಕ ಪ್ರಕಾಶನ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೭
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**
**website : www.navakarnatakabooks.com**

## ಸಂಪಾದಕೀಯ

# ರಾಷ್ಟ್ರಪತಿಯ ಪದವಿ ಪರಮ ವಿಶಿಷ್ಟಸೇವಾ ಪದಕವಲ್ಲ

**ನಾ**ಡಿನ ಅತ್ಯುನ್ನತ ರಾಜಕೀಯ ಅಧಿಕಾರ ಸ್ಥಾನವಾದ ರಾಷ್ಟ್ರಪತಿ ಪದವಿಗೆ ಶ್ರೀಮತಿ ಇಂದಿರಾಗಾಂಧಿ ೧೯೬೯ರಲ್ಲಿ ಚುನಾವಣೆಯನ್ನು ಅನಿವಾರ್ಯವಾಗಿಸಿದ ಸಂದರ್ಭವನ್ನು ಇಂದು ಜ್ಞಾಪಿಸಿಕೊಳ್ಳುವುದು ಅನುಚಿತವೇನಲ್ಲ. ತದನಂತರ ಶ್ರೀಮತಿ ಗಾಂಧಿ ತನ್ನ ಪಕ್ಷಕ್ಕೆ ಒಂದು ಸಮಾಜವಾದದ ಅಲಿಪ್ತ ನೀತಿಯ ಸೈದ್ಧಾಂತಿಕ ಸ್ವರೂಪವನ್ನು ಕೊಡಲು ಸಾಧ್ಯವಾಯಿತು. ಅಂದಿನ ಜನತಾಪಕ್ಷ, ಜನಸಂಘವನ್ನು ತನ್ನೊಳಗೆ ಸೇರಿಸಿಕೊಂಡು ಒಂದು ಸಂಯುಕ್ತ ರಂಗವನ್ನು ರಚಿಸಿ, ಶ್ರೀಮತಿ ಗಾಂಧಿ ಅವರ ವಿರುದ್ಧ ಹೋರಾಡಲು ಮುಂದಾಗಿ ಒಂದಿಷ್ಟು ಜಯಗಳಿಸಲು ಸಾಧ್ಯವಾಯಿತು. ಇಂತಹ ಸನ್ನಿವೇಶ ಉಂಟಾದದ್ದು ಶ್ರೀಮತಿ ಗಾಂಧಿ ತನಗೆ ತಾನೇ ನಿರ್ಧರಿಸಿಕೊಂಡ ಸಿದ್ಧಾಂತವನ್ನು ಜನತೆ ಬೆಂಬಲಿಸಿದರೂ, ಅನುಷ್ಠಾನಕ್ಕೆ ತರದೆ ವಿಫಲವಾದಾಗ, ಅದೇ ಕಾರಣ ತುರ್ತುಪರಿಸ್ಥಿತಿಯಂಥ ವೈಪರೀತ್ಯಕ್ಕೆ ಎಡೆಕೊಟ್ಟಾಗ, ವ್ಯಕ್ತಿನಿಷ್ಠ ಪಕ್ಷವಾಗಿ ತನ್ನ ಪಕ್ಷದ ಸ್ವರೂಪವನ್ನು ಬದಲಾಯಿಸುತ್ತಾ ಹೋದಾಗ.

ಈ ದೃಷ್ಟಿಯಲ್ಲಿ ನೋಡಿದಾಗ ಈ ನಾಡಿನಲ್ಲಿ ಅಧಿಕಾರಕ್ಕೆ ಬರಲು ಸಂಯುಕ್ತ ರಂಗಗಳಿಗೆ ಮಾತ್ರ ಹೇಗೆ ಸಾಧ್ಯ ಎಂಬುದು ಸ್ಪಷ್ಟವಾಗುತ್ತದೆ. ಸಂಯುಕ್ತ ರಂಗದ ಆಡಳಿತದ ಕಲೆ ಅಪೇಕ್ಷಿಸುವುದು ವಿವಿಧ ವೈರುಧ್ಯಗಳ ಸಂಘರ್ಷಣೆಗಳನ್ನು ಮಾನ್ಯಮಾಡುತ್ತಲೇ, ಎಲ್ಲರಿಗೂ ಒಪ್ಪಿತವಾಗುವ, ಜನಸಾಮಾನ್ಯರಿಗೆ ಅಗತ್ಯವಾದ ಹಲವಾರು ಕಾರ್ಯಕ್ರಮಗಳನ್ನು, ಸುಧಾರಣೆಗಳನ್ನು ಜಾರಿಗೊಳಿಸುತ್ತಾ ಹೋಗುವುದು. ಎನ್‌ಡಿಎ ಸರ್ಕಾರ ಈ ನಿಟ್ಟಿನಲ್ಲಿ ವಿಫಲವಾಗಿದೆ. ಭಾಜಪದ ಅಪ್ರಾಮಾಣಿಕತೆಯೇ ಇದಕ್ಕೆ ಒಂದು ಮುಖ್ಯ ಕಾರಣ. ಕಾಂಗ್ರೆಸ್ ಪಕ್ಷ ಕೈಗೆ ಅಧಿಕಾರ ಸಿಕ್ಕಾಗ ಆಳಲು ವಿಫಲವಾದುದೂ ತನ್ನ ಸಂಯುಕ್ತರಂಗ ಸ್ವರೂಪವನ್ನು ಕಳೆದುಕೊಂಡದ್ದರಿಂದ. ಆದರೂ ಅದು ಕಳೆದ ದಶಕದ ಪ್ರಾರಂಭದಲ್ಲಿ ಹೊಸ ಆರ್ಥಿಕ ನೀತಿಯನ್ನು ಜಾರಿಗೊಳಿಸಲು ಸಫಲವಾದುದಕ್ಕೆ ಕಾರಣ ತೆರೆಯ ಮರೆಯಲ್ಲಿ ಭಾರತೀಯ ಜನತಾಪಕ್ಷದೊಡನೆ, ಆಳುವ ವರ್ಗದ ಪ್ರತಿನಿಧಿಗಳೊಡನೆ ಮಾಡಿಕೊಂಡ ಒಪ್ಪಂದದ ಮೇಲೆ. ಹಲವು ಬಾರಿ ಬಹುಮತ ಕಳೆದುಕೊಳ್ಳಬೇಕಾಗಿದ್ದ ನರಸಿಂಹರಾಯರ ಸರ್ಕಾರ ಭಾಜಪದ ಅಷ್ಟೇನೂ ಸೂಕ್ಷ್ಮವಲ್ಲದ ಹಲವಾರು ರೀತಿಯ ಬೆಂಬಲದಿಂದಾಗಿ ಆಡಳಿತದಲ್ಲಿ ಮುಂದುವರಿಯಲು ಸಾಧ್ಯವಾಯಿತು. ಈಗಲೂ ಭಾಜಪ ಈ ರೀತಿಯ ಸಾಂದರ್ಭಿಕ ಬೆಂಬಲವನ್ನು ಕಾಂಗ್ರೆಸ್ಸಿನಿಂದ ಪಡೆಯುತ್ತಿರುವುದು ರಹಸ್ಯವೇನಲ್ಲ. ಈಗಷ್ಟೆ ಕಾಂಗ್ರೆಸ್ ಭಾಜಪದ ಅಧ್ಯಕ್ಷ ಪದವಿಯ ಉಮೇದುವಾರರಿಗೆ ಬೆಂಬಲ ನೀಡಿ, ಆಳುವ ವರ್ಗದ ಪರ ತನ್ನ ಕರ್ತವ್ಯವನ್ನು ನಿರ್ವಹಿಸಿದೆ. ಭಾಜಪ ಎಲ್ಲಿಯವರೆಗೆ ಹೊಸ ಆರ್ಥಿಕ ನೀತಿಯನ್ನು ಜಾರಿಯಲ್ಲಿಡಬಹುದೋ ಅಲ್ಲಿಯವರೆಗೆ ಅದರ ಅಧಿಕಾರಕ್ಕೆ ಚ್ಯುತಿಯಿಲ್ಲ. ಅದು ಕಾಂಗ್ರೆಸ್ ಪಕ್ಷಕ್ಕಿಂತ ಹೆಚ್ಚು ಸಮರ್ಥವಾಗಿ, ಹೆಚ್ಚು ತ್ವರಿತವಾಗಿ ಜನವಿರೋಧಿ ಆರ್ಥಿಕ ನೀತಿಗಳನ್ನು ಕಾರ್ಯಗತಗೊಳಿಸುವ ಸಾಮರ್ಥ್ಯವನ್ನು ಹೊರಗೆಡವಿದೆ. ಆದರೂ ಅದರ ಸೈದ್ಧಾಂತಿಕ ಬೇರು ಆರ್‌ಎಸ್‌ಎಸ್‌ನ ನಿಯಂತ್ರಣಕ್ಕೆ ಸಿಕ್ಕಿ, ಆಳುವವರ್ಗದ ಅರ್ಥನೀತಿಗೆ ಮಾರಕವಾಗುವ ಕೋಮುವಾದದಂಥ ಪ್ರಗತಿ ವಿರೋಧಿ ಬೆಳವಣಿಗೆಯನ್ನು ಬಹಿರಂಗಪಡಿಸಿದ್ದು, ಇದರಿಂದ ಕಂಗೆಟ್ಟ ಆಳುವವರ್ಗ ತನ್ನ ಒಲವನ್ನು ಕಾಂಗ್ರೆಸ್ ಪಕ್ಷಕ್ಕೆ ಮುಂದಿನ ದಿನಗಳಲ್ಲಿ ವರ್ಗಾಯಿಸಿದರೆ ಆಶ್ಚರ್ಯವೇನಿಲ್ಲ.

ಶ್ರೀ ಎ. ಪಿ. ಜೆ. ಅಬ್ದುಲ್ ಕಲಾಂ ಕಳೆದ ಮೂರು ದಶಕಗಳಲ್ಲಿ ಅಂದಂದಿನ ಎಲ್ಲಾ ಆಳುವ ಸರ್ಕಾರಗಳಿಂದಲೂ ಮನ್ನಣೆ ಪಡೆದಿರುವ ಖ್ಯಾತ ತಂತ್ರಜ್ಞ. ಇವರು ಮೂಲಭೂತವಾಗಿ ವಿಜ್ಞಾನಿಯೇ ಅಥವಾ ತಂತ್ರಜ್ಞಾನಿಯೇ ಎಂಬ ಚರ್ಚೆ ಅಪ್ರಸ್ತುತ. ನಮ್ಮ ರಕ್ಷಣಾ ವ್ಯವಸ್ಥೆಗೆ ಸ್ವಾವಲಂಬನೆಯನ್ನು ತರಲು ಇವರ ಕೊಡುಗೆ ಗಮನಾರ್ಹ. ಆದರೆ ಶ್ರೀಮತಿ ಇಂದಿರಾ ಗಾಂಧಿ ಅಂದು ಅಣುಬಾಂಬು ಸಿಡಿಸಿ, ಅಂತರರಾಷ್ಟ್ರೀಯವಾಗಿ ಗಳಿಸಿದ ಪ್ರಭಾವದ ಸಂದರ್ಭವೇ ಬೇರೆ. ಇಂದಿನ ಪರಿಸ್ಥಿತಿಯಲ್ಲಿ ಸಿಡಿಸಿದ ಅಣುಬಾಂಬು ನಮ್ಮ ಆಂತರಿಕ ವಿಷಯಗಳಲ್ಲಿ ಹಾಗೂ ಪಾಕಿಸ್ತಾನದ ಸಂಬಂಧದಲ್ಲಿ ಅಂತರರಾಷ್ಟ್ರೀಯ ಹಸ್ತಕ್ಷೇಪಕ್ಕೆ ಅನುವು ಮಾಡಿಕೊಟ್ಟಿತೇ ವಿನಾ ನೇರವಾಗಿ ರಕ್ಷಣೆಗೆ ಅನುಕೂಲವಾಯಿತೇ ಎಂಬುದರಲ್ಲಿ ತೀರ ಭಿನ್ನಾಭಿಪ್ರಾಯವಿದ್ದು ಇದನ್ನು ಇತಿಹಾಸವೇ ತೀರ್ಮಾನಿಸಬೇಕು. ಈ ಸಂದರ್ಭದ ಹಿನ್ನೆಲೆ, ನಮ್ಮ ಆಳುವ ವರ್ಗ ಜಾಗತೀಕರಣದ ಪ್ರಕ್ರಿಯೆಯ ಸಂಭ್ರಮದಲ್ಲಿ ಸಿಲುಕಿಕೊಂಡಿದ್ದು, ಅಣುಬಾಂಬು, ಜಾಗತೀಕರಣ, ವಿಶ್ವವ್ಯಾಪಾರವೂ ಒಟ್ಟಾಗಿ ಮೇಳೈಸದೆಂಬ ನವವಸಾಹತುಶಾಹಿಯ, ಹೊಸ ಸಾಮ್ರಾಜ್ಯವಾದದ ಧೋರಣೆ ಅರ್ಥವಾದಾಗ ನಮ್ಮ ವಿದೇಶಾಂಗ ನೀತಿ ಹೇಗೆ ತನ್ನ ಸ್ವಂತಿಕೆಯನ್ನು ಕಳೆದುಕೊಳ್ಳುವುದು ಅನಿವಾರ್ಯವೆಂದು ಅರ್ಥವಾಗುತ್ತದೆ.

ಹೀಗಿದ್ದೂ ಶ್ರೀ ಎ. ಪಿ. ಜೆ. ಅಬ್ದುಲ್ ಕಲಾಂ ಅವರ ಉಮೇದುವಾರಿಕೆಗೆ ವಿರೋಧ ವ್ಯಕ್ತಿಗತವಾದುದಲ್ಲ. ಒಬ್ಬ ದೇಶೀಯ ಅಂದರೆ ಸಂಘಪರಿವಾರದ ದೃಷ್ಟಿಯ ''ಭಾರತೀಯ'' ಮುಸ್ಲಿಂ ಸಜ್ಜನರನ್ನು ಪುರಸ್ಕರಿಸಿ ಭಾಜಪ ಕೋಮುವಾದದ ರಾಜಕೀಯ ಲಾಭ ಪಡೆಯುವುದು ಸಾಧ್ಯವಿಲ್ಲ. ಮುಸ್ಲಿಂ ಜನಾಂಗ ಭಾಜಪದಿಂದ ಅನುಭವಿಸಿರುವ ಅಳಲು ಅಷ್ಟು ಸುಲಭವಾಗಿ ಅಡಗುವಂಥದಲ್ಲ. ಶ್ರೀ ಕಲಾಂರನ್ನು ಪುರಸ್ಕರಿಸಿ ಅದರಿಂದ ಉದ್ಭವಿಸುವ ಲಾಭಕ್ಕೆ ಭಾಜಪದವರು ಏಕೈಕ ಹಕ್ಕುದಾರರಲ್ಲ. ಅದು ಜನತೆ ಆತನಿಗೆ ನೀಡುವ ಗೌರವ, ಪ್ರೀತಿ, ಆದರ. ಕಲಾಂ ಅವರು ಮಿಲಿಟರಿ ತಂತ್ರಜ್ಞನಾಗಿ ಬಾಂಬು, ಕ್ಷಿಪಣಿಗಳನ್ನು ನಿರ್ಮಿಸಬಹುದೇ ವಿನಾ ಅವುಗಳ ರಾಜಕೀಯ ಅರ್ಥ, ವಿದೇಶಾಂಗ ನೀತಿಯ

*(೬ ನೇ ಪುಟಕ್ಕೆ)*

# ಕ್ರೀಡೆಯೋ ದೊಂಬಿಯೋ ?

ಕ್ರೀಡೆಗಳು ಮೈತ್ರಿಯನ್ನು ವರ್ಧಿಸುತ್ತವೆ, ಪರಸ್ಪರ ಸ್ನೇಹಪರತೆ ಬೆಳೆಯಲು ವಿಭಿನ್ನ ದೇಶಗಳಿಗೆ ಸಹಾಯ ಮಾಡುತ್ತವೆ, ಸ್ಪರ್ಧೆಯಲ್ಲಿ ಗೆಲ್ಲುವುದಕ್ಕಿಂತ ಆಟದಲ್ಲಿ ಪಾಲ್ಗೊಳ್ಳುವುದು ಹೆಚ್ಚು ಮಹತ್ವದ್ದು ಎಂಬ ತಿಳುವಳಿಕೆ ನೀಡುತ್ತವೆ, ಮುಂತಾಗಿ ಪ್ರತಿಯೊಂದು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಕ್ರೀಡಾ ಸ್ಪರ್ಧೆಗಳ ಸಂದರ್ಭದಲ್ಲಿ ಯಾಂತ್ರಿಕವಾಗಿ ಹೇಳುವುದು ರೂಢಿಯಲ್ಲಿದೆ. ಇದು ನಿಜವಲ್ಲವೆಂದು ಹೇಳುವವರಿಗೂ ಗೊತ್ತು, ಆದರೂ ಹೇಳುವುದು ಕೇವಲ ತಮ್ಮ ಕರ್ತವ್ಯವೆಂಬಂತೆ ಹೇಳುತ್ತಿರುತ್ತಾರೆ. ಹಾಗೆ ನೋಡಿದರೆ ಈ ಮಾತು ಪ್ಲೇಟೋ ಹೇಳುವ ''ಅನುಕೂಲಕರ ಸುಳ್ಳು'' ಎಂದು ಸಹ ಎನಿಸಿಕೊಳ್ಳಲಾರದು. ಈ ಸ್ಪರ್ಧೆಗಳಲ್ಲಿ ಮೈತ್ರಿಭಾವನೆ ಯಾವರ್ಥದಲ್ಲೂ ಹೆಚ್ಚಾಗುತ್ತಿಲ್ಲವೆಂದು ತಿಳಿದೂ ನಾವೇಕೆ ಅದನ್ನು ಒಪ್ಪಿಕೊಳ್ಳುತ್ತಿಲ್ಲವೆಂಬುದಕ್ಕೆ ವಿವರಣೆ ಅನಗತ್ಯ. ಎಲ್ಲಾ ಮುಗಿದ ಮೇಲೆ ಇನ್ನು ನಾಲ್ಕು ವರ್ಷಗಳ ನಂತರ ಮತ್ತೆ ಭೇಟಿಯಾಗೋಣ ಎಂಬ ಘೋಷಣೆಯಲ್ಲಿ ಮಾತ್ರವೇ ಸ್ವಲ್ಪ ಸ್ನೇಹದ ಭಾವನೆ ಕಂಡುಬರಬಹುದು.

ಈಚೆಗೆ ನಡೆದ ವಿಶ್ವ ಕಾಲ್ಚೆಂಡು ಸ್ಪರ್ಧೆಗಳ ಸಂದರ್ಭದಲ್ಲಿ ಅರ್ಜೆಂಟೈನಾದ ಗೋಲಿ ಒಂದು ಮಾತು ಹೇಳಿದ್ದ: ''ಬ್ರಿಟನ್ ಮೇಲಿನ ಪಂದ್ಯವೆಂದರೆ ನಮಗೆ ಯುದ್ಧಕ್ಕೆ ಸಮಾನ; ಆದ್ದರಿಂದ ಆ ಹುಮ್ಮಸ್ಸಿನಿಂದಲೇ ಆಡುತ್ತೇವೆ.'' ಈ ಮಾತಿನಲ್ಲಿ ಸ್ನೇಹ-ಸದ್ಭಾವನೆಯನ್ನು ಎಲ್ಲಿ ಹುಡುಕುವುದು ? ಜಪಾನ್ ಮತ್ತು ರಷ್ಯಾ ಪಂದ್ಯದ ಪರಿಣಾಮವಾಗಿ ಮಾಸ್ಕೋದಲ್ಲಿ ಹಿಂಸಾಚಾರ ಭುಗಿಲೆದ್ದಿತು. ಯುದ್ಧದಲ್ಲಿ ಸೋತು ಜಪಾನಿಗೆ ಶರಣಾದೆವೇನೋ ಎಂಬ ಭಾವನೆ ಇದ್ದಿರಬೇಕು ! ಸಮಾಜವಾದಿ ವ್ಯವಸ್ಥೆ ಕುಸಿಯುತ್ತಿದ್ದಾಗ ಬೀದಿಗೆ ಬರದಿದ್ದ ಜನ ರಷ್ಯಾ ಒಂದು ಪಂದ್ಯದಲ್ಲಿ ಸೋತಾಗ ರೊಚ್ಚಿಗೆದ್ದರು ! ಇನ್ನು ಭಾರತ-ಪಾಕಿಸ್ತಾನಗಳು ಆಡುವ ಯಾವ ಪಂದ್ಯ ತಾನೆ ಸ್ವಾಭಾವಿಕ ರಂಜನೆ ನೀಡುತ್ತದೆ ? ನೀವು ಕ್ರಿಕೆಟ್ಟಿನಲ್ಲಿ ಗೆಲ್ಲಿ, ನಾವು ಯುದ್ಧದಲ್ಲಿ ಗೆಲ್ಲುತ್ತೇವೆ ಎಂದು ಭಾರತೀಯರು ಪಾಕಿಸ್ತಾನದವರಿಗೆ ಹೇಳುತ್ತಿದ್ದಾರೆಂಬ ವಾತಾವರಣವೇ ಇರುತ್ತದೆ. ಪಾಕಿಸ್ತಾನದ ಪರ ಆಡಿದವರು ಯಾರನ್ನಾದರೂ ಭಾರತೀಯರು ಮೆಚ್ಚಿಕೊಂಡರೆಂದರೆ ಅದು ರಾಷ್ಟ್ರಪ್ರೇಮದ ಅಭಾವದ ಸೂಚನೆಯೆಂದು ಬಹಿರಂಗವಾಗಿಯೇ ಹಲವು ಸ್ವಯಂಘೋಷಿತ ನಾಯಕರು ಹೇಳುವುದುಂಟು. ವೆಸ್ಟ್ ಇಂಡೀಸ್‌ನವರು ಆಟವನ್ನು ಸವಿಯುತ್ತಾರಾದ್ದರಿಂದ ಅವರೇ ಗೆಲ್ಲಬೇಕೆಂದು ಬಯಸುವುದು ಸಹ ಭಾರತೀಯರಿಗೆ ಸಾಧುವಲ್ಲವೆಂಬ ಅಭಿಪ್ರಾಯವಿದೆ.

ಬ್ರೆಜಿಲ್ ಮತ್ತು ಚೀಣಾದ ನಡುವೆ ನಡೆದ ಈಚಿನ ಪಂದ್ಯವನ್ನು ವೀಕ್ಷಿಸುತ್ತಿದ್ದಾಗ ಅನೇಕ ಭಾರತೀಯರಿಗೆ ಇಬ್ಬಂದಿತನ ಉಂಟಾಗಿದ್ದರೆ ಆಶ್ಚರ್ಯವಿಲ್ಲ. ಪೆಲೆ ದೇಶವಾದ್ದರಿಂದ ಬ್ರೆಜಿಲ್ ಗೆಲ್ಲಬೇಕೆಂದು ಆಶಿಸುವವರಲ್ಲಿ ಕೆಲವರಾದರೂ ಭಾವನಾತ್ಮಕವಾಗಿ ಸಮಾಜವಾದಿ ರಾಷ್ಟ್ರವೆನ್ನಲಾದ ಚೀಣಾ ಗೆಲ್ಲಬೇಕೆಂಬ ಆಸೆಯನ್ನು ಇಟ್ಟುಕೊಂಡಿದ್ದಿರಬೇಕು. ಬ್ರಿಟನ್ ಯಾರ ಮೇಲೇ ಆಡಲಿ ಅವರು ಸೋಲಬೇಕೆಂಬ ಆಸೆಯೂ ಕೆಲವರಿಗಿರುತ್ತದೆ. ಆಟದ ಮೊದಲಲ್ಲೇ ಪ್ರೇಕ್ಷಕ ಒಂದು ರೀತಿಯ ಸಮೀಕರಣ ಸಾಧಿಸಿಕೊಂಡು ಬಿಡುತ್ತಾನೆ. ಯಾರು ಚೆನ್ನಾಗಿ ಆಡುತ್ತಾರೋ ಅವರು ಗೆಲ್ಲಲಿ ಎಂಬುದು ಭಾಷಣ ಮಾಡುವುದಕ್ಕೆ ಮಾತ್ರ; ಆಂತರ್ಯದಲ್ಲಿ ಇವನು ಗೆಲ್ಲಲಿ, ಈ ದೇಶ ಗೆಲ್ಲಲಿ ಎಂಬ ಭಾವನೆ ದಟ್ಟವಾಗಿಯೇ ಇರುತ್ತದೆ.

ಕೆಲವೊಮ್ಮೆ ಆಟಗಾರರೇ ಸ್ವತಃ ಅವರ ದೇಶಗಳೊಡನೆ ವಿಶೇಷವಾದ ಆತ್ಮೀಯತೆಯನ್ನು ಬೆಳೆಸಿಕೊಂಡಿರುವುದಿಲ್ಲ. ಅವರಾಯಿತು ಅವರ ಹಣ ಗಳಿಕೆಯಾಯಿತು ಎಂಬ ಮನೋಭಾವ ತಳೆದಿರುತ್ತಾರೆ. ಗೆದ್ದಾಗ ಅವರ ದೇಶದ ಬಾವುಟ ಹಿಡಿದುಕೊಂಡು ಛಾಯಾಚಿತ್ರ ತೆಗೆಸಿಕೊಳ್ಳಲು ಕೂಡ ಅವರು ಒಂದಿಷ್ಟು ಹಣ ಕೇಳಿ ಪಡೆಯುತ್ತಾರೆ. ದೇಶದ ಬಗೆಗಿನ ಅವರ ಒಲವು ಅಷ್ಟು ಗಹನವಾದ್ದು ! ಹಣ ಗಳಿಸುವ ಸಾಮರ್ಥ್ಯ ಬಂದ ಮೇಲೆ ಎಲ್ಲ ಜಾಹಿರಾತುಗಳಲ್ಲೂ ಅವರೇ ಇರಬೇಕು ಮತ್ತು ನಾಗರಿಕರಿಗೆ ತೆರಿಗೆ ಕೊಡುವಂತೆ ಸೂಚಿಸುವ ಅಧಿಕಾರವೂ ಅವರಿಗೆ ಬಂದಿರುತ್ತದೆ. ಹಾಗೆ ಹೇಳಲು ಹಣ ಪಡೆಯುವ ಈ ಉಗ್ರ ರಾಷ್ಟ್ರಭಕ್ತರು ತಾವೇ ತೆರಿಗೆ ಪಾವತಿ ಮಾಡುವುದಿಲ್ಲ. ದೇಶಭಕ್ತಿಯ ಎಲ್ಲ ಕ್ಷೇತ್ರಗಳಲ್ಲೂ ಉಪದೇಶ ನೀಡಲು ಕ್ರೀಡಾಪಟುಗಳನ್ನು ಒಲೈಸಲಾಗುತ್ತದೆ. ಅವರ ಮಾತಿನಿಂದಲೇ ದೇಶವನ್ನು ಪ್ರೀತಿಸಲು ಕಲಿತ ಒಬ್ಬನೇ ವ್ಯಕ್ತಿ ಕೂಡ ನಮಗೆಲ್ಲೂ ಸಿಗುವುದಿಲ್ಲ.

ಈ ರೀತಿಯ ಕ್ರೀಡಾ ಸ್ಪರ್ಧೆಗಳು ನಡೆಯಬಾರದೆಂದು ಇದರರ್ಥವಲ್ಲ. ನಡೆಯಲಿ ಮತ್ತು ನಾವದನ್ನು ನೋಡಿ ನಲಿಯೋಣ; ನಾವೂ ಒಂದು ದೇಶದ ಆಟಗಾರರ ಪರ ವಹಿಸಿಯೇ ಆಟವನ್ನು ನೋಡಿ ಆನಂದಿಸಲು ಅಡ್ಡಿಯಿಲ್ಲ. ಅವರು ಸೋತರೆಂದು ನಮ್ಮೂರಿನಲ್ಲಿ ದಾಂಧಲೆ ನಡೆಸುವುದರಲ್ಲಿ ಮಾತ್ರ ಅರ್ಥವಿಲ್ಲ. ನಮ್ಮ ರಾಜ್ಯ ಇನ್ನೊಂದು ರಾಜ್ಯವನ್ನೆದುರಿಸುವಾಗ ನಮ್ಮದು ಸ್ಥಳೀಯ ದೇಶಭಕ್ತಿ; ಬೇರೆ ದೇಶದೊಡನೆ ಅಂತಹ ಆಟ ನಡೆದಾಗ ಅದು ರಾಷ್ಟ್ರೀಯ ಮಟ್ಟದ ಭಕ್ತಿಯಾಗುತ್ತದೆ. ಜೊತೆಗೆ ಕರಿ, ಬಿಳಿ, ಹಳದಿ ಚರ್ಮದವರಲ್ಲಿ ಯಾರು ಗೆಲ್ಲಬೇಕೆಂಬ ಆಯ್ಕೆಯೂ ಇರುತ್ತದೆ. ಭಾರತೀಯರಿಗೆ ಕ್ಯಾಮರೂನ್ ಬಹಳ ಹತ್ತಿರವೇನೂ ಅಲ್ಲ; ಆದರೆ ಆ ದೇಶ ಗೆದ್ದರೆ ಕೆಲವರಿಗೆ ಏನೋ ನೆಮ್ಮದಿ ! ಅಮೆರಿಕಾ ಗೆದ್ದರೆ ನೆಮ್ಮದಿ ಅನುಭವಿಸುವವರೂ ಇರಬಹುದು, ಅಲ್ಲವೆ ?

ಇದರಲ್ಲಿ ಇನ್ನೊಂದು ಸ್ವಾರಸ್ಯವಿದೆ: ಈ ಹನ್ನೊಂದು ಮಂದಿಯೇ ಏಕೆ ಇಡೀ ರಾಷ್ಟ್ರದ ಪ್ರತೀಕವಾಗಿಬಿಡುತ್ತಾರೆ ? ಅವರೇ ಅತಿ ಶ್ರೇಷ್ಠರೆಂದು ತಿಳಿದುಬಂದದ್ದು ಹೇಗೆ ? ಅವರ ಆಯ್ಕೆಯಲ್ಲಿ ಏನೇನೋ ರಾಜಕೀಯ ನಡೆಯುತ್ತದಂತಲ್ಲಾ, ಅದು ನಿಜವಲ್ಲವೇ ? ಹೀಗಿರುವಾಗ ಆ ಹನ್ನೊಂದು ಜನ ಇಡೀ ದೇಶದ ಕೆಚ್ಚು, ಹೆಮ್ಮೆಗಳನ್ನು ಪ್ರತಿನಿಧಿಸುತ್ತಾರೆಯೆ ? ಒಬ್ಬ ಪ್ರಧಾನಮಂತ್ರಿಯನ್ನು ಬೇಕಾದರೆ ಹೀಯಾಳಿಸಬಹುದು, ಆದರೆ ಒಬ್ಬ ತೆಂಡೂಲ್ಕರ್, ಒಬ್ಬ ಮರಡೋನಾ, ಒಬ್ಬ ಜಿದಾನೆ, ಒಬ್ಬ ಬೆಕ್ಹ್ಯಾನಮ್ ಮಾತ್ರ ಅದರಿಂದ ಮುಕ್ತರು ! ಕ್ರೀಡಾ ಸ್ಪರ್ಧೆಗಳ ವೈಶಿಷ್ಟ್ಯ ಇದೇ ಎಂದು ತೋರುತ್ತದೆ. ಇತರೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿಷಯಗಳಲ್ಲಿ ರಾಷ್ಟ್ರದ ಹಿತವನ್ನು ಗಂಭೀರವಾಗಿ ಪರಿಗಣನೆಗೆ ತೆಗೆದುಕೊಳ್ಳದವರು ಕೂಡ ಕ್ರೀಡೆಗೆ ಸೀಮಿತವಾದಂತೆ ವಿಪರೀತ ದೇಶಭಕ್ತಿ ಪ್ರದರ್ಶಿಸಿಬಿಡುತ್ತಾರೆ. ಆ ಅರ್ಥದಲ್ಲಿ ಕ್ರೀಡೆಗಳು ಒಂದು ತರಹದ ಸಮಾನತೆಯನ್ನು ಕಲ್ಪಿಸಿಕೊಡುತ್ತವೆ. ಅದನ್ನೇಕೆ ಬೇಡವೆನ್ನಬೇಕು ?


ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎ : ೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎ : ೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎ : ೪೨೪೩೦೨

(೪ನೇ ಪುಟದಿಂದ)

ಪರಿಣಾಮಗಳು ಅವರಿಗೆ ನಿಲುಕುವ ವಿಷಯಗಳಲ್ಲ. ಅದರ ಮೌಲ್ಯಮಾಪನ ನಾಡಿನ ರಾಜಕೀಯ ಪ್ರಕ್ರಿಯೆ, ಶಾಸನ ಸಭೆ, ಇತರ ಮುತ್ಸದ್ದಿಗಳ ಜವಾಬ್ದಾರಿಯಾಗುತ್ತದೆ. ಕ್ಷಿಪಣಿ ಮತ್ತು ಬಾಂಬುಗಳ ತಯಾರಿಕೆಯಿಂದ ಆಗುವ ರಾಜಕೀಯ ಲಾಭ-ನಷ್ಟಗಳಿಗೆ ಶ್ರೀ ಕಲಾಂರು ಜವಾಬ್ದಾರರಲ್ಲ. ಅದು ಆಳುವ ಸರ್ಕಾರದ್ದು. ಆದರೆ ಇಂದು ಶ್ರೀ ಕಲಾಂರು ರಾಷ್ಟ್ರಾಧ್ಯಕ್ಷರಾಗಿ, ಅಂಥ ಲಾಭ-ನಷ್ಟಗಳಿಗೂ ಜವಾಬ್ದಾರರಾಗುವ ರಾಜಕೀಯ ವ್ಯಕ್ತಿಯಾಗುತ್ತಾರೆ. ಅವರು ಜನತೆಯ ನೇರ ವಿಮರ್ಶೆಗೆ ಗುರಿಯಾಗುವುದು ಅನಿವಾರ್ಯವಾಗುತ್ತದೆ. ಈ ವಿಮರ್ಶೆ ಒಂದು ರಾಜಕೀಯ ಅಗತ್ಯವೂ ಹೌದು.

ರಾಷ್ಟ್ರಾಧ್ಯಕ್ಷರು, ಬೆಳೆಯುತ್ತಿರುವ ರಾಜಕೀಯ ಅಸ್ಥಿರತೆಯ ಸಂದರ್ಭಗಳಲ್ಲಿ ಮಧ್ಯಸ್ಥಿಕೆ ವಹಿಸಿ ರಾಷ್ಟ್ರಹಿತವನ್ನು ಸಾಧಿಸುವ ರೀತಿಯಲ್ಲಿ ರಾಜಕೀಯ ಚಾಣಾಕ್ಷತೆಯನ್ನು ಪ್ರದರ್ಶಿಸಬೇಕಾಗುತ್ತದೆ. ಪ್ರಯೋಗಶಾಲೆಯ ವೈಜ್ಞಾನಿಕ ಶಿಸ್ತಿನಲ್ಲಿ ತಂತ್ರಜ್ಞಾನವನ್ನು ರೂಢಿಸುವಾಗ ಅಪೇಕ್ಷಿಸುವ ಸಾಮರ್ಥ್ಯ ಈ ಮೇಲಿನ ರಾಜಕೀಯ ಸಂದರ್ಭಗಳಲ್ಲಿ ಅಗತ್ಯವಿರುವ ಸಾಮರ್ಥ್ಯಕ್ಕಿಂತ ತೀರ ವಿಭಿನ್ನವಾದುದು. ಅವರ ಆತ್ಮಕಥೆಯಲ್ಲಾಗಲೀ, ಅವರ ಇಂಡಿಯಾ-೨೦೨೦ ಕೃತಿಯಲ್ಲಾಗಲೀ ಆಡಳಿತದಲ್ಲಿ ವೈಜ್ಞಾನಿಕ ಶಿಸ್ತು ಇದ್ದರೆ ಏನೆಲ್ಲಾ ಸಾಧಿಸಬಹುದೆಂಬ ಸದಾಶಯಗಳು, ಮಹತ್ವಾಕಾಂಕ್ಷೆಗಳು ಅಡಗಿವೆ, ನಿಜ. ಆದರೆ ಹದಗೆಟ್ಟ ಪ್ರಸಕ್ತ ರಾಜಕೀಯ ಸನ್ನಿವೇಶದಲ್ಲಿ ನೈಜವಾದ ಅಧಿಕಾರವಿಲ್ಲದ ರಾಷ್ಟ್ರಪತಿ ಕಲಾಂ ಅವುಗಳ ಸಾಧನೆಗೆ ಏನು ತಾನೇ ಮಾಡಿಯಾರು ! ಇಲ್ಲಿ ವೈಚಾರಿಕತೆಯ ಸರ್ವಾಧಿಕಾರ ಸಾಧ್ಯವಿಲ್ಲ. ಸಮರ್ಥವಾಗಿ ಆಳಲಾರದೆ ತೊಳಲುತ್ತಿರುವ ಅನುಭವೀ ರಾಜಕಾರಣಿ ಶ್ರೀ ವಾಜಪೇಯಿ, ಶ್ರೀ ಕಲಾಂ ಅವರನ್ನು ತಾವಾಗೇ ಸೂಚಿಸಿದರೇ ಎಂಬ ಚರ್ಚೆಯೂ ಎದ್ದಿದೆ. ತನ್ನ ಸರ್ಕಾರ ಉಳಿಸಿಕೊಳ್ಳಲು ಏನೆಲ್ಲಾ ತಂತ್ರ ಹೂಡುತ್ತಿರುವ ಪ್ರಧಾನಿ ಟಿಡಿಪಿ ರಾಜಕೀಯದ ಇಕ್ಕಟ್ಟಿಗೆ ಸಿಕ್ಕಿ ಶ್ರೀ ಕಲಾಂ ಅವರನ್ನು ಒಪ್ಪಿಕೊಂಡಿರುವರೇ ಎಂಬ ಸಂದೇಹ ಪರಿಹಾರವಾಗದೇ ಹಾಗೇ ಉಳಿಯಬಹುದು. ಸ್ವತಂತ್ರ ಮನೋಭಾವನೆಯ, ವಿಚಾರವಾದಿ ತಂತ್ರಜ್ಞ ಅಧ್ಯಕ್ಷರಿಂದ ಆಡಳಿತದಲ್ಲಿ ಸ್ವತಂತ್ರ ಪ್ರವೃತ್ತಿ ತೋರಿಬಂದಾಗ, ಮುಂಬರುವ ದಿನಗಳಲ್ಲಿ ಪ್ರಧಾನಿ ಮತ್ತು ಅಧ್ಯಕ್ಷರ ನಡುವೆ ಅನೇಕ ಅಹಿತಕರ ಪ್ರಸಂಗಗಳು ತಲೆದೋರಬಹುದು. ನಾಡಿನ ಇಂದಿನ ಅಸ್ಥಿರ ಪರಿಸ್ಥಿತಿಯಲ್ಲಿ ಈ ಸಂಘರ್ಷಗಳು ಖಂಡಿತ ಅನಿವಾರ್ಯವಲ್ಲ. ಭಾಜಪಕ್ಕೆ ಶ್ರೀ ಕೆ. ಆರ್. ನಾರಾಯಣನ್ ಅವರ ನವಿರಾದ ವಿಮರ್ಶೆಗಳನ್ನೇ ಸಹಿಸಲಾಗಲಿಲ್ಲವೆಂಬುದನ್ನು ಮರೆಯಲಾಗದು. ಶ್ರೀ ಕಲಾಂ ಅವರನ್ನು ಎನ್.ಡಿ.ಎ. ಸರ್ಕಾರ ರಕ್ಷಣಾ ಮಂತ್ರಿಯನ್ನಾಗಿಸುವ ಧೈರ್ಯ ತೋರಲಿಲ್ಲವೆಂಬುದನ್ನು ಗಮನಿಸಬೇಕು. ಅವರು ಹೆಚ್ಚೆಂದರೆ ವೈಜ್ಞಾನಿಕ ಸಲಹಾಕಾರರಾಗಬಹುದು ಎಂದು ಅವರಿಗೇ ತಿಳಿದಿದೆ. ಹಾಗಿರುವಾಗ ಅವರನ್ನು ನಾಡಿನ ಪ್ರಧಾನ ದಂಡನಾಯಕರನ್ನಾಗಿಸಲು ಹೊರಟಿರುವುದು ಎಷ್ಟು ಸರಿ ?

ದೇಶದ ರಾಜಕೀಯವನ್ನು ಅರಿತಿರುವ, ಸ್ವಾತಂತ್ರ್ಯ ಹೋರಾಟದ ಪರಂಪರೆಯನ್ನು ಮೈಗೂಡಿಸಿಕೊಂಡು, ಸಾರ್ವಜನಿಕ ಸೇವಾ ತತ್ಪರರಾಗಿರುವ ಶ್ರೀಮತಿ ಕ್ಯಾಪ್ಟನ್ ಲಕ್ಷ್ಮಿ ಸೆಹಗಲ್ ಅವರು ರಾಷ್ಟ್ರಾಧ್ಯಕ್ಷ ಪದವಿಗೆ ಬೇಕಾದ ಅರ್ಹತೆಯನ್ನು ಶ್ರೀ ಕಲಾಂ ಅವರಿಗಿಂತ ಹೆಚ್ಚಾಗಿ ಪಡೆದಿದ್ದಾರೆ. ಹಾಗೆಂದರೆ ಅದು ಶ್ರೀ ಕಲಾಂ ಅವರನ್ನು ಅಗೌರವಿಸಿದಂತೆ ಅಲ್ಲ. ಇದು ಅವರ ಕ್ಷೇತ್ರವಲ್ಲ ಎಂದಷ್ಟೆ ಇದರ ಅರ್ಥ. ಭಾರತದ ಬಹುಮುಖೀ ಸಂಸ್ಕೃತಿಯ ಹಲವು ಆಯಾಮಗಳನ್ನು ತನ್ನ ವ್ಯಕ್ತಿತ್ವದಲ್ಲಿ ಪ್ರತಿನಿಧಿಸುವ ಈಕೆ ಇಲ್ಲಿಯವರೆಗೂ ಅಜಾತಶತ್ರುವೇ. ಆಕೆ ತನ್ನ ಸಮಾಜವಾದಿ ಎಡಪಂಥೀಯ ಒಲವನ್ನು ಪ್ರಕಟಪಡಿಸಿದ್ದರೂ, ಸಮಾಜವಾದದ ಸಮರ್ಥಕ ನೇತಾಜಿಯವರ ಜೀವಂತ ಪ್ರತಿನಿಧಿಯಾಗಿ, ಭಾರತದ ಎಲ್ಲ ಜನತೆಯ ಮುಕ್ತ ಪ್ರೀತಿ ಆದರಗಳನ್ನು ಪಡೆದಿದ್ದಾರೆ. ಸಂಘಪರಿವಾರದವರು ನೇತಾಜಿಯ ರಾಷ್ಟ್ರೀಯತೆಯ ಪರಂಪರೆಗೆ ವಾರಸುದಾರರಾಗಿ (!) ಈಕೆಯನ್ನು ಇದಕ್ಕೆ ವಿರುದ್ಧವಾಗಿ ಇಲ್ಲಿಯವರೆಗೂ ವಿಮರ್ಶಿಸಿಲ್ಲ. ಹೀಗಾಗಿ ಅವರು ಈಕೆಯ ಉಮೇದುವಾರಿಕೆಯನ್ನು ವೈಯಕ್ತಿಕವಾಗಿ ಇಂದು ವಿರೋಧಿಸಲು ಸಾಧ್ಯವಾಗುವುದಿಲ್ಲ. ಆಕೆಯೂ ಶ್ರೀ ಕಲಾಂ ಅವರಷ್ಟೇ ಗೌರವಾನ್ವಿತ ಭಾರತೀಯ ಪ್ರಜೆ ಹಾಗೂ ಅವರಿಗಿಲ್ಲದ ರಾಜಕೀಯ ಪರಿಜ್ಞಾನವನ್ನು ಅರಗಿಸಿಕೊಂಡವರು. ವಿವಿಧ ಕೋಮುಗಳ ಸಮನ್ವಯ ಅವರ ವೈಯಕ್ತಿಕ ಜೀವನ. ನಿರಂತರ ಸೇವೆ ಅವರ ಜೀವನದ ದೀಕ್ಷೆ. ಆದ್ದರಿಂದ ಅಧ್ಯಕ್ಷ ಪದವಿಯ ಉಮೇದುವಾರರ ಗಂಭೀರ ವ್ಯಕ್ತಿತ್ವವನ್ನು ಚರ್ಚಾಸ್ಪದವಾಗಿಸದೆ, ಚುನಾವಣೆ ನಡೆಯಬೇಕಾದ ಈ ಪರಿಸ್ಥಿತಿಯನ್ನು ಅರ್ಥೈಸುವುದು ಸರಿಯಾದ ಮಾರ್ಗ. ಎನ್‌ಡಿಎ ಸರ್ಕಾರ ಎಲ್ಲ ಪಕ್ಷಗಳ ಸಮ್ಮತಿಯನ್ನು ಪಡೆಯಲು ಪ್ರಾಮಾಣಿಕವಾಗಿ ಪ್ರಯತ್ನಿಸಲಿಲ್ಲ. ಈ ಸಂದರ್ಭವನ್ನು ದುರುಪಯೋಗಿಸಿಕೊಂಡು, ತನ್ನ ವಿರುದ್ಧ ಸಜ್ಜುಗೊಳ್ಳುತ್ತಿದ್ದ ಪರ್ಯಾಯ ಸಂಯುಕ್ತ ರಂಗವನ್ನು ವಿಭಜಿಸುವುದು ಅದರ ನಗ್ನ ಉದ್ದೇಶ. ಅದರಲ್ಲೂ ವಾಮ ಪಂಥೀಯರನ್ನು ನಾಡಿನ ರಾಜಕೀಯದ ಮುಖ್ಯ ಸೆಲೆಯಿಂದ ಪ್ರತ್ಯೇಕಿಸುವುದು ಭಾಜಪಕ್ಕೂ, ಬಹುಶಃ ಕಾಂಗ್ರೆಸ್ ಮತ್ತು ಮುಲಾಯಂ ಸಿಂಗ್ ಥರದವರ ಪಕ್ಷಗಳಿಗೂ ಅಗತ್ಯವಾಗಿತ್ತು. ಹಾಗೆಯೇ ಆಳುವ ವರ್ಗಕ್ಕೂ ಜಾರಿಯಲ್ಲಿರುವ ತನ್ನ ಆರ್ಥಿಕ ನೀತಿ ಮತ್ತು ಅಮೆರಿಕಾ ಪರ ವಿದೇಶಾಂಗ ನೀತಿಯನ್ನು ರಕ್ಷಿಸಿಕೊಳ್ಳುವುದು ಅಗತ್ಯವಾಗಿತ್ತು. ಒಮ್ಮೆ ಇದು ಸಾಧ್ಯವಾದಲ್ಲಿ, ಮುಂದೆ ಆಳುವವರು ಭಾಜಪವೋ, ಕಾಂಗ್ರೆಸ್ಸೋ ಎಂಬುದು ಅವರಿಗೆ ಮುಖ್ಯವಲ್ಲ. ಅದಕ್ಕೆಂದೇ ವಾಮ ಪಕ್ಷಗಳು ಈ ನೀತಿಯ ವಿರುದ್ಧ ತಮ್ಮ ಹೋರಾಟದ ನಿರ್ಧಾರವನ್ನು ಪ್ರಕಟಿಸಿರುವುದು ಅವರಿಗೆ ಅನಿವಾರ್ಯವಾಗಿರಬಹುದು. ಈ ಹಾದಿಯಲ್ಲಿ ಮೌಲ್ಯಗಳನ್ನು ಬದಿಗಿಟ್ಟು ರಾಜಿ ಮಾಡಿಕೊಳ್ಳುವ ಅನೇಕ ಪ್ರಕ್ರಿಯೆಗಳ ಭ್ರಮನಿರಸನವೂ ಆಗುತ್ತಿರುವುದು ಒಳ್ಳೆಯ ಪರಿಣಾಮ ಉಂಟುಮಾಡೀತು. ಸಂಯುಕ್ತರಂಗ ರಚನೆ ಅವಕಾಶವಾದವಲ್ಲ.

ಒಂದು ಕುತೂಹಲಕಾರಿ ಅಂಶವೆಂದರೆ ಅಂದು ಶ್ರೀಮತಿ ಗಾಂಧಿ ಮಾಡಿದಂತೆ ಅಧ್ಯಕ್ಷರ ಚುನಾವಣೆಯಲ್ಲಿ ಮತದಾರರು ತಮ್ಮ ಅಂತಃಸಾಕ್ಷಿಯಂತೆ ಮತ ಚಲಾಯಿಸುವ ಅವಕಾಶ ಮಾಡಿಕೊಡಲು ಶ್ರೀ ವಾಜಪೇಯಿಯವರಿಗೆ ಧೈರ್ಯ ವಿದೆಯೇ ? ಕಾರಣ ಅವರು ಶ್ರೀಮತಿ ಸೆಹಗಲ್ ವಿರುದ್ಧ ಪ್ರಾಮಾಣಿಕವಾಗಿ ಯಾವ ವೈಯಕ್ತಿಕ ವಿರೋಧವನ್ನೂ ವ್ಯಕ್ತಪಡಿಸಲು ಸಾಧ್ಯವಾಗದು. ಇಬ್ಬರಲ್ಲಿ ಯಾರು ಚುನಾಯಿತರಾದರೂ ಜನತೆ ಸಂತೋಷಪಡುತ್ತಾರೆ. ಒಮ್ಮೆಯಾದರೂ ವಿಭಜಕ ನೀತಿಯನ್ನು ಕೈಬಿಟ್ಟು ರಾಷ್ಟ್ರೀಯ ಐಕ್ಯತೆಯನ್ನು ಸಾಧಿಸುವ ಈ ಕ್ರಮವನ್ನು ಕೈಗೊಳ್ಳಲು ಶ್ರೀ ವಾಜಪೇಯಿಯವರು ವಿಶೇಷ ಮುತ್ಸದ್ದಿತನವನ್ನು ಪ್ರದರ್ಶಿಸಬೇಕಾಗುತ್ತದೆ. ಕಾರಣ ಶ್ರೀಮತಿ ಸೆಹಗಲ್ ಕೇವಲ ಎಡಪಂಥೀಯರ ಉಮೇದುವಾರರಲ್ಲ, ಅವರಿಗೆ ವಿ. ಪಿ. ಸಿಂಗರೂ, ದೇವೇಗೌಡರೂ, ಚಂದ್ರಶೇಖರ್ ಅವರೂ ಬೆಂಬಲ ವ್ಯಕ್ತಪಡಿಸಿದ್ದಾರೆ. ಆಕೆ ಎಲ್ಲರ ಪ್ರೀತಿ, ಗೌರವ ಪಡೆದ ಪ್ರಪ್ರಥಮ ಮಹಿಳಾ ಉಮೇದುವಾರರು. ರಾಷ್ಟ್ರೀಯ ಐಕ್ಯತೆಯನ್ನು ಬೆಸೆಯಬಲ್ಲ ಸ್ಫೂರ್ತಿದಾಯಕ ವ್ಯಕ್ತಿತ್ವ ಪಡೆದವರು. ತಮ್ಮ ರಾಜಕೀಯ ಜೀವನದಲ್ಲಿ ಒಂದಾದರೂ ಒಳ್ಳೆಯ ದಾಖಲೆ ಪಡೆಯಲು ಶ್ರೀ ವಾಜಪೇಯಿಯವರಿಗೆ ಇದೊಂದು ಸೂಕ್ತ ಸಂದರ್ಭ ಎನ್ನಬಹುದು. ಪ್ರಜಾಪ್ರಭುತ್ವವಾದಿ ವಾಮಪಕ್ಷಗಳು ರಾಷ್ಟ್ರೀಯ ಮುಖ್ಯ ಸೆಲೆಯಿಂದ ಬೇರೆಯಾಗುವ ಪ್ರಮಾದ ಮಾಡುತ್ತಿವೆ ಎಂಬ ಭಾಜಪದ ಕಳಕಳಿ ನಿಜಕ್ಕೂ ಮೆಚ್ಚಬೇಕಾದುದೆ ! ಆದರೆ ಯಾವುದು ಮುಖ್ಯ ಸೆಲೆ ಎಂಬುದೇ ಇಂದಿನ ಪ್ರಶ್ನೆ. ಜಾಗತೀಕರಣ, ಉದಾರೀಕರಣದ, ವಿಶ್ವಬ್ಯಾಂಕ್, ವಿಶ್ವ ಹಣಕಾಸು ಸಂಸ್ಥೆಯ ಸಲಹೆ ಪಡೆದು ಬಜೆಟ್ ಮಾಡುವ ಬಂಡವಾಳಶಾಹಿ ಆರ್ಥಿಕ ನೀತಿ ಮತ್ತು ಅಮೆರಿಕದ ಬೇಹುಗಾರಿಕೆಯ ವಿದೇಶಾಂಗ ನೀತಿ ಮುಖ್ಯ ಸೆಲೆಯೋ ? ಆರ್ಥಿಕ ಸ್ವಾವಲಂಬನೆ ಮತ್ತು ಸ್ವತಂತ್ರ ವಿದೇಶಾಂಗ ನೀತಿಯೋ ? ಕೋಮುವಾದವೋ ? ಬಹುಸಂಸ್ಕೃತಿಯ ರಾಷ್ಟ್ರೀಯ ಐಕ್ಯತೆಯೋ ? ಮುಂಬರುವ ದಿವಸಗಳಲ್ಲಿ ಈ ದ್ವಂದ್ವ ನಿರ್ಣಾಯಕ ಘಟ್ಟವನ್ನು ತಲುಪುವುದರಲ್ಲಿದ್ದು ಈಗಲೇ ಇದರ ಬಗ್ಗೆ ಆತುರದ ಇತಿಶ್ರೀಯ ಅಗತ್ಯವಿಲ್ಲ. ರಾಷ್ಟ್ರಾಧ್ಯಕ್ಷರ ಈ ಚುನಾವಣೆ ಬರಲಿರುವ ಚುನಾವಣೆಗಳ ಮೊದಲ ಅಂಕ. ಏತನ್ಮಧ್ಯೆ ಈ ಚುನಾವಣೆಯಲ್ಲಿ ಯಾರು ಜಯಿಸಿದರೂ, ಅವರು ನಮ್ಮ ರಾಷ್ಟ್ರದ ಎಲ್ಲ ಜನವಿಭಾಗಗಳ ಮನ್ನಣೆಗೆ ಅರ್ಹರು. ಇಬ್ಬರೂ ನಮ್ಮ ನಾಡು ಹೆಮ್ಮೆ ಪಡಬೇಕಾದ ಪ್ರತಿಭಾನ್ವಿತ ವ್ಯಕ್ತಿಗಳೇ.

ಶ್ರೀಕಾಂತ ರಾವ್ ಟಿಪ್ಪಣಿ




**ಕಾಸರವಳ್ಳಿ ಸಂದರ್ಶನ**

ಶ್ರೀ ಗಿರೀಶ್ ಕಾಸರವಳ್ಳಿ ಅವರು ತಮ್ಮ ಸಂದರ್ಶನದಲ್ಲಿ ತುರ್ತುಪರಿಸ್ಥಿತಿ ಮತ್ತು ಸಮಗ್ರ ಕ್ರಾಂತಿಯನ್ನು ಕುರಿತಂತೆ ವ್ಯಕ್ತಪಡಿಸಿರುವ ಕೆಲವು ಅಭಿಪ್ರಾಯಗಳನ್ನು ಕುರಿತು ವಿವರಣೆ ನೀಡಬಯಸುತ್ತೇನೆ.

ಕಳೆದ ಹದಿನೈದು ವರ್ಷಗಳಿಂದ ಅಧಿಕಾರಕ್ಕೆ ಬಂದ ಯಾವ ಪಕ್ಷವೂ ಕಾಂಗ್ರೆಸ್ಸಿಗಿಂತ ಭಿನ್ನವಾಗಿರುವ ಲಕ್ಷಣ ಕಾಣಿಸುತ್ತಿಲ್ಲ ಎಂಬ ಕಾಸರವಳ್ಳಿ ಅವರ ಮಾತು ಒಪ್ಪತಕ್ಕದ್ದು. ತುರ್ತುಪರಿಸ್ಥಿತಿಯ ನಂತರ ಅಂತಹ ಒಂದು ಅವಕಾಶ ಒದಗಿತ್ತು ಎಂಬುದೂ ಸರಿ. ಆದರೆ ಆಗ ಬಂದ ಸರ್ಕಾರಕ್ಕೆ ವ್ಯವಸ್ಥೆಯನ್ನು ಆಮೂಲಾಗ್ರವಾಗಿ ಬದಲಾಯಿಸಲೇಬೇಕೆಂಬ ಆವೇಶ ಇತ್ತು ಎನ್ನುವುದು ಸತ್ಯಕ್ಕೆ ದೂರವಾದ ಮಾತು. ಆದರೆ ಜನತೆಯಲ್ಲಿ ಆ ಆವೇಶ ಇತ್ತು ಎಂಬುದನ್ನು ಒಪ್ಪಿಕೊಳ್ಳಬೇಕು.

ಜಯಪ್ರಕಾಶರು ಈ ಸರ್ಕಾರ ರಚನೆಯ ಪ್ರಕ್ರಿಯೆಯಲ್ಲಿ ಮುಖ್ಯಪಾತ್ರ ವಹಿಸಿದರಾದರೂ, ಈ ಸರ್ಕಾರದಿಂದ ಅವರು ಸಂಪೂರ್ಣ ಕ್ರಾಂತಿಯನ್ನು ನಿರೀಕ್ಷಿಸಿರಲಿಲ್ಲ. ಸರ್ಕಾರ ತಪ್ಪು ದಾರಿ ಹಿಡಿದಾಗ, ಜಯಪ್ರಕಾಶರು ಅದನ್ನು ತಿದ್ದಲು ಯತ್ನಿಸಿದರು. ಪ್ರಧಾನಿ ಮೊರಾರ್ಜಿ ದೇಸಾಯಿ 'ಸರ್ಕಾರದ ಕೆಲಸದಲ್ಲಿ ಹೊರಗಿನವರು ತಲೆ ಹಾಕುವುದು ಸರಿಯಲ್ಲ' ಎಂದು ಗಂಭೀರವಾಗಿಯೇ ಟೀಕೆ ಮಾಡಿದರು. ಈ ಸರ್ಕಾರ ರಚಿಸಿಕೊಡಲು ಕಾರಣರಾದವರಿಗೆ ಸಲ್ಲಬೇಕಾದ ಗೌರವವೇ ಇದು ! ತುರ್ತುಪರಿಸ್ಥಿತಿ ಮುಗಿದ ನಂತರ ರೂಪುಗೊಂಡದ್ದು 'ಎತ್ತು ಏರಿಗೆಳೆಯಿತು, ಕೋಣ ನೀರಿಗೆಳೆಯಿತು' ಸರ್ಕಾರ. ಮುಂದಿನ ಸರ್ಕಾರ ಹೇಗಿರಬೇಕು, ಅದರ ರೂಪುರೇಷೆ, ಗೊತ್ತುಗುರಿ ಏನಿರಬೇಕು ಎಂಬುದನ್ನು ಚರ್ಚೆ ಮಾಡಲೂ ಕಾಲಾವಕಾಶವಿರಲಿಲ್ಲ. ದಿಢೀರೆಂದು ಒಂದು ಸರ್ಕಾರ ರಚಿಸಬೇಕಾಗಿತ್ತು. ಆ ಸರ್ಕಾರ ರಚನೆಯಲ್ಲಿ ಕೂಡಿಕೊಂಡವರಲ್ಲಿ ಒಬ್ಬೊಬ್ಬರದೂ ಒಂದೊಂದು ದೃಷ್ಟಿ. ಹೀಗಾಗಿ ಈ ಸರ್ಕಾರದಲ್ಲಿ ಕೂಡಿದ ಯಾರಿಗೂ ಲೋಕನಾಯಕರ ಸಂಪೂರ್ಣ ಕ್ರಾಂತಿಯನ್ನು ತರುವುದು ಬೇಕಾಗಿರಲಿಲ್ಲ. ಆ ಕಡೆ ಅವರ ಯೋಚನೆಯೂ ಹೋಗಲಿಲ್ಲ. ಅಂದಿನ ಅನೇಕ ವಿದ್ಯಮಾನಗಳು ಸರ್ಕಾರ ಉರುಳಲು ಕಾರಣವಾದುವು. ಹೀಗಾಗಿ ಇದು ಒಂದು ಸರ್ಕಾರ ಅನ್ನಿಸಿಕೊಳ್ಳದೆ ದುಸ್ವಪ್ನ ಎಂಬ ಹೆಸರಿನಿಂದ ಶೋಭಿಸಿತು.

ಜಯಪ್ರಕಾಶರು ಜನತೆಯ ಮುಂದೆ ಸಂಪೂರ್ಣ ಕ್ರಾಂತಿಯ ಭರವಸೆಯನ್ನು ನೀಡಿದ್ದು ನಿಜ. ಆದರೆ ಅವರು ಸಂಪೂರ್ಣ ಕ್ರಾಂತಿಯನ್ನು ಬಲಪಂಥೀಯರನ್ನೂ ಕೂಡಿಕೊಂಡು ಜಾರಿಗೆ ತರಬೇಕೆಂದು ಬಯಸಿರಲಿಲ್ಲ. ಎಡಪಂಥೀಯರನ್ನು ಕೂಡಿಕೊಂಡಿದ್ದರೂ ಅವರ ವಿಚಾರಕ್ಕೆ ಚಾಲನೆ ಬರುತ್ತಿರಲಿಲ್ಲ. ಸಂಪೂರ್ಣ ಕ್ರಾಂತಿ ಜಾರಿಗೆ ಬರಲು ಬೇಕಾದ ಸನ್ನಿವೇಶ ಪೂರ್ಣವಾಗಿ ರಚನೆಯಾಗಲಿಲ್ಲವೆಂಬುದಕ್ಕೆ ಜೆ. ಪಿ. ಕಾರಣರಲ್ಲ. ಸಂಪೂರ್ಣ ಕ್ರಾಂತಿಯ ನಿಖರವಾದ ಗ್ರಹಿಕೆ ಅವರಿಗಿರಲಿಲ್ಲವೆಂದು ಹೇಳುವುದು ಸರ್ವಥಾ ಸರಿಯಲ್ಲ.

*ಬೆಂಗಳೂರು* — ***ಎಚ್. ಎಸ್. ದೊರೆಸ್ವಾಮಿ***

ಕಾಸರಗೋಡು ಜಿಲ್ಲೆಯ ೧೯೫೬ನೆಯ ಇಸವಿಯ ನಂತರ ಇದುವರೆಗೆ ಪ್ರಕಟಗೊಂಡ ಕಲೆ, ಸಾಹಿತ್ಯ, ಸಂಸ್ಕೃತಿ, ಶಿಕ್ಷಣ ಮತ್ತು ಇತರ ಎಲ್ಲಾ ಪ್ರಕಾರಗಳಿಗೆ ಸಂಬಂಧಪಟ್ಟ ಕೃತಿಗಳನ್ನು, ಸಮಗ್ರ ಕೃತಿ ಸಂಪುಟ ಮತ್ತು ಸಂಘ ಸಂಸ್ಥೆಗಳು, ದೇವಸ್ಥಾನಗಳು ವಿಶೇಷ ಸಂದರ್ಭದಲ್ಲಿ ಪ್ರಕಟಿಸಿದ ಸ್ಮರಣ ಸಂಚಿಕೆಗಳನ್ನು ಸಂಗ್ರಹಿಸಿ, ಕಾಸರಗೋಡು ಜಿಲ್ಲೆಯ ಕನ್ನಡ ಲೇಖಕರ – ಕಲಾವಿದರ ವಿಳಾಸದ ಡೈರೆಕ್ಟರಿ (ನಿರ್ದೇಶಿಕೆ) ಮತ್ತು ಗ್ರಂಥ ಸೂಚಿಯನ್ನು, ಕಾಸರಗೋಡಿನ ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನ ಮತ್ತು ಕಾಸರಗೋಡು ಕರ್ನಾಟಕ ಪಬ್ಲಿಕೇಷನ್ಸ್ ಸಂಸ್ಥೆಯು ಪ್ರಕಟಿಸಲು ನಿರ್ಧರಿಸಿದೆ. ಸಂಬಂಧಪಟ್ಟ ಲೇಖಕರು, ಸಾಹಿತಿಗಳು ಮುಂತಾದವರೆಲ್ಲರ ಸಹಾಯ ಸಹಕಾರವನ್ನು ಕೋರಲಾಗಿದೆ.

ಸಂಪರ್ಕ ವಿಳಾಸ : ಶಿವರಾಮ ಕಾಸರಗೋಡು, ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನ, ಪಾರೆಕಟ್ಟೆ ರಸ್ತೆ, ಅಂಚೆ : ರಾಮದಾಸ ನಗರ, ಕಾಸರಗೋಡು - ೬೭೧ ೧೨೧

*ಕಾಸರಗೋಡು* — ***ಶಿವರಾಮ ಕಾಸರಗೋಡು***




**ಬದುಕಲಾಗದ ಬಾಳು**

ಮನುಷ್ಯ - ಮನಸ್ಸುಗಳ ನಡುವಿನ ಸಂಬಂಧವನ್ನು ಬಡತನದಿಂದ ಅಳೆದು ಪ್ರೀತಿಯನ್ನು ಬದುಕಿನ ಅತ್ಯಂತ ಉತ್ಕಟವಾದ ಆದರ್ಶ ಸಂಬಂಧವೆಂದು ಅರಿಯದೆ, ವಿಷಮ ಅಂತಸ್ತುಗಳಿಂದ ನಿರ್ಮಿತವಾದ ನಮ್ಮ ಸಮಾಜದಲ್ಲಿ ಪ್ರೀತಿಗೆ ನೆಲೆಯಿಲ್ಲವಾಗಿದೆ.

ಬಡತನದ ಗುಂಗಿಗೆ ಸಿಲುಕಿ ''ಧೂಮ''ನ ಗೋಧೂಳಿ ಕೊನೆಯಲ್ಲಿ ತನಗೇ ಗೊಂಟಾಯಿಸಿ ನಿರ್ನಾಮವಾಗುತ್ತದೆ. ಶೇಟ್‌ರವರ ಜೂನ್ ಮಾಸದ ಕತೆ ಮನೋಜ್ಞವಾಗಿ ಮೂಡಿಬಂದಿದೆ.

*ನಾಗಲಮಡಿಕೆ* — ***ಆ. ನಾ. ಚಂದ್ರಶೇಖರ್***

**ಸಂವಿಧಾನ ಪರಾಮರ್ಶೆ**

ಈ ಬಗ್ಗೆ ಮೇ ೨೦೦೨ರ ಸಂಪಾದಕೀಯ ಓದಿದೆ. ಅಲ್ಲಿ ಆಯೋಗದ ಸಮಗ್ರ ವರದಿಯ ಬಗ್ಗೆ ಮಾಹಿತಿ ದೊರೆಯದಿದ್ದರೂ, ಪ್ರಮುಖ ಅಂಶಗಳ ಬಗ್ಗೆ ವಿಮರ್ಶೆ ಮಾಡಿರುವುದು ಸ್ವಾಗತಾರ್ಹ. ಒಟ್ಟಾರೆ ಆಯೋಗದ ವರದಿಯಲ್ಲಿ ದಿಲ್ಲಿಯಲ್ಲಿ ಆಡಳಿತ ನಡೆಸುವವರಿಗೆ, ನರೇಂದ್ರ ಮೋದಿಯಂಥವರಿಗೆ ಮತ್ತು ಒಂದೇ ಉದ್ದೇಶ ಇಟ್ಟುಕೊಂಡು ಸಂವಿಧಾನ ಪರಾಮರ್ಶೆ ಆಯೋಗದ ಸದಸ್ಯತ್ವ ಪಡೆದುಕೊಂಡಿದ್ದವರಿಗೆ, ಕಣ್ಣು ತೆರೆಸಿದಂತಾಗಿದೆ. ಈಗಲಾದರೂ ಸಮಯ ಮೀರುವ ಮುನ್ನ ಎನ್.ಡಿ.ಎ. ಸರ್ಕಾರ ಎಚ್ಚೆತ್ತುಕೊಳ್ಳಲಿ.

*ಗುಲಬರ್ಗಾ* — ***ಡಾ॥ ಚಂದ್ರಕಾಂತ ಯಾತನೂರ***

ಸುಶ್ಮಿತಾ ಬಂದೋಪಾಧ್ಯಾಯ ಅವರ ಬಂಗಾಳಿ ಕಾದಂಬರಿ 'ಕಾಬೂಲಿವಾಲಾನ ಬಂಗಾಳಿ ಹೆಂಡತಿ'ಯನ್ನು ಜಿ. ಕುಮಾರಪ್ಪನವರು ಸುಂದರವಾಗಿ ಪರಿಚಯಿಸಿದ್ದಾರೆ. ಅವರ ಪರಿಚಯ ಬರಹವೇ ಇಡೀ ಕಾದಂಬರಿಯನ್ನು ತೆರೆದಿಟ್ಟಂತಿದೆ.

ರಾಷ್ಟ್ರೀಯ ಗ್ರಂಥಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸುತ್ತಿರುವ ಅವರು, ಒಂದರ್ಥದಲ್ಲಿ ಬಂಗಾಳದಲ್ಲಿನ ಕನ್ನಡ ಸಾಹಿತ್ಯದ ರಾಯಭಾರಿಯೂ ಹೌದು. 'ಕಾಬೂಲಿವಾಲಾನ ಬಂಗಾಳಿ ಹೆಂಡತಿ'ಯನ್ನು ಅನುವಾದಿಸಿ ಕನ್ನಡ ಸಾರಸ್ವತ ವಲಯಕ್ಕೆ ಸಮರ್ಪಿಸಿದರೆ ಅದು ಅವರ ದೊಡ್ಡ ಕೊಡುಗೆಯಾದೀತು.

*ಹೂವಿನ ಹಡಗಲಿ* — ***ಬಿ. ಪೀರ್‌ಬಾಷ***

ಮುದ್ದಾದ ಮುಖಪುಟದೊಂದಿಗೆ ಹೊರಬಂದ ಜೂನ್ ೨೦೦೨ರ 'ಹೊಸತು' ಹಲವು ನವೀನ, ಸಂಪ್ರತ ಲೇಖನ, ವಿಚಾರಗಳೊಂದಿಗೆ ಸಂಗ್ರಹ ಯೋಗ್ಯ ಸಂಚಿಕೆಯೆನಿಸಿತು. ಅದರಲ್ಲೂ ಪ್ರೊ॥ ಟಿ. ಆರ್. ಚಂದ್ರಶೇಖರ್ ಅವರ 'ಕಟ್ಟುವುದು ಮತ್ತು ಕೆಡವಹುವುದು' ಲೇಖನ ಚಿಕ್ಕದಾದರೂ 'ಕಟ್ಟುವ' ಕೆಲಸದಲ್ಲಿ ಇದ್ದೇವೆ ಎಂದು ಭ್ರಮಿಸುವವರಿಗೆ ಚಾಟಿ ಏಟು ನೀಡಿದೆ.

*ಸೇಡಂ* — ***ಅಣ್ಣಾಸಾಗರ್. ಬಿ. ಆರ್.***

**ದೇವಚಂದ್ರನ ಹಾಸ್ಯ ವಿನೋದ**

....ಇಂಥ ಕೀಳು ದರ್ಜೆಯ ಕೃತಿಯನ್ನು 'ಜಾನಪದ' ಸಾಹಿತ್ಯ ಪಟ್ಟಕ್ಕೇರಿಸುವ ಅಭಿರುಚಿಯು ಮೆಲ್ಮಟ್ಟದ್ದಾಗದು. ಜನರ ವಿಶ್ವಾಸದ ಮತ-ಸಂಪ್ರದಾಯಗಳನ್ನು ಲೇವಡಿ ಮಾಡಲೆಂದೇ ಹೊರಟಂಥ ಕೃತಿಯನ್ನು ಹೀಗೆ ಮೆಚ್ಚಲು ಹೋಗಬಾರದು. ಅತ್ಯಂತ ಸ್ವಾಭಾವಿಕವೂ, ರೋಚಕವೂ, ಉದ್‌ಬೋಧಕವೂ ಆದ ಶೈಲಿಯಲ್ಲಿ ನಿರೂಪಿಸಿರುತ್ತಾನೆ ಕೃತಿಕಾರ ಎಂದಿದ್ದೀರಲ್ಲವೆ ? ಹಂಪಿ ವಿಶ್ವವಿದ್ಯಾನಿಲಯ ಈ ಕೃತಿಯನ್ನು ಸಮಾಲೋಚಿಸಲು ಎತ್ತಿಕೊಂಡಿದೆಯಾದರೆ ತುಂಬಾ ಆಶ್ಚರ್ಯ !

*ಸಾಗರ* — ***ಬ. ನಾ. ರಘುರಾಮ***

ಈ ಹಿಂದಿನ ಮೂರು ವರ್ಷಗಳಲ್ಲಿ ನನಗೆ ಬಂದಿರುವ 'ಹೊಸತ'ನ್ನು ಸಂಗ್ರಹಿಸಿಟ್ಟುಕೊಂಡಿದ್ದು, ಅವುಗಳಲ್ಲಿರುವ ಲೇಖನಗಳು ನನಗೆ ಅತ್ಯಂತ ಉಪಯುಕ್ತವಾದ ಮಾಹಿತಿಗಳನ್ನು ಯಾವುದೇ ರೀತಿಯ ಪೂರ್ವಾಗ್ರಹ ಪೀಡಿತವಲ್ಲದ ಸಂಗತಿಗಳನ್ನು ಅಭಿವ್ಯಕ್ತಿಗೊಳಿಸುವುದರಲ್ಲಿ ಸಫಲವಾಗಿವೆ. ಇದಕ್ಕಾಗಿ ತಮಗೆ ಅಭಿನಂದನೆಗಳು ಹಾಗೂ ಕೃತಜ್ಞತೆಗಳು.

*ಹುಣಸೂರು* — ***ಪ್ರೊ॥ ಎಚ್. ಆರ್. ಸಿದ್ದೇಗೌಡ***

***ತಿದ್ದುಪಡಿ***

ಕಳೆದ ಸಂಚಿಕೆಯ 'ಬದುಕಲಾಗದ ಬಾಳು' ಲೇಖಕರ ಹೆಸರು ಎಸ್. ವಿ. ಶೇಟ್ ಎಂದಾಗಿದೆ. ಇದನ್ನು ಎಸ್. ಎಮ್. ಶೇಟ್ ಎಂದು ಓದಿಕೊಳ್ಳಬೇಕಾಗಿ ವಿನಂತಿ.

# ನಮ್ಮ ಪರಂಪರೆಯನ್ನು ಉಳಿಸಿಕೊಡಿ

ಈ ಲೇಖನ ಈಗಾಗಲೇ "ಅನನ್ಯ-ಅಭಿವ್ಯಕ್ತಿ" ಪತ್ರಿಕೆಯಲ್ಲಿ ಪ್ರಕಟವಾಗಿದೆ. ವಿಷಯದ ಪ್ರಸ್ತುತತೆಯ ದೃಷ್ಟಿಯಿಂದ ಇದನ್ನು ಮತ್ತೆ ಇಲ್ಲಿ ಪ್ರಕಟಿಸಲಾಗಿದೆ.

—ಸಂಪಾದಕ

ಇತ್ತೀಚೆಗಷ್ಟೆ ಗುಜರಾತಿನ ಬರೋಡದಲ್ಲಿ ಪ್ರಖ್ಯಾತ ಹಿಂದುಸ್ಥಾನಿ ಸಂಗೀತಗಾರ ಉಸ್ತಾದ್ ಫಯಾಜ್ ಖಾನ್ ಅವರ ಸಮಾಧಿಯ ಮೇಲೆ ದಾಳಿ ಮಾಡಿ ಅದನ್ನು "ಧರ್ಮಾಂಧರು" ಒಡೆದರು ಎಂಬ ಸುದ್ದಿ ಪತ್ರಿಕೆಗಳಲ್ಲಿ ಪ್ರಕಟವಾಯಿತು. ಇದು ನಿಜವಾಗಿ ಕಲಾಪ್ರೇಮಿಗಳಿಗೆಲ್ಲ ಆತಂಕದ ವಿಷಯ. ಯಾಕೆಂದರೆ ಫಯಾಜ್ ಖಾನ್ ಒಬ್ಬ ಮಹಾನ್ ಸಂಗೀತಗಾರ ಎಂಬ ಕಾರಣಕ್ಕಾಗಿ ಮಾತ್ರವಲ್ಲ ಇಂತಹ ದಾಳಿಯ ಹಿಂದಿರುವ ಉದ್ದೇಶ ಕೂಡ ಗಾಬರಿ ಹುಟ್ಟಿಸುವಂತಹುದ್ದೆ. ಈ ಮೂಲಕ ಬಹುಸಾಂಸ್ಕೃತಿಕತೆಯ ತೌರೂರಾದ ಈ ದೇಶದ ಸಂಸ್ಕೃತಿಯ ವ್ಯಾಖ್ಯೆ ಮತ್ತು ಲೆಕ್ಕಾಚಾರಗಳನ್ನೇ ಬದಲಿಸುವ ಗಂಭೀರ ಪ್ರಯತ್ನ ನಡೆಯುತ್ತಿದೆ.

ಭಾರತದಲ್ಲಿ ಸಂಗೀತದ ಇತಿಹಾಸ ಅತ್ಯಂತ ವೈವಿಧ್ಯಮಯವಾದ ಮತ್ತು ಜಾತಿ ಧರ್ಮದ ಕಟ್ಟುನಿಟ್ಟಾದ ಸೀಮಾ ರೇಖೆಗಳನ್ನು ಮೀರಿದ್ದಾಗಿದೆ. ಇಲ್ಲಿನ ಗುರುಶಿಷ್ಯ ಪರಂಪರೆಗಳು, ಘರಾನಗಳು, ವಾಗ್ಗೇಯಕಾರರು, ರಾಜಾಶ್ರಯಗಳಲ್ಲಿ ಅರಳುತ್ತಿದ್ದ ಪ್ರತಿಭೆಗಳು ಹಾಗೂ ಗ್ರಂಥ ರಚನೆಗಳು ಬಹಳಷ್ಟು ಬಾರಿ ಜಾತಿ ಧರ್ಮಗಳ ಸಂಕುಚಿತ ಸೀಮೆಗಳನ್ನು ಮೀರಿಕೊಂಡಂಥ ಘಟನೆಗಳಾಗಿದ್ದವು. ಒಂದರ್ಥದಲ್ಲಿ ಅವುಗಳೆಲ್ಲವೂ ಭಾರತದ ದೈನಂದಿನ ಬದುಕಿನಲ್ಲಿ ಹಾಸುಹೊಕ್ಕಾಗಿದ್ದ ಸಾಮರಸ್ಯದ ಹಾಗೂ ಬಹುಸಾಂಸ್ಕೃತಿಕ ಪರಂಪರೆಗೆ ಒಗ್ಗಿಕೊಂಡಿದ್ದ ಮನಸ್ಸಿನ ಪ್ರತೀಕಗಳಾಗಿದ್ದವು. ಉಸ್ತಾದ್ ಫಯಾಜ್ ಖಾನರು ತಾನಸೇನರ ಶಿಷ್ಯ ಪರಂಪರೆಗೆ ಸೇರಿದವರು. ಭಾರತ ಕಂಡ ಅತ್ಯಂತ ದೊಡ್ಡ ಸಂಗೀತಗಾರರಲ್ಲಿ ಫಯಾಜ್ ಖಾನರ ಹೆಸರು ಕೂಡ ಒಂದು. ದ್ರುಪದ್ ಮತ್ತು ಖ್ಯಾಲ್ ಹಾಡುಗಾರಿಕೆಯಲ್ಲಿ ಅವರದು ಎತ್ತಿದ ಕೈ. ಪ್ರೇಮಪ್ರಿಯ ಎಂಬ ಕಾವ್ಯನಾಮದಲ್ಲಿ ಅವರು ರಚಿಸಿರುವ ಚೀಜುಗಳು ಇಂದಿಗೂ ಕೂಡ ಹಿಂದೂ ಧಾರ್ಮಿಕ ಆಚರಣೆಗಳ, ಹಬ್ಬಹರಿದಿನಗಳ ಅವಿಭಾಜ್ಯ ಅಂಗವಾಗಿದೆ. ೧೯೧೨ರಿಂದ ೧೯೫೦ರಲ್ಲಿ ತಮ್ಮ ನಿಧನದವರೆಗೆ ಬರೋಡದ ಮಹಾರಾಜ ಸಯ್ಯಾಜಿರಾವ್ ಅವರ ಆಸ್ಥಾನದಲ್ಲಿ ಆಸ್ಥಾನ ವಿದ್ವಾಂಸರಾಗಿ ತಮ್ಮ ಬದುಕನ್ನು ಕಳೆದ ಉಸ್ತಾದರು ರಚಿಸಿದ 'ಹೋರಿಗೀತೆ'ಗಳಿಲ್ಲದೆ ಗುಜರಾತಿನ ಹೋಳಿ ಓಕುಳಿಯಾಟಕ್ಕೆ ರಂಗೇರಿದ್ದೇ ಇಲ್ಲ. ಫಯಾಜ್ ಖಾನರು ಕೇವಲ ಒಬ್ಬ ಹಾಡುಗಾರ ಹಾಗೂ ಗುರುವಾಗಿ ಮಾತ್ರವೇ ಉಳಿದಿರಲಿಲ್ಲ. ಶೈಕ್ಷಣಿಕವಾಗಿಯೂ ಅವರ ಕೊಡುಗೆ ತುಂಬಾ ಮಹತ್ವದ್ದಾಗಿತ್ತು. ಬಳಕೆಯಲ್ಲಿಲ್ಲದೇ ಕ್ರಮೇಣ ಕಣ್ಮರೆಯಾಗಿಯೇ ಹೋಗಿದ್ದ ಭಾರತೀಯ ಸಂಗೀತದ ವಿಭಿನ್ನ ರಚನಾ ಪ್ರಾಕಾರಗಳಿಗೆ ಮತ್ತೆ ಜೀವ ಕೊಟ್ಟು, ಹಿಂದುಸ್ಥಾನಿ ಶಾಸ್ತ್ರೀಯ ಸಂಗೀತವನ್ನು ಒಂದು ವ್ಯವಸ್ಥಿತವಾದ ಶಿಸ್ತಿಗೆ ಒಳಪಡಿಸುವಂಥ ವ್ಯಾಪಕವಾದ ಕಾರ್ಯವನ್ನು ವಿಷ್ಣು ನಾರಾಯಣ ಭಾತ್ಖಂಡೆಯವರು ಪ್ರಾರಂಭಿಸಿದಾಗ ಫಯಾಜರು ಉದ್ದಕ್ಕೂ ಅವರ ಜೊತೆಗೆ ಕೆಲಸ ಮಾಡಿದರು. ಪ್ರತಿ ವರ್ಷ ನವೆಂಬರ್ ತಿಂಗಳಿನಲ್ಲಿ ಸಂಗೀತದ ದಿಗ್ಗಜಗಳೆಲ್ಲರೂ ಬರೋಡದಲ್ಲಿ ಫಯಾಜ್ ಖಾನರ ಸಮಾಧಿಯ ಬಳಿ ಅವರ ಪುಣ್ಯ ತಿಥಿಯಂದು ಸೇರಿ ಸಂಗೀತದ ಮೂಲಕವೇ ಇಂಥ ವಿಶಿಷ್ಟವಾದ ಕೊಡುಗೆಗಳಿಗೆ ತಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತಾರೆ. ಪ್ರಖ್ಯಾತ ಹಾಡುಗಾರ್ತಿ ಶುಭಾ ಮುದ್ಗಲ್ ಅವರು ಸಾರ್ವಜನಿಕ ಸಭೆಯೊಂದರಲ್ಲಿ ಮಾತನಾಡುತ್ತಾ "ಈ ದೇಶಕ್ಕೆ ಹಾಗೂ ಸಂಸ್ಕೃತಿಗೆ ಫಯಾಜ್ ಖಾನರ ಕೊಡುಗೆ ಎಂಥದ್ದು ಎಂಬುದು ಸಂಗೀತದ ವಿದ್ಯಾರ್ಥಿಗಳಿಗೆಲ್ಲಾ ತಿಳಿದಿದೆ. ಇಂಥ ವ್ಯಕ್ತಿಯ ಸಮಾಧಿಯ ಮೇಲಾದ ದಾಳಿ ಈ ದೇಶದ ಕಲಾವಿದರನ್ನೆಲ್ಲಾ ದಿಗ್ಭ್ರಾಂತಿಗೊಳಿಸಿದೆ" ಎಂದರು. ಶುಭಾ ಮುದ್ಗಲ್ ಮಾತ್ರವಲ್ಲ, ಭಾರತೀಯ ಸಂಗೀತದ ದಿಗ್ಗಜರೆಲ್ಲಾ ಈ ಘಟನೆಯಿಂದ ಆಘಾತಗೊಂಡರು.

ಹಿಂದುಸ್ಥಾನಿ ಸಂಗೀತದ ಯಾವುದೇ ಘರಾನದಲ್ಲೂ ಕೇವಲ ಒಂದೇ ಧರ್ಮದ ಗುರುಶಿಷ್ಯ ಪರಂಪರೆ ಕಂಡುಬರುವುದಿಲ್ಲ. ಅಮೀರ್ ಖುಸ್ರೋನಿಂದ ಹಿಡಿದು ತೀರಾ ಇತ್ತೀಚಿನ ಮನ್ಸೂರ್ ಮತ್ತು ರವಿಶಂಕರ್‌ವರೆಗಿನ ಈ ವಿಶಿಷ್ಟ ಪರಂಪರೆ ನಡೆದುಬಂದಿದೆ. ದಕ್ಷಿಣದ ಸುಪ್ರಸಿದ್ಧ ಗಾಯಕ, "ರಾಗಕದಂಬ" ಗ್ರಂಥದ ಕರ್ತೃ ಗೋಪಾಲ ನಾಯಕ ಅಲ್ಲಾವುದ್ದೀನ ಖಿಲ್ಜಿಯ ಆಸ್ಥಾನದಲ್ಲಿ ಇದ್ದವನು. ಈತನಿಗೂ ಅಮೀರ್ ಖುಸ್ರೋವಿಗೂ ಗಾಢವಾದ ಮೈತ್ರಿ ಇತ್ತು. ಖುಸ್ರೋ ತನ್ನ ದೇಶದ ರಾಗಗಳನ್ನು ನಮ್ಮ ದೇಶದ ರಾಗಗಳನ್ನೂ ಸಮನ್ವಯ ಮಾಡಿ ಹಲವಾರು ಹೊಸ ರಾಗಗಳನ್ನು ಸೃಷ್ಟಿಸಿದ್ದನು. ಮನ್ಸೂರರು ಸಂಗೀತ ಕಲಿತಿದ್ದು ಜಯಪುರ್ ಅತ್ರೌಲಿ ಘರಾನಾದ ಸುಪ್ರಸಿದ್ಧ ಮುಸಲ್ಮಾನ ಗುರುಗಳಾದ ಮಂಜೀಖಾನ್ ಮತ್ತು ಬುರ್ಜಿಖಾನರಿಂದ. ಮನ್ಸೂರರು ತನ್ನ ಗುರು ತನಗೆ ಅತ್ಯಂತ ಪ್ರೀತಿಯಿಂದ ಸಂಗೀತ ಕಲಿಸುತ್ತಿದ್ದ ಸನ್ನಿವೇಶಗಳನ್ನು ನೆನೆಯುವ ಹೃದಯಸ್ಪರ್ಶಿ ಸಂದರ್ಭಗಳಿವೆ. ತನ್ನನ್ನು ಹೆತ್ತ ಮಗನಂತೆ ಕಾಣುತ್ತಿದ್ದರು ಎನ್ನುವುದನ್ನು ಅವರು ನೆನೆಸುತ್ತಾರೆ.

**ಟಿ. ಎಸ್. ವೇಣುಗೋಪಾಲ್, ಶೈಲಜ**

ಅಂತೆಯೇ ಪಂಡಿತ್ ರವಿಶಂಕರ್ ಅವರ ಗುರು ವಿಶ್ವವಿಖ್ಯಾತ ಅಲ್ಲಾವುದ್ದೀನ್ ಖಾನ್ ಅವರು ಹಾಡುಗಾರಿಕೆಯನ್ನು ಕಲಿತದ್ದು ಬಂಗಾಲದ ಅತ್ಯಂತ ಸಂಪ್ರದಾಯಶೀಲ ಹಿಂದು ಗುರು ನುಲೊಗೋಪಾಲ ಅವರಿಂದ. ಉಸ್ತಾದ್ ಅಲ್ಲಾವುದ್ದೀನ್ ಖಾನರ ಜೀವನಶೈಲಿ ಹಿಂದು ಮತ್ತು ಇಸ್ಲಾಂ ಧರ್ಮಗಳ ಅತ್ಯಂತ ಸುಂದರವಾದ ಅಂಶಗಳ ಹದವಾದ ಮಿಶ್ರಣವಾಗಿತ್ತು ಎಂದು ರವಿಶಂಕರರು ತಮ್ಮ "ಮೈ ಲೈಫ್ ಮೈ ಮ್ಯೂಸಿಕ್" ಕೃತಿಯಲ್ಲಿ ನೆನೆಸಿಕೊಳ್ಳುತ್ತಾರೆ. ಪಂಡಿತರನ್ನು ಸಾಕಿ ಬೆಳೆಸಿ ವಿದ್ಯೆ ಕಲಿಸಿದ್ದೇ ಅಲ್ಲದೆ, ಸ್ವತಃ ತಾವೇ ನಿಂತು ತಮ್ಮ ಮಗಳಾದ ಅನ್ನಪೂರ್ಣಾದೇವಿಯನ್ನು ಅವರಿಗಿತ್ತು ಮದುವೆ ಮಾಡಿದ್ದು ಮತ್ತೊಂದು ಇತಿಹಾಸ. ಪ್ರತಿಯೊಂದು ಘರಾನಕ್ಕೆ ಸಂಬಂಧಿಸಿದಂತೆ ಇಂಥ ಉದಾಹರಣೆಗಳನ್ನು ಕೊಡುತ್ತಾ ಹೋಗಬಹುದು. ದಕ್ಷಿಣದ ತಿರುವೈಯ್ಯಾರಿನ ತ್ಯಾಗರಾಜೋತ್ಸವದಲ್ಲಿ ಸಾಮಾನ್ಯವಾಗಿ ಪ್ರತಿವರ್ಷವೂ ಉತ್ಸವ ಪ್ರಾರಂಭ ಆಗುತ್ತಿದ್ದುದು ಶೇಖ್ ಚಿನ್ನಾ ಮೌಲಾನಾ ಸಾಹೇಬರ ನಾದಸ್ವರ ವಾದನದಿಂದಲೇ.

ಭಾರತೀಯ ಸಂಗೀತಕ್ಕೆ ಬಹು ವಿಶಿಷ್ಟವಾದ ಆಯಾಮಗಳು ದೊರಕಿರುವುದೇ ಇಂಥ ಒಂದು ಕೊಡುಕೊಳ್ಳುವಿಕೆಯಿಂದ. ಇಷ್ಟು ವೈವಿಧ್ಯಮಯವಾದ ಸುಂದರ ರಾಗಗಳು, ಧುನ್‌ಗಳು, ಮಟ್ಟುಗಳು ಈ ಸಂಗೀತಕ್ಕೆ ಸೇರ್ಪಡೆಯಾದದ್ದೇ ಇಂಥ ಒಂದು ಸಾಂಸ್ಕೃತಿಕ ಪರಂಪರೆ ನಮ್ಮಲ್ಲಿ ಇದ್ದುದರಿಂದ. ಅದಿಲ್ಲವಾಗಿದ್ದಲ್ಲಿ ಇಂದು ನಾವು ಅತ್ಯಂತ ಮಂಗಳಕರ ಎಂದು ಭಾವಿಸುವ ಕಲ್ಯಾಣಿ ರಾಗ ನಮ್ಮ ಪಾಲಿಗೆ ಎಲ್ಲಿರುತ್ತಿತ್ತು? ಏಕೆಂದರೆ ಕಲ್ಯಾಣಿ ನಮ್ಮ ದೇಶಕ್ಕೆ ವಿದೇಶದ ಕೊಡುಗೆ. ಬಹುಶಃ ಯವನರ ಬಳುವಳಿ. ಸಂಗೀತಕ್ಕೆ ಆಳವಾದ ಆಧ್ಯಾತ್ಮಿಕವಾದ ಆಯಾಮವನ್ನು ನೀಡಿದವರು ಸೂಫಿ ಸಂತರು. ಸಂಗೀತ ಕೇವಲ ಲೌಕಿಕವೂ ಆಗದೆ ಸಾಮಾನ್ಯನ ಕೈಗೆಟುಕದ ಬಣ ಅಲೌಕಿಕವೂ ಆಗದೆ ಲೌಕಿಕ ಅಲೌಕಿಕಗಳೆರಡೂ ಒಟ್ಟೊಟ್ಟಿಗೆ ಇರುವ ದೈನಂದಿನ ಬದುಕಿನ ಸಾಮರಸ್ಯದ ಸಂಕೇತವೂ ಆಗಿದೆ. ಫಯಾಜ್ ಖಾನರಂಥ ಉತ್ಕೃಷ್ಟ ದರ್ಜೆಯ ಸಂಗೀತಗಾರರ ಸಂಗೀತ-ಸಂಸ್ಕೃತಿಯು ದಿನನಿತ್ಯದ ಬದುಕಿನ ವಿಭಿನ್ನ ಧಾರ್ಮಿಕ ಅಂತರಗಳನ್ನು ಮೀರಿಕೊಳ್ಳುತ್ತಿತ್ತು. ನಮ್ಮ ದೇಶದ ಅತ್ಯುತ್ತಮವಾದ ಸಂಗೀತ ಪರಂಪರೆಗಳೆಲ್ಲವೂ ಅತ್ಯಂತ ವೈವಿಧ್ಯಮಯವಾದ ಧಾರ್ಮಿಕ ಮತ್ತು ಆಧ್ಯಾತ್ಮಿಕ ಪ್ರವೃತ್ತಿಗಳನ್ನೆಲ್ಲಾ ಮೈಗೂಡಿಸಿಕೊಂಡು ನಾಗರಿಕ ಸಹಬಾಳ್ವೆಯ ಪ್ರತೀಕವಾಗಿದ್ದವು. ಹಾಗಾಗಿಯೇ ಆ ಸಂಗೀತವು ಭಾಷೆ ಮತ್ತು ಧರ್ಮಗಳನ್ನು ಮೀರಿದ ಮನುಷ್ಯ-ಮನುಷ್ಯರ ನಡುವಿನ ಮೂಲಭೂತ ಐಕ್ಯತೆಯನ್ನು ಪ್ರತಿನಿಧಿಸುತ್ತಿತ್ತು. ಹಾಗಾಗಿ ಫಯಾಜ್ ಖಾನ್ ಅವರ ಸಮಾಧಿಯ ಮೇಲಾಗಿರುವ ದಾಳಿ ಕೇವಲ ವ್ಯಕ್ತಿಯೊಬ್ಬನ,

ಮುಸ್ಲಿಮನೊಬ್ಬನ ಸಮಾಧಿಯ ಮೇಲಾಗಿರುವ ದಾಳಿಯಲ್ಲ ಎನ್ನುವುದು ಬಹುಮುಖ್ಯ. 'ಬಡೇ ಗುಲಾಂ ಅಲಿಖಾನ್ ಯಾದ್‌ಗಾರ್' ಸಭೆಯ ಮಲ್ಲಿ ಗಿಲಾನಿ ಹೇಳುವಂತೆ ''ಈ ಹಿಂಸಕಾರಿ ಅಂಶಗಳು ನಮ್ಮ ಸಮ್ಮಿಶ್ರ ಸಂಸ್ಕೃತಿಯ ಮತ್ತು ಲಲಿತ ಕಲೆಗಳ ಉಳಿವಿಗಾಗಿ ತಮ್ಮ ಬದುಕನ್ನೇ ಮುಡುಪಾಗಿಟ್ಟಂಥ ಮಹಾನ್ ಕಲಾವಿದರ ಸಮಾಧಿಗಳನ್ನು ನಾಶ ಮಾಡುತ್ತಿದೆ.'' ಇದು ಈ ದೇಶದ ಸಾಮರಸ್ಯದ ಪರಂಪರೆಯ ಮೇಲೆ, ಬಹುಸಾಂಸ್ಕೃತಿಕ ಸಮಾಜದ ಸಹಬಾಳ್ವೆಯ ಮೇಲೆ ಆಗಿರುವ ದಾಳಿ. ಅವಿಭಾಜ್ಯವಾಗಿ ಹೆಣೆದುಕೊಂಡು ಒಟ್ಟೊಟ್ಟಿಗೆ ಹೋಗುತ್ತಿದ್ದ ಬದುಕನ್ನು ಉದ್ದೇಶಪೂರ್ವಕವಾಗಿ ಪ್ರಯತ್ನಪೂರ್ವಕವಾಗಿ ಕಿತ್ತು ಬಿಡಿಸುವ ಪ್ರಯತ್ನವೇ ಆಗಿದೆ. ನಾವು ಭಾರತೀಯರು, ಸಹಬಾಳ್ವೆ ನಡೆಸಿದ ಜನ ಎಂಬುದಕ್ಕೆ ಸಂಬಂಧಿಸಿದ ಎಲ್ಲಾ ಸಂಕೇತಗಳನ್ನು ಇವರು ನಾಶಮಾಡಹೊರಟಿದ್ದಾರೆ.

ಇಂಥ ಸಾಂಸ್ಕೃತಿಕ ಪರಂಪರೆಯನ್ನು ನಾಶ ಮಾಡುವ ಬರ್ಬರ ಕೃತ್ಯವನ್ನು ಮತಾಂಧರು ಜಗತ್ತಿನ ಎಲ್ಲೆಡೆಯೂ ಮಾಡುತ್ತಾ ಬಂದಿದ್ದಾರೆ. ಒಂದು ವರ್ಗ ಅಥವಾ ಸಮುದಾಯಕ್ಕೆ ಸೇರಿದ ಜನಗಳ ವ್ಯಾಪಕ ನರಹತ್ಯೆಯ ಸಂದರ್ಭದಲ್ಲಿ ಸಾಮೂಹಿಕ ಸಾಂಸ್ಕೃತಿಕ ಪರಂಪರೆಯ ಕುರುಹುಗಳನ್ನು ಉದ್ದೇಶಪೂರ್ವಕವಾಗಿ ನಾಶ ಮಾಡುವುದು ಮತಾಂಧರ ಒಂದು ವ್ಯವಸ್ಥಿತ ಯೋಜನೆ. ಈ ಸತ್ಯ ಎರಡನೇ ಮಹಾಯುದ್ಧದ ನಂತರ ವಿಶ್ವ ಸಮುದಾಯದ ಅನುಭವಕ್ಕೆ ಬಂತು. ಹಾಗಾಗಿ ''ಸಾಂಸ್ಕೃತಿಕ ಪರಂಪರೆಗಳನ್ನು'' ರಕ್ಷಿಸುವುದು ಬಹುಮುಖ್ಯ ಎಂಬುದನ್ನು ಅದು ಗ್ರಹಿಸಿತು. ಇದೇ ಉದ್ದೇಶದಿಂದಲೇ ವಿಶ್ವಸಂಸ್ಥೆ ಹಾಗೂ ಮತ್ತಿತರ ಬಹುರಾಷ್ಟ್ರೀಯ ವೇದಿಕೆಗಳು 'ಸಾಂಸ್ಕೃತಿಕ ಆಸ್ತಿಯನ್ನು' ಕಾಪಾಡುವುದಕ್ಕಾಗಿ ಕ್ರಮಗಳನ್ನು ಸೂಚಿಸಲೆಂದು ಸಮಾವೇಶಗಳನ್ನು ನಡೆಸಿತು. ಒಂದಿಷ್ಟು ಒಡಂಬಡಿಕೆಗಳನ್ನು ಮಾಡಿಕೊಂಡಿತು.

೧೯೫೪ರಲ್ಲಿ ಹೇಗ್ ಸಮಾವೇಶದಲ್ಲಿ (ಅಥವಾ ಸಶಸ್ತ್ರ ಕಲಹ ನಡೆದ ಸಂದರ್ಭದಲ್ಲಿ ಸಾಂಸ್ಕೃತಿಕ ಆಸ್ತಿಯನ್ನು ರಕ್ಷಿಸಲು ನಡೆದ ಒಡಂಬಡಿಕೆ) ''ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿಕೊಳ್ಳುವುದು ಜಗತ್ತಿನ ಎಲ್ಲಾ ಜನರ ದೃಷ್ಟಿಯಿಂದಲೂ ತೀರಾ ಮುಖ್ಯವಾದದ್ದು'' ಎಂಬ ಮೂಲತತ್ವವನ್ನು ಎಲ್ಲಾ ಸದಸ್ಯ ರಾಷ್ಟ್ರಗಳೂ ಒಪ್ಪಿಕೊಂಡವು. ''ಸಾಂಸ್ಕೃತಿಕ ಆಸ್ತಿಗೆ ಆದ ಹಾನಿ ಇಡೀ ಮನುಕುಲಕ್ಕೆ ಆದ ಹಾನಿ'', ಹಾಗಾಗಿ ಅದನ್ನು ರಕ್ಷಿಸುವುದು ಎಲ್ಲಾ ರಾಷ್ಟ್ರಗಳೂ ಕರ್ತವ್ಯ ಎಂಬುದನ್ನು ಒಪ್ಪಿಕೊಳ್ಳಲಾಯಿತು.

ಇದು ಯುದ್ಧದ ಸಂದರ್ಭದಲ್ಲಿ ನಡೆದ ಹಾನಿ ಮಾತ್ರ ಎಂದು ಯಾರಾದರೂ ವಾದಿಸುವ ಸಾಧ್ಯತೆಯಿದೆ. ಹಾಗಾಗಿ ೧೯೭೨ರಲ್ಲಿ ನಡೆದ ಯುನೆಸ್ಕೊ ಸಭೆಯಲ್ಲಿ ಸರ್ವಕಾಲಕ್ಕೂ ಅನ್ವಯವಾಗುವಂತಹ ಹೆಚ್ಚು ವಿಶಾಲವಾದ ಒಡಂಬಡಿಕೆಯನ್ನು ಸ್ವೀಕರಿಸಿತು. ಇದು ಹೇಗ್ ಒಪ್ಪಂದವನ್ನು ಒಪ್ಪಿಕೊಳ್ಳುವುದರ ಜೊತೆಗೆ ಅದಕ್ಕಿಂತ ಒಂದು ಹೆಜ್ಜೆ ಮುಂದಿಟ್ಟು 'ಸಾಂಸ್ಕೃತಿಕ ಪರಂಪರೆ' ಅಂದರೆ, ಉಳಿದ ಎಲ್ಲದರ ಜೊತೆಗೆ ''ಸ್ಮಾರಕಗಳು, ವಾಸ್ತುಶಿಲ್ಪ, ಬೃಹತ್ ಶಿಲ್ಪಗಳು, ವರ್ಣಚಿತ್ರಗಳು, ಪುರಾತತ್ವ ಮಾದರಿಯ ಶಿಲ್ಪಗಳು ಅಥವಾ ಅದರ ಭಾಗಗಳು, ಕಲೆ, ಚರಿತ್ರೆ ಹಾಗೂ ವಿಜ್ಞಾನದ ದೃಷ್ಟಿಯಿಂದ ಸಾರ್ವತ್ರಿಕ ಮೌಲ್ಯವಿರುವ ಪ್ರತಿಯೊಂದೂ'' ಸಾಂಸ್ಕೃತಿಕ ಸ್ವತ್ತೇ ಆಗುತ್ತದೆ ಎಂದು ಅದರ ವ್ಯಾಪ್ತಿಯನ್ನು ವಿಸ್ತರಿಸಿತು. ಇಂತಹ ಸಾಂಸ್ಕೃತಿಕ ಆಸ್ತಿಯನ್ನು ''ಗುರುತಿಸಿ, ಅದನ್ನು ರಕ್ಷಿಸಿ ಮುಂದಿನ ತಲೆಮಾರಿಗೆ ರವಾನೆ ಮಾಡುವ ಜವಾಬ್ದಾರಿ ಯುನೆಸ್ಕೋವಿನ ಪ್ರತಿಯೊಂದು ಸದಸ್ಯ ರಾಷ್ಟ್ರದ್ದೂ ಆಗಿದೆ'' ಎಂದು ಘೋಷಿಸಿತು. ಭಾರತವೂ ಅದರ ಭಾಗ.

ಈ ರೀತಿಯ ಸ್ಮಾರಕಗಳ ರಕ್ಷಣೆ ಕೇಂದ್ರ ಸರ್ಕಾರದ ಜವಾಬ್ದಾರಿ. ಇದು ಜಗತ್ತು ನಮ್ಮಿಂದ ನಿರೀಕ್ಷಿಸುವ ಕನಿಷ್ಠ ನಾಗರಿಕ ಕರ್ತವ್ಯ. ನಮ್ಮ ಸರ್ಕಾರ ಇದರಲ್ಲಿ ಸಂಪೂರ್ಣವಾಗಿ ಸೋತಿದೆ. ಗುಜರಾತಿನಲ್ಲಿ ನೆಲಕಚ್ಚಿದ ಸ್ಮಾರಕಗಳು ಒಂದೆರಡಲ್ಲ. ದುರಾದೃಷ್ಟ ಎಂದರೆ ಸಾಮರಸ್ಯವನ್ನು ಸಾರುವ ಸ್ಮಾರಕಗಳೇ ಇವರ ದಾಳಿಗೆ ಬಲಿಯಾಗಿರುವುದು. ಈ ಬಗ್ಗೆ ಸಾರ್ವಜನಿಕರು ಕಲಾವಿದರು ಎಚ್ಚೆತ್ತುಕೊಂಡು ಧ್ವನಿ ಎತ್ತಬೇಕು. ಈ ಘಟನೆಯನ್ನು ಖಂಡಿಸಬೇಕು. ಈಗಾಗಲೇ ಕೆಲವು ಪ್ರಮುಖ ಕಲಾವಿದರು ಇದನ್ನು ಖಂಡಿಸಿದ್ದಾರೆ. ಖಂಡನೆ ರಾಷ್ಟ್ರವ್ಯಾಪಿಯಾಗಬೇಕು, ವಿಶ್ವವ್ಯಾಪಿಯಾಗಬೇಕು. ಅಷ್ಟೇ ಅಲ್ಲ, ಸ್ಮಾರಕಗಳ ರಕ್ಷಣೆಯ ಪ್ರಕ್ರಿಯೆಯನ್ನು ಪುನರಾರಂಭಿಸಬೇಕಿದೆ.

ಮತಾಂಧರಿಗೆ ಧರ್ಮವೂ ಗೊತ್ತಿಲ್ಲ. ಸಂಸ್ಕೃತಿಯೂ ಗೊತ್ತಿಲ್ಲ. ಅವರಿಂದ ಧರ್ಮಕ್ಕೂ ಉಳಿಗಾಲವಿಲ್ಲ, ಸಂಸ್ಕೃತಿಗೂ ಉಳಿಗಾಲವಿಲ್ಲ. ಧರ್ಮ ಸಂಸ್ಕೃತಿಗಳೆರಡರ ಅರಿವೂ ಇರುವವರು ಯೋಚಿಸುವ ರೀತಿ ಸಂಪೂರ್ಣ ಭಿನ್ನವಾಗಿರುತ್ತದೆ. ತಮ್ಮ ಬದುಕಿಡೀ ಸಂಸ್ಕೃತದ ಅಧ್ಯಯನಕ್ಕೆಂದೇ ಮೀಸಲಿಟ್ಟಿರುವ ೮೫ ವರ್ಷದ ವೃದ್ಧ ಬ್ರಾಹ್ಮಣ ಪಂಡಿತರೊಬ್ಬರು ಮಗನ ಹತ್ತಿರ ''ನನಗೆ ಸಾವು ಸಮೀಪಿಸಿದಾಗ ಫಯಾಜ್ ಖಾನರ ಸಂಗೀತವನ್ನು ಹಾಕು'' ಎಂದು ತಮ್ಮ ಕೊನೆಯ ಆಸೆ ತೋಡಿಕೊಂಡಿದ್ದರು. ಫಯಾಜ್ ಖಾನರದು ಅಷ್ಟು ದೊಡ್ಡ ವ್ಯಕ್ತಿತ್ವ.

''ಫಯಾಜ್‌ಖಾನರಂಥ ವ್ಯಕ್ತಿಗೆ ಜನ್ಮ ನೀಡಿದ ಮತ್ತು ಅವರಿಂದ ಶ್ರೀಮಂತವಾಗಿರುವ ಈ ಅದ್ಭುತ ಪರಂಪರೆಯನ್ನು ಈ ದೇಶದಿಂದ, ನನ್ನಿಂದ, ನನ್ನ ತಂದೆಯಿಂದ ಕಿತ್ತುಕೊಳ್ಳಲು ಧರ್ಮಾಂಧರಿಗೆ ನಾನು ಹೇಗೆ ತಾನೇ ಅವಕಾಶ ನೀಡಲಿ ?'' ಎನ್ನುವ ಆ ವೈದಿಕ ಸಂಸ್ಕೃತ ಪಂಡಿತರ ಮಗನ ಧ್ವನಿಯೊಂದಿಗೆ ನಮ್ಮ ನಿಮ್ಮ ಧ್ವನಿಯೂ ಸೇರಲಿ.

ಟಿ. ಎಸ್. ವೇಣುಗೋಪಾಲ್, ಶೈಲಜ
ಸಿ ಎಚ್. ೭೩, ೭ನೇ ಮುಖ್ಯರಸ್ತೆ
ಸರಸ್ವತಿಪುರ
ಮೈಸೂರು-೫೭೦೦೦೯

---

ಹಗಲು ಕಳೆವುದು ರಾತ್ರಿ ಬರುವುದು
ಹೊಸ ದಿನವು ಹೊಸದೆನಿಸದು
ನೆನಪು ಮಾಸದು, ನೋವು ಕಳೆಯದು
ಮನದ ಬೇಗೆಯು ತಣಿಯದು

ವರುಷ ಕಳೆದರು, ಮನದಿ ಚಿಂತೆಯ
ಚಿತೆಯ ಉರಿಯದು ಆರದು
ಕಣ್ಣ ಎದುರಲೆ ಅಗಲಿದವರನು
ಮರೆಯಲಾರದ ಮನವಿದು

ಹುಟ್ಟು ಸಾವುಗಳೆಲ್ಲ ಸೃಷ್ಟಿಯ
ನಿಯಮ ಎನುವುದನರಿತರೂ
ಇಷ್ಟ ಜನರಗಲಿಕೆಯ ವೇದನೆ
ಸಹಿಸುವುದು ಅತಿ ಕಷ್ಟವು

ಜತೆಯಲೇ ಸಂಸಾರ ರಥವನು
ಎಳೆದ ಹಸು ಎತ್ತುಗಳಲಿ
ಎತ್ತು ಬಿದ್ದರೆ ? ಹಸು ಮಾತ್ರ
ರಥವನೆಳೆಯಲು ಸಾಧ್ಯವೇ ?

ಬೇವು ಬೆಲ್ಲವ ಜೊತೆಗೆ ಮೆದ್ದರು
ಬೆಲ್ಲ ಕರಗಿತು ಬಾಯಲಿ
ಬೇವಿನ ಕಡು ಕಹಿಯು ಮಾತ್ರ
ನಾಲಿಗೆಯ ಮೇಲುಳಿಯಿತು

ಜೀವನದಿ ಸುಖದುಃಖ ಮಿಶ್ರವು
ಜಗದ ಜೀವರಿಗೆನುವರು
ಆದರೆನ್ನೆದೆಯಲಿ ಉಳಿಯಿತು
'ಅಂತ್ಯಕಾಣದ' ದುಃಖವು




ಕಮಲ ಒ.
೧೧೭೨, 'ಅಯೋಧ್ಯಾ', ಲಲಿತಾದ್ರಿ ರಸ್ತೆ, ೩ನೇ ಅಡ್ಡರಸ್ತೆ
ಕುವೆಂಪುನಗರ, ಮೈಸೂರು-೨೩

# ಕೋಮುಗಲಭೆಗಳು

ಎಚ್. ಎಸ್. ದೊರೆಸ್ವಾಮಿ

*ಮೇ ತಿಂಗಳ ಆದಿಭಾಗದಲ್ಲಿ ಶ್ರೀ ಕಿಶನ್ ಪಟ್ನಾಯಕ್ ಅವರು ಮೈಸೂರಿನಲ್ಲಿ ನೀಡಿದ ಒಂದು ಉಪನ್ಯಾಸದ ಸಾರಾಂಶ ಇಲ್ಲಿದೆ.*

**ಈಗ** ಒಂದು ವಿಶ್ವವ್ಯಾಪಿ ಗಂಡಾಂತರ ಉಂಟಾಗಿದೆ. ಗುಜರಾತ್‌ನಲ್ಲಿ ಈಗ ಏನು ಸಂಭವಿಸಿದೆ ? ಅದೇನು ಸಾಮಾಜಿಕ ಜಟಾಪಟಿಯೇ ? ಜಾತೀಯ ಸಾಮರಸ್ಯ ಭಂಗವೇ ? ಅಥವಾ ಕೋಮುವಾದ ಗಲಭೆಯೆ ?

ಕೋಮುಗಲಭೆ ಕಾಲಕಾಲಕ್ಕೆ ಬೇರೆ ಬೇರೆಯ ಸ್ವರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ಕೋಮುಗಲಭೆ ಇದ್ದಕ್ಕಿದ್ದಂತೆ ತಲೆ ಎತ್ತುವುದಲ್ಲ. ಅದು ಧಾರ್ಮಿಕ ಅಥವಾ ಕೋಮುವಾರು ಪ್ರಶ್ನೆ ಮಾತ್ರವಲ್ಲ. ಅದಕ್ಕಿಂತ ಮೂಲಭೂತವಾದದ್ದು. ಗುಜರಾತ್ ಮಾದರಿಯ ಘರ್ಷಣೆ ಗುಜರಾತಿಗಿಂತ ಭಿನ್ನವಾದ ರಾಜಕೀಯ, ಆರ್ಥಿಕ ಪರಿಸ್ಥಿತಿ ಇರುವ ರಾಜ್ಯಗಳಲ್ಲೂ ನಡೆದೀತೆ ? ಸ್ವಾತಂತ್ರ್ಯ ಪ್ರಾಪ್ತವಾದ ನಂತರದಲ್ಲಿ ರಾಜಕೀಯ ಹೊಸ ಸ್ವರೂಪ ಪಡೆದುಕೊಂಡಿದೆ. ಈಗ ಸದ್ಯದಲ್ಲಿ ಬೇರೆ ಬೇರೆ ಭೌಗೋಳಿಕ ಭಾಗಗಳಲ್ಲಿ ಬೇರೆ ಬೇರೆ ರೀತಿಯ ಘರ್ಷಣೆ ಉದ್ಭವವಾಗುತ್ತಿದೆ. ಗುಜರಾತಿನಲ್ಲಾದ ರೀತಿಯ ಘರ್ಷಣೆ ಬೇರೆ ರಾಜ್ಯಗಳಲ್ಲಿ ಸಂಭವಿಸಲಾರದು. ಭಾರತೀಯ ಜನತಾಪಕ್ಷ, ಕಾಂಗ್ರೆಸ್ ಹೀಗೆ ಬೇರೆ ಬೇರೆ ಪಕ್ಷಗಳು ರಾಜ್ಯ ಸೂತ್ರವನ್ನು ಹಿಡಿದಿರುವುದು ಅದಕ್ಕೆ ಕಾರಣವಲ್ಲ. ಲಲ್ಲೂಪ್ರಸಾದ್ ಮುಖ್ಯಮಂತ್ರಿಯಾಗುವವರೆಗೆ ಬಿಹಾರ ಕೋಮು ಘರ್ಷಣೆಯ ರಾಜ್ಯವಾಗಿಯೇ ಇತ್ತು. ಲಲ್ಲೂಪ್ರಸಾದ್ ಮುಖ್ಯಮಂತ್ರಿಯಾದ ದಿನದಿಂದ ಇಂದಿನವರೆಗೆ ಯಾವುದೇ ಮತೀಯ ಘರ್ಷಣೆ ಅಲ್ಲಿ ಉದ್ಭವಿಸಿಲ್ಲ. ಉತ್ತರಪ್ರದೇಶದಲ್ಲಿ ಬಹುಜನ ಸಮಾಜ ಪಕ್ಷ ಮತ್ತು ಮುಲಾಯಂಸಿಂಗ್ ಯಾದವ್ ಅಧಿಕಾರ ಹಿಡಿದ ಮೇಲೆ ಅಲ್ಲಿಯ ಘರ್ಷಣೆಗಳ ಸ್ವರೂಪ ಬದಲಾವಣೆಯಾಗಿದೆ. ಬಾಬ್ರಿ ಮಸೀದಿ ಕೆಡವಿದ ಮೇಲೆ ಜಾತೀಯ ಶಕ್ತಿಗಳು ಪರಾಭವಗೊಂಡಿವೆ. ಸಾಮಾಜಿಕ ಶಕ್ತಿಗಳ ಮರು ಹೊಂದಾಣಿಕೆ ಈಗ್ಗೆ ಆಗಿದೆಯಾಗಿ ಭಾರತೀಯ ಜನತಾಪಕ್ಷ ತಾನೊಂದು ರಾಜಕೀಯ ಶಕ್ತಿ ಎನಿಸಿಕೊಂಡರೂ ಶಕ್ತಿಶಾಲಿಯಾಗಿ ಬೆಳೆಯಲು ಆಸ್ಪದವಿಲ್ಲವಾಗಿದೆ. ಭಾರತೀಯ ಜನತಾಪಕ್ಷ ಈಗ ಎಲ್ಲ ರಾಜ್ಯಗಳಲ್ಲೂ ರಾಜಕೀಯ ಶಕ್ತಿಯಾಗಿ ಕಾಣಿಸಿಕೊಳ್ಳುತ್ತಿಲ್ಲ. ಒಂದು ಕಾಲಕ್ಕೆ ಭಾರತವ್ಯಾಪಿ ರಾಜಕೀಯ ಶಕ್ತಿಯಾಗಿ ವಿಜೃಂಭಿಸುತ್ತಿದ್ದ ಕಾಂಗ್ರೆಸ್ ಕೂಡ ಈಗ ನಿಷ್ಕ್ರಿಯವಾಗಿದೆ.

ಈಗಿನ ಸಂದರ್ಭದಲ್ಲಿ ಬಿಜೆಪಿ ಹೊರತುಪಡಿಸಿ ಇತರೆ ರಾಜಕೀಯ ಪಕ್ಷಗಳು ತಳ ಊರುತ್ತಿವೆ. ಇದನ್ನೆಲ್ಲ ಗಮನಿಸಿದಾಗ ಭಾರತೀಯ ಸಮಾಜದಲ್ಲಿ ಏನೋ ನಿರ್ದಿಷ್ಟ ಬದಲಾವಣೆ ಆಗುತ್ತಿರುವುದು ಕಂಡುಬರುತ್ತಿದೆ. ದೇಶದ ವಿದ್ಯಮಾನಗಳು ಲಂಗುಲಗಾಮಿಲ್ಲದ ರೀತಿ ರೂಪುಗೊಳ್ಳುವುದನ್ನು ಭಾರತೀಯ ಸಮಾಜ ಸಹಿಸುವುದಿಲ್ಲ ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಆದ್ದರಿಂದ ನಾವೀಗ ಭಾರತೀಯ ಸಮಾಜದ ಶಕ್ತಿಯನ್ನು ಪೋಷಿಸಬೇಕು. ಜಾತೀಯ ಘರ್ಷಣೆ ಉಂಟುಮಾಡುವ ದುಷ್ಟ ಶಕ್ತಿಗಳನ್ನು ಭಾರತೀಯ ಸಮಾಜ ತಡೆಗಟ್ಟಬೇಕು. ಭಾರತ ಒಂದು ಬಹು ಜಾತಿಗಳ, ಬಹು ಧರ್ಮಗಳ ರಾಷ್ಟ್ರ. ಬುದ್ಧಿಜೀವಿಗಳಿರುವ ಕಡೆ ಮತೀಯ ಭಾವನೆಯುಳ್ಳ ಯಾವುದೇ ಒಂದು ಪಂಗಡ ತನ್ನ ಪ್ರಭಾವ ತೋರಲು ಬಿಡಬಾರದು. ಆದರೆ, ಬುದ್ಧಿಜೀವಿಗಳಿರುವಲ್ಲೇ ಕೋಮು ಘರ್ಷಣೆ ಈಗ ಸಂಭವಿಸುತ್ತಿರುವುದು ಒಂದು ದುರಂತ. ಅದು ಬುದ್ಧಿಜೀವಿಗಳ (ವಿಫಲತೆಯನ್ನೂ) ಸಾರಿ ಹೇಳುತ್ತದೆ. ನಮ್ಮದು ಧನಾತ್ಮಕ ಸಮಾಜವಾಗಿ ರೂಪುಗೊಳ್ಳಬೇಕು. ನರೇಂದ್ರ ಮೋದಿಯಂತಹ ಒಂದು ದುಷ್ಟಶಕ್ತಿಯನ್ನು ಈಗ ಭಾರತೀಯ ಸಮಾಜ ಗುರುತಿಸಬಲ್ಲದಾಗಿದೆ. ಆರ್.ಎಸ್.ಎಸ್.ನವರು, ಭಜರಂಗ ದಳದವರು ನಮ್ಮೆಲ್ಲರನ್ನೂ ಭೇಟಿಯಾಗುತ್ತಾರೆ. ನಮಗೆ ನೀಡಲು ಅವರಲ್ಲಿ ಒಂದು ಸಂದೇಶ ಇದೆ. ನಾವು ಜಾತ್ಯತೀತರಾದರೂ ಸಾರ್ವಜನಿಕ ಸಭೆಗಳಲ್ಲಿ ನಮ್ಮ ಸಂದೇಶವನ್ನು ಹೇಳುವುದಕ್ಕೆ ಮಾತ್ರ ಸೀಮಿತಗೊಳಿಸಿಕೊಂಡಿದ್ದೇವೆ. ಆದರೆ ನಾವು ಹಿಂದುಗಳ ಕುಟುಂಬಗಳನ್ನು ಸಂಧಿಸಿ ಅದೇ ಮಾತುಗಳನ್ನು ಹೇಳಲು ಸಾಧ್ಯವಾಗುತ್ತಿಲ್ಲ. ನಾವು ಹಿಂದುತ್ವದ ಹೆಸರಿನಲ್ಲಿ ಪ್ರತಿಯೊಂದು ಸಂಸಾರವನ್ನೂ ಸಂಪರ್ಕಿಸಿ ನಮ್ಮದೇ ಆದ ಸಂದೇಶ ಮುಟ್ಟಿಸುವುದು ಅತ್ಯಗತ್ಯ. ನಮ್ಮ ಸಂಸ್ಕೃತಿಯ ಬಗೆಗೆ ಮಾತನಾಡಬೇಕಾಗಿದೆ. ನಾವು ವಿದ್ಯಾವಂತರ, ವಿಚಾರವಂತರ ವೇದಿಕೆಗಳಿಂದ ಮಾತನಾಡುವುದನ್ನು ಕಲಿತಿದ್ದೇವೆ. ಆದರೆ ಜನಸಾಮಾನ್ಯರಿಗೆ ನಮ್ಮ ಸಂದೇಶ ಮುಟ್ಟಿಸುವುದನ್ನು ಅರಿತಿಲ್ಲ. ಇದು ನಮ್ಮ ಒಂದು ವಿಫಲತೆ.




ನಾವು ಸಂಘಪರಿವಾರದ ಧ್ಯೇಯೋದ್ದೇಶಗಳನ್ನು ಒಪ್ಪುವವರಲ್ಲ, ಹಾಗಿದ್ದ ಮೇಲೆ ನಾವು ಒಪ್ಪುವುದಾದರೂ ಯಾವುದನ್ನು ? ಅದೂ ನಮಗೆ ಸ್ಪಷ್ಟವಾಗಿ ತಿಳಿದಿಲ್ಲ. ಈ ಒಂದು ಕೊರತೆ ನಮ್ಮಲ್ಲಿದೆ. ನಮ್ಮ ಮಾತುಕತೆಯಲ್ಲಿ ಸಂಭಾಷಣೆಯಲ್ಲಿ ನಿಖರತೆಯನ್ನು ಹೇಗೆ ಸಾಧಿಸುವುದು ? ಈ ಮೊದಲು ನಮ್ಮಲ್ಲಿ ಎಲ್ಲ ಕೋಮಿನವರನ್ನೊಳಗೊಂಡ ಶಿಬಿರಗಳು ನಡೆಯುತ್ತಿದ್ದವು. ಜಾತ್ಯತೀತರ ಶಿಬಿರಗಳು ನಡೆಯುತ್ತಿದ್ದವು. ಈಗೀಗ ವಿದ್ಯಾವಂತರು ಬುದ್ಧಿಜೀವಿಗಳು ತಮ್ಮನ್ನು ಜಾತ್ಯತೀತರು ಎಂದು ಕರೆದುಕೊಳ್ಳಲೂ ಸಂಕೋಚಪಡುತ್ತಾರೆ. ಈ ಸಂಖ್ಯೆ ಇತ್ತೀಚೆಗೆ ಬೆಳೆಯುತ್ತಿದೆ. ನಾವು ಯಾವುದನ್ನು ಪ್ರತಿಪಾದಿಸುತ್ತೇವೆ ಎಂದು ಹೇಳುವ ಪರಿಸ್ಥಿತಿಯಲ್ಲೂ ಇಲ್ಲದಿರುವುದು ಶೋಚನೀಯ. ಕೋಮುವಾದದ ವಿರುದ್ಧವಾಗಿ, ಜಾತ್ಯತೀತತೆಯ ಪರವಾಗಿ ಒಂದು ಖಚಿತವಾದ ಸಂದೇಶ ನೀಡಿದವರು ಗಾಂಧೀಜಿಯವರೊಬ್ಬರೇ. ಗಾಂಧೀಜಿಗಿಂತ ಜಾತ್ಯತೀತರಾಗಿದ್ದವರು ಬೇರೊಬ್ಬರಿಲ್ಲ. ಗಾಂಧೀಜಿ ಸ್ವಾತಂತ್ರ್ಯ ಹೋರಾಟ ನಡೆಸುತ್ತಿದ್ದ ಕಾಲದಲ್ಲಿ ಅವರು ಸಂಘಪರಿವಾರವನ್ನು ತಲೆ ಎತ್ತದಂತೆ ಮಾಡಿದ್ದರು. ನಾವು ಈ ಬಗ್ಗೆ ಹೆಮ್ಮೆಪಡಬೇಕು. ಇಂದೂ ಕೂಡ ಸಂಘ ಪರಿವಾರವನ್ನು ತಲೆ ಎತ್ತದಂತೆ ಮಾಡಬಹುದು. ಅದಾಗಬೇಕಾದರೆ ನಮಗೊಂದು ನಿರ್ದಿಷ್ಟವಾದ ಸಕಾರಾತ್ಮಕ ಗೊತ್ತುಗುರಿ ಇರಬೇಕು.

ಬಹುಮತಗಳ ಬೀಡಾದ ಭಾರತ ಇಂತಹ ಒಂದು ನಿರ್ದಿಷ್ಟವಾದ ಗೊತ್ತುಗುರಿ ಬೆಳೆಸಿಕೊಳ್ಳದಿದ್ದರೆ ಭಾರತೀಯ ಜನತಾಪಕ್ಷ ಭಾರತದಲ್ಲಿ ಒಂದು ಸರ್ವಾಧಿಕಾರಿ ಆಡಳಿತವಾಗಿ ವಿಜೃಂಭಿಸುವುದರಲ್ಲಿ ಸಂಶಯವಿಲ್ಲ.

ಹಾಗಿದ್ದ ಮೇಲೆ ಈ ಕೇಡಿನ ವಿರುದ್ಧ ಸಮರ ಹೂಡಲು ನಾವೇನು ಮಾಡಬೇಕು ? ಧಾರ್ಮಿಕ - ಜಾತೀಯ ಭೇದ ಭಾವ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ತುಂಬ ಇದೆ, ನಿಜ. ಆದರೂ ಅಲ್ಲಿ ಧಾರ್ಮಿಕ ಘರ್ಷಣೆಗಳಾಗುವುದಿಲ್ಲ. ಜಾತೀಯ ಘರ್ಷಣೆಗಳು ಆಗುವುದೆಲ್ಲ ಬಹುತೇಕ ನಗರಗಳಲ್ಲಿ, ಪಟ್ಟಣಗಳಲ್ಲಿ. ಈ ಜಾತೀಯ ಘರ್ಷಣೆ ಗ್ರಾಮಗಳಿಗೆಲ್ಲ ಹರಡುವುದಾದರೆ ಅದು ಭಯಾನಕವಾಗಿರುತ್ತದೆ. ಈಗ ನಮ್ಮ ಗ್ರಾಮಗಳಲ್ಲೇ ಕೋಮುಭಾವನೆ ಇದ್ದರೂ ಕೋಮು ಸೌಹಾರ್ದವೂ ಇದೆ. ಹಳ್ಳಿಗಳಲ್ಲಿ ಕೋಮು ಘರ್ಷಣೆ ಎಬ್ಬಿಸುವುದು ಸುಲಭಸಾಧ್ಯವಲ್ಲ.

ಪ್ರಪಂಚೀಕರಣ ಮುಂತಾದವು ಕೋಮು ಘರ್ಷಣೆಗೆ ಕಾರಣವಲ್ಲ, ಜಾಗತೀಕರಣ ಮುಂತಾದವು ಒಂದು ವರ ಎಂದು ತಿಳಿದಿರುವ ಜನರೂ ನಮ್ಮಲ್ಲಿ ಇದ್ದಾರೆ. ನೈಜೀರಿಯಾದಲ್ಲಿ ಸಂಪದ್ಭರಿತರಾದ ಮುಸ್ಲಿಮರು ಕ್ರಿಶ್ಚಿಯನ್ನರು ಇದ್ದಾರೆ. ಆದರೆ ಅಲ್ಲಿ ಕೋಮುದ್ವೇಷ, ಕೋಮು ಘರ್ಷಣೆಯನ್ನು ಊಹಿಸಲಿಕ್ಕೂ ಅಸದಳ. ಆದರೆ ಅಲ್ಲಿ ಮಹಮ್ಮದೀಯರಲ್ಲೇ ಮುಸ್ಲಿಂ ಉಪಜಾತಿಯವರಲ್ಲೇ, ದಂಗೆಗಳು ಆಗುತ್ತಾ ಇರುತ್ತವೆ.

ಬಹುರಾಷ್ಟ್ರೀಯ ಕಂಪೆನಿಗಳು ನೈಜೀರಿಯವನ್ನು ಆಳುತ್ತವೆ. ಅವು ಮುಸ್ಲಿಮರಲ್ಲೇ ವಿರೋಧ ತಂದುಹಾಕಿ ಸಾಮ್ರಾಜ್ಯಶಾಹಿಗಳ ಕೈಯಲ್ಲಿ ಆರ್ಥಿಕ ಹಿಡಿತ ಇರುವಂತೆ ನೋಡಿಕೊಳ್ಳುತ್ತವೆ. ಮತೀಯ ಘರ್ಷಣೆಗಳ ವಾಹಕರು ಯಾರು ? ಮತೀಯ ಘರ್ಷಣೆ ಹರಡುವವರು ಯಾರು ? ಉತ್ತರವಾಗಿ ಬಡವರು ಮತ್ತು ತುಳಿಯಲ್ಪಟ್ಟವರು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅವರಿಗೆ ವೇತನ ಕೊಟ್ಟು, ದಂಗೆ ಮಾಡಲು ಇವರನ್ನು ಬಳಸುತ್ತಾರೆ. ನಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಹಿಡಿದುಕೊಳ್ಳುವ ಕಾರ್ಯ ನಡೆಯುತ್ತಿಲ್ಲ. ಸರ್ಕಾರ ಉದಾಸೀನತೆಯಿಂದಿದೆ. ಎಂದು ಅನೇಕರು ದೂರುತ್ತಾರೆ. ಮುಂದಿನ ನಮ್ಮ ಸಮಾಜ ಹೇಗಿರಬೇಕು ಎಂಬ ಕಲ್ಪನೆ ನಮಗೆ ಇದೆಯೇ ? ಈ ಕಲ್ಪನೆ ನಮಗಿಲ್ಲವಾಗಿ ನಾವು ಈ ಬಗೆಯ ದುರಂತದ ಬಲಿಪಶುಗಳಾಗುತ್ತಿದ್ದೇವೆ. ನಿಮಗೆ ಕನಸುಗಳಿವೆಯೇ ? ನೀವು ಹಗಲುಗನಸು ಕಾಣುತ್ತೀರಾ ? ಪ್ರತಿಯೊಬ್ಬರಿಗೂ ವೈಯಕ್ತಿಕವಾಗಿ ತಮ್ಮಮಟ್ಟಿಗೆ ಅಭಿವೃದ್ಧಿ ಪಡೆಯಬೇಕೆಂಬ ಹಂಬಲವಿದೆ. ಸಮಾಜದ, ಮಾನವ ಸಮಾಜದ, ನಮ್ಮ ರಾಷ್ಟ್ರದ ಅಭಿವೃದ್ಧಿ ಇಂತವರಿಗೆ ಬೇಕಾಗಿದೆಯೆ ?

ದುಷ್ಟ ಶಕ್ತಿಗಳು, ಸಾತ್ವಿಕ ಶಕ್ತಿಗಳ ಮೇಲೆ ಈಗ ಸ್ಪರ್ಧೆ ನಡೆಸುತ್ತಿವೆ. ಸಾತ್ವಿಕವಾದದ್ದು, ಒಳ್ಳೆಯದಾದದ್ದು ದುರ್ಬಲವಾಗಿದೆ. ದುಷ್ಟ ಶಕ್ತಿಗಳು ಪರಿಣಾಮವನ್ನೂ ಲೆಕ್ಕಿಸದೆ ಧೈರ್ಯವಾಗಿ ಮುನ್ನುಗ್ಗಿ ಬರುತ್ತಿವೆ. ಸಮಾಜದ ಒಂದು ದೊಡ್ಡ ಸಂಖ್ಯೆಯ ಜನ ದೊಡ್ಡ ಕನಸುಗಳನ್ನೂ ಕಾಣುವವರಾಗಬೇಕು. ಅವರು ತಮ್ಮ ಸ್ವಾರ್ಥವನ್ನು ಬದಿಗೊತ್ತಬೇಕು. ತಮ್ಮ ಸ್ವಂತದ ವಿಚಾರ ಮರೆಯಬೇಕು. ಆ ಮೂಲಕ ಸಮಾಜ ಸಂಪೂರ್ಣವಾಗಿ ಪರಿವರ್ತನೆಗೊಳ್ಳಬೇಕು. ಆಧುನಿಕ ಕಾಲದಲ್ಲಿ ರಾಜಕೀಯವೇ ಸಮಷ್ಟಿಯ ವಾಹಕ. ಹಿಂದಿನ ಕಾಲದಲ್ಲಿ ಧರ್ಮದ ಪ್ರಭಾವ ಜನತೆಯ ಮೇಲೆ ತುಂಬ ಇತ್ತು. ಈಗ ರಾಜಕೀಯ ಬಹು ಪ್ರಭಾವಶಾಲಿಯಾಗಿ ಬೆಳೆದಿದೆ. ಆದ್ದರಿಂದ ಈಗ ಹೊಸ ರೀತಿಯ ರಾಜಕೀಯದ ಅಗತ್ಯತೆ ಇದೆ. ಈಗ ಜಾರಿಯಲ್ಲಿರುವ ರಾಜಕೀಯ, ಯಥಾಸ್ಥಿತಿವಾದವನ್ನು ಮುಂದುವರಿಸುವ ಸಾಧನವಾಗಿದೆ. ಈಗಿನ ರಾಜಕೀಯ ಆಡಳಿತ ನಡೆಸುವ ರಾಜಕಾರಣಿಗಳ ಹಿತರಕ್ಷಣೆ ಮಾಡುವ ಸಾಧನವಾಗಿದೆ.

ಆಧುನಿಕ ಯುಗದಲ್ಲಿ ಅನೇಕ ಕ್ರಾಂತಿಗಳಾದವು. ಭಾರತದಲ್ಲಿ, ರಷ್ಯದಲ್ಲಿ, ಚೈನಾದಲ್ಲಿ ಇಂತಹ ಕ್ರಾಂತಿಗಳಾದವು. ಈ ಕಾರಣದಿಂದಾಗಿ, ಅನೇಕ ರಾಜಕೀಯ ಧುರೀಣರು ಬೆಳೆದುಬಂದರು. ಇವರೆಲ್ಲ ಕ್ರಾಂತಿಕಾರಿ ರಾಜಕೀಯ ಮಾಡಿದವರಾಗಿದ್ದರು. ಮಾನವತಾವಾದವನ್ನು ಎತ್ತಿ ಹಿಡಿಯುವುದಾದರೆ ಮೊದಲು ಜಾತೀಯ ಅಶಾಂತಿಯನ್ನು ಹತ್ತಿಕ್ಕಬೇಕು. ಈ ಹಿಂದೆ ಬಂಡವಾಳಶಾಹಿ ಕೂಡ ತನ್ನ ಇತಿಮಿತಿ ಅರಿತಿತ್ತು. ಇಂದು ಬಂಡವಾಳಶಾಹಿ ಕರಾಳ ರೂಪತಾಳಿ ಅಟ್ಟಹಾಸದಿಂದ ಮೆರೆಯುತ್ತಿದೆ. ಕಮ್ಯುನಿಸ್ಟ್ ಮತ್ತು ಸೋಷಿಯಲಿಸ್ಟ್ ಶಕ್ತಿಗಳು ಬಲಶಾಲಿಯಾಗಿರುವವರೆಗೂ ಬಂಡವಾಳಶಾಹಿ ಇಂದಿನಷ್ಟು ಮಾನಗೆಟ್ಟದ್ದಾಗಿರಲಿಲ್ಲ. ಕಮ್ಯುನಿಸ್ಟ್ ಮತ್ತು ಸೋಷಿಯಲಿಸ್ಟ್ ಸಿದ್ಧಾಂತಗಳು ಉನ್ನತಮಟ್ಟದ ಜೀವನಕ್ರಮವನ್ನು ತಮ್ಮ ಗುರಿಯನ್ನಾಗಿಟ್ಟುಕೊಂಡಿದ್ದವು. ಈಗ ನಮಗೆ ಆದರ್ಶಗಳೇ ಇಲ್ಲ. ಅಂತಹ ನಾಯಕರೂ ನಮ್ಮಲ್ಲಿಲ್ಲ.

ಈ ಕಲ್ಪನೆಯನ್ನು ಸುಭದ್ರವಾಗಿ ನೆಲೆಗೊಳಿಸುವುದು ನಮ್ಮೆಲ್ಲರ ಕರ್ತವ್ಯವಾಗಿದೆ. ಈ ಕೆಲಸವನ್ನು ಮೊದಲು ಎಡಪಕ್ಷಗಳು ಮಾಡುತ್ತಿದ್ದವು. ಆನಂತರ ಜಯಪ್ರಕಾಶರ ನಾಯಕತ್ವದಲ್ಲಿ ಜನತೆಯ ಪ್ರಜಾಪ್ರಭುತ್ವವನ್ನು ಪುನರುಜ್ಜೀವನಗೊಳಿಸಿತು. ಜೆ. ಪಿ.ಯವರು ಕಣ್ಮರೆಯಾದ ಮೇಲೆ ಪುನಃ ಪ್ರಜಾಪ್ರಭುತ್ವ ಬಲಹೀನವಾಗಿದೆ. ಪ್ರಜಾಪ್ರಭುತ್ವಕ್ಕೆ ಭವಿಷ್ಯವೇ ಇಲ್ಲವೇನೋ ಎಂಬ ಭಯ ಉಂಟಾಗಿದೆ. ಜನತಾ ಚಳುವಳಿಯನ್ನು ಬಲಯುತಗೊಳಿಸುವುದೊಂದೇ ನಮಗಿರುವ ಪರ್ಯಾಯ ಮಾರ್ಗ. ಇದನ್ನು ಒಂದು ಪಕ್ಷದವರು ಅಥವಾ ಒಂದು ರಾಜಕೀಯ ಸಂಸ್ಥೆಯವರು ಒಂದು ಕಾರ್ಯಕ್ರಮ ರೂಪಿಸಿಕೊಂಡು ಸಾಧಿಸುವುದು ಆಗದ ಮಾತು. ಇದರ ಸಾಧ್ಯತೆ ಇದ್ದರೂ, ಅದು ಒಂದು ಪದ್ಧತಿಯನ್ನೇ ಪರಿವರ್ತಿಸಲಾರದು. ಇರುವ ಪದ್ಧತಿಯಲ್ಲೇ ಸ್ವಲ್ಪ ಸುಧಾರಣೆ ತರಬಹುದು ಅಷ್ಟೆ. ಆ ಹೋರಾಟ ತಾತ್ವಿಕ ನೆಲೆಯಲ್ಲಿ ಆಗಬೇಕು. ಇಂದಿನ ಕೋಮುಭಾವನೆಗೆ ಬಲಿಪಶುಗಳಾಗಿರುವ ಎಲ್ಲ ವರ್ಗಗಳ ಜನರೂ ಈ ಹೋರಾಟದಲ್ಲಿ ಕೂಡಿಕೊಳ್ಳಬೇಕು. ಈ ಹೋರಾಟ, ಈ ಮನದುಬ್ಬಸ, ಅನ್ಯಾಯವನ್ನು ಸರಿಪಡಿಸುವುದಕ್ಕಲ್ಲ ನಡೆಯಬೇಕಾದ್ದು; ಈ ದೋಷಯುತ ಪದ್ಧತಿಯ ಬದಲಾವಣೆಗಾಗಿ ಈ ಹೋರಾಟ ನಡೆಯಬೇಕು. ಈ ಹೋರಾಟಕ್ಕಾಗಿ ಒಂದು ಸಮಾನ ವೇದಿಕೆ ಸೃಷ್ಟಿಯಾಗಬೇಕು. ಅದು ಚುನಾವಣೆಗಳಲ್ಲಿ ಸ್ಪರ್ಧಿಸುವುದಕ್ಕಾಗಿಯೇ ರೂಪುಗೊಳ್ಳುವ ವೇದಿಕೆ ಆಗಬಾರದು. ಗಾಂಧೀಜಿ ಕಾಲದಲ್ಲಿ ದೇಶದ ಸ್ವಾತಂತ್ರ್ಯದ ಗುರಿ ಸಾಧಿಸಲು ಕಾಂಗ್ರೆಸ್ ಯಾವ ಗುರಿ ಹೊಂದಿತ್ತೋ ಅಂತಹದೇ ಗುರಿಯನ್ನು ಈ ಸಂಘಟನೆ ಹೊಂದಿರಬೇಕು. ಇಂದಿನ ಸನ್ನಿವೇಶದಲ್ಲಿ ದಲಿತರ ರಾಜಕೀಯ ಭಯಾನಕ ಘಟ್ಟ ಮುಟ್ಟಿದೆ. ದಲಿತರು ರಾಜಕೀಯ ಶಕ್ತಿಯಾಗಬಲ್ಲರು ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಕರ್ನಾಟಕದಲ್ಲಿ ಅವರಲ್ಲಿ ಒಡಕಿದೆ. ಉತ್ತರಪ್ರದೇಶದಲ್ಲಿ ಬಹುಜನ ಸಮಾಜ ಪಕ್ಷವು ಭಾರತೀಯ ಜನತಾ ಪಕ್ಷದ ಜೊತೆಗೆ ರಾಜಕೀಯ ಲಾಭಕ್ಕಾಗಿ ಅನೈತಿಕ ಮೈತ್ರಿ ಮಾಡಿಕೊಂಡಿದೆ. ಇದರ ಬದಲು ದಲಿತರು ಸ್ವತಂತ್ರವಾಗಿ ಒಂದು ರಾಜಕೀಯ ಶಕ್ತಿಯಾಗಿ ಬೆಳೆಯಬೇಕು. ಇತ್ತೀಚಿನ ಚುನಾವಣೆಯಲ್ಲಿ ಹಿಂದು ಮತಾಂಧರು ಪರಾಭವಗೊಂಡರು. ಈಗ ಉತ್ತರಪ್ರದೇಶದಲ್ಲಿ ಬಿ.ಜೆ.ಪಿ.ಯ ಹಿಡಿಮಂದಿ ಮಾತ್ರ ಆರಿಸಿ ಬಂದಿದ್ದಾರೆ. ಬಿ.ಎಸ್‌ಪಿ. ಈಗ ಬಿಜೆಪಿಯನ್ನು ಮತ್ತೆ ಅಧಿಕಾರಕ್ಕೆ ತರುವ ಪ್ರಯತ್ನ ನಡೆಸಿದೆ. ಮಹಾರಾಷ್ಟ್ರದಲ್ಲೂ ಇದೇ ಪರಿಸ್ಥಿತಿ. ಬೌದ್ಧ ಮತಕ್ಕೆ ಹೋದ ದಲಿತರು ಶಿವಸೇನಾ ಮತ್ತು ಭಾರತೀಯ ಜನತಾ ಪಕ್ಷದ ಪರವಾಗಿ ಮತ ನೀಡಿದ್ದಾರೆ.

ಒಂದು ಆಮೂಲಾಗ್ರ ಸುಧಾರಣೆ ಬಯಸುವ ಪಕ್ಷ ಇದ್ದರೆ ಮಾತ್ರ ಜನತಾ ಚಳುವಳಿ ಬೆಳೆಯಬಲ್ಲದು. ಯಾವ ರಾಜಕೀಯ ಪಕ್ಷವೂ ಯುವಕರನ್ನು ಮುಂದೆ ಬಿಟ್ಟುಕೊಳ್ಳಲು ತಯಾರಿಲ್ಲ. ಯುವಕರಿಗೆ ಎಲ್ಲಿ ಯಾರ ಜೊತೆಗೂಡಬೇಕೆಂದು ತಿಳಿಯುತ್ತಿಲ್ಲ. ನಮ್ಮ ಕೆಲಸ ಕಷ್ಟಕರವಾದದ್ದು. ನಾವು ರಾಜಕೀಯದ ಸ್ವರೂಪವನ್ನು ಸಂಪೂರ್ಣವಾಗಿ ಬದಲಾಯಿಸಲು ಕಾರ್ಯತತ್ಪರರಾಗಬೇಕು. ನಾವು ಪ್ರಜಾಪ್ರಭುತ್ವದ ಆಶಯ ಮತ್ತು ಧ್ಯೇಯಗಳಿಗಾಗಿ ದುಡಿಯುವ ಸಂಕಲ್ಪ ಮಾಡಬೇಕು. ಹೊಸ ಬಗೆಯ ರಾಜಕೀಯವನ್ನು ರೂಪಿಸುವುದು ನಮ್ಮ ಗುರಿಯಾಗಬೇಕು.

**ಎಚ್. ಎಸ್. ದೊರೆಸ್ವಾಮಿ**
೧೮/ಬಿ, ೭ನೇ ಅಡ್ಡರಸ್ತೆ, ಎನ್. ಆರ್. ಕಾಲೋನಿ
ಬೆಂಗಳೂರು - ೫೬೦ ೦೧೯

*(ಈ ತಿಂಗಳು ೩ನೇ ಪುಟದಿಂದ)*

ಅಂತರ್ಮತೀಯ ಸಂಬಂಧಗಳನ್ನು ಹಾಳುಗೆಡಹುವಂತೆ ಕೇಂದ್ರ ಸರ್ಕಾರದ ಅರುಣ್‌ಶೌರಿ-ಯಶವಂತ ಸಿನ್ಹಗಳು ಖಾಸಗೀಕರಣವನ್ನು ಅತಿ ಮಹತ್ವದ ಮೌಲ್ಯವೆಂಬಂತೆ ವೈಭವೀಕರಿಸಿ ಸಾರ್ವಜನಿಕರ ಸಂಪತ್ತನ್ನು ನೀರಿಗೆ ಚೆಲ್ಲಿ ಸಮಾಜದ ಆಂತರಿಕ ಸಂಬಂಧಗಳಲ್ಲಿ ಬಿರುಕುಗಳನ್ನು ಹೆಚ್ಚಿಸುತ್ತಿದ್ದಾರೆ. ಖಾಸಗಿತನದ ಪ್ರಧಾನ ಮೌಲ್ಯ ಏನೆಂಬುದನ್ನು ವಿದೇಶಿ ಸಂಚಾರ ನಿಗಮವನ್ನು ಪಡೆದುಕೊಂಡ ಟಾಟಾ ಕಂಪನಿ ಸ್ಪಷ್ಟಗೊಳಿಸಿದೆ ಮತ್ತು ಅದನ್ನು ಶೌರಿ ನ್ಯಾಯಸಮ್ಮತವೆಂದು ಶ್ಲಾಘಿಸಿದ್ದಾರೆ. ಸಾರ್ವಜನಿಕ ವಲಯದಲ್ಲಿದ್ದ ಸಹಸ್ರಾರು ಕೋಟಿ ಮೌಲ್ಯದ ನಿಗಮವನ್ನು ಸಾವಿರ ಕೋಟಿಗೆ ಟಾಟಾ ಕಂಪೆನಿಗೆ ವಹಿಸಿಕೊಟ್ಟದ್ದು ಮೊದಲ ಅಪರಾಧ, ಅದಕ್ಕೆ ಶೌರಿ ನಿಂದನಾರ್ಹರು. ನಿಗಮದ ಸಾವಿರದಿನ್ನೂರು ಕೋಟಿ ರೂಪಾಯಿಗಳನ್ನು ಟಾಟಾ ಕಂಪನಿ ಈಗ ಬೇರೆ ಸ್ವಂತದ ವಹಿವಾಟಿಗೆ ವರ್ಗಾಯಿಸಿದೆ. ಇದು ಲೂಟಿಯ ನೀಚತನದ ಪರಮಾವಧಿ. ಅದನ್ನು ಸ್ವಾಭಾವಿಕ ವ್ಯವಹಾರ ಚಾತುರ್ಯವೆಂದು ಅದ್ವಾನಿ ನೇತೃತ್ವದಲ್ಲಿ ಶೌರಿ-ಮಹಾಜನ್ ಒಪ್ಪಿಕೊಂಡಿದ್ದಾರೆ. ಜಡ್ಡು ಭಾವನೆಗಳು ಆರ್ಥಿಕ ಕ್ಷೇತ್ರವನ್ನು ವ್ಯಾಪಿಸಿದಾಗ ಗುಜರಾತ್ ಹತ್ಯೆಗಳನ್ನು ಮೀರಿಸುವ ಪಾತಕಗಳು ಜರುಗುತ್ತವೆ, ಸಾಮೂಹಿಕ ಜೀವನ ಕದಡಿಹೋಗುತ್ತದೆ, ಸಾಮುದಾಯಿಕ ಮೌಲ್ಯಗಳ ಜಾಗದಲ್ಲಿ ಮೌಢ್ಯ ಮನೆ ಮಾಡಿಕೊಳ್ಳುತ್ತದೆ. ಮತಧರ್ಮದ ಜಡ್ಡುತನವನ್ನು ಆರಾಧಿಸುವ ವಾಜಪೇಯಿ ಸರ್ಕಾರ ಆರ್ಥಿಕ ಜಡ್ಡುತನವನ್ನು ಹಮ್ಮಿಕೊಳ್ಳುವುದು ಆಶ್ಚರ್ಯಕರವಲ್ಲ. ಎಲ್ಲ ರೀತಿಯ ಜಡ್ಡುತನದ ಬಗ್ಗೆ ತಿಳಿವಳಿಕೆಯಿಂದ ಮಧ್ಯಪ್ರವೇಶ ಮಾಡಬೇಕಾದ್ದು ಸಾರ್ವಜನಿಕರ ಕರ್ತವ್ಯವಾಗುತ್ತದೆ.

# ಬಾಗೇವಾಡಿಯಿಂದ ಕವಿಳಾಸಪುರದ ಕಡೆಗೆ...

ಹನ್ನೆರಡನೇ ಶತಮಾನದ ಮಹಾನ್ ಕ್ರಾಂತಿಕಾರಿ, ಸಮಾಜ ಸುಧಾರಕ ಬಸವಣ್ಣನ ತತ್ವಗಳು ಇಂದಿಗೂ ಪ್ರಸ್ತುತ. ಬಸವಣ್ಣ ಪ್ರತಿಪಾದಿಸಿದ ವಾಸ್ತವವಾದದ ಪ್ರಖರತೆ ಇಂದಿಗೂ ಬೆಳಕು ಮೂಡಿಸುವಂಥದ್ದು. ಈ ಕುರಿತು ಅನೇಕ ಕೃತಿಗಳು ಬಿಂಬಿಸಿವೆ. ಈ ಬಗ್ಗೆ ನಾನಿಲ್ಲಿ ಚರ್ಚಿಸುವುದಿಲ್ಲ. ಬಸವಣ್ಣನ ವಂಶಜರು ಬಾಗೇವಾಡಿ ಬಿಟ್ಟು ಕವಿಳಾಸಪುರಕ್ಕೆ ಯಾಕೆ ಬಂದರು ಎಂಬುದೇ ಈ ಲೇಖನದ ವಸ್ತು.



ವಿಶೇಷವಾಗಿ ಬಸವಣ್ಣನ ಬಗ್ಗೆ ಗಮನಹರಿಸಿದಷ್ಟು ಆತನ ತಂದೆ-ತಾಯಿ, ಸಹೋದರ-ಸಹೋದರಿಯರ ಬಗ್ಗೆ ಕೃತಿಕಾರರಾಗಲೀ, ಸಂಶೋಧಕರಾಗಲೀ ಗಮನ ಹರಿಸಿದ್ದು ವಿರಳ. ಆ ದಿಸೆಯಲ್ಲಿ ಹುಡುಕುವ, ಹುಡುಕಿದ್ದನ್ನು ಹೆಕ್ಕಿ ತೆಗೆಯುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ.

ಅರ್ಜುನವಾಡ ಶಾಸನ (೧೨೬೦)ದಲ್ಲಿ ಬಸವಣ್ಣನ ಅಣ್ಣ ದೇವರಾಜನ ಮಗ ಕಲಿದೇವರಸ, ಕಲಿದೇವರಸನ ಮಗ ಹಾಲಬಸವಿದೇವನಿಗೆ ಅಂದರೆ ಬಸವಣ್ಣನ ಅಣ್ಣ ದೇವರಾಜನ ಮೊಮ್ಮಗನಿಗೆ ಅಂದರೆ ಬಸವಣ್ಣನ ಮೊಮ್ಮಗನಿಗೆ ಕವಿಳಾಸಪುರವನ್ನು ದತ್ತಿ ನೀಡಿದ ಉಲ್ಲೇಖ ಸಿಗುತ್ತದೆ. ಕವಿಳಾಸಪುರ ಇಂದು ಇಲ್ಲ. ಅದು ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲ್ಲೂಕಿನ ಅರ್ಜುನವಾಡ ಗ್ರಾಮದ ಆಸುಪಾಸಿನಲ್ಲಿದ್ದ ಒಂದು ಪ್ರಮುಖ ಸ್ಥಳವಾಗಿತ್ತು.

ಬಸವಣ್ಣನ ಊರು ಇಂದಿನ ಬಸವನ ಬಾಗೇವಾಡಿ. ಅಲ್ಲಿ ಇರಬೇಕಾದ ಹಾಲಬಸವಿದೇವ 'ಕವಿಳಾಸಪುರ'ಕ್ಕೆ ಬಂದುದು ಯಾಕೆ, ಯಾವಾಗ ಎಂಬ ಪ್ರಶ್ನೆಗಳು ಸಹಜವಾಗಿ ತಲೆ ತಿನ್ನುತ್ತವೆ. ಇದಕ್ಕಾಗಿ ಅಲ್ಲಿ-ಇಲ್ಲಿ ಹುಡುಕಾಟ ನಡೆಸಿ ಕೊನೆಗೂ ಕೆಲವು ಆಕರಗಳನ್ನು ಮುಂದಿಟ್ಟುಕೊಂಡು, ಆ ಆಕರಗಳ ಸೂಕ್ಷ್ಮ ಎಳೆ ಹಿಡಿದು ಆ ವಿಷಯವನ್ನು ಇಲ್ಲಿ ಚರ್ಚಿಸಲಾಗಿದೆ.

ಇಲ್ಲಿ ಎರಡು ಮಹತ್ವದ ಸಂಗತಿಗಳು ಬಸವಣ್ಣ ಬಾಗೇವಾಡಿ ಬಿಡಲು ಕಾರಣವಾದವುಗಳೆಂಬುದು ಗಮನಾರ್ಹ. ಒಂದು 'ಉಪನಯನ ಸಂಸ್ಕಾರ', ಇನ್ನೊಂದು 'ಬ್ರಾಹ್ಮಣ ಮಗನ ಕೊಲೆ ಆರೋಪ'. ಈ ಎರಡು ಸಂಗತಿಗಳನ್ನು ಹಿಂಜುತ್ತಲೇ ಪ್ರಸ್ತುತ ಲೇಖನವನ್ನು ಚರ್ಚಿಸಲಾಗಿದೆ. ಈ ಎರಡು ಸಂಗತಿಗಳಲ್ಲಿ 'ಉಪನಯನ ಸಂಸ್ಕಾರ'ದ ಕಾರಣವನ್ನೇ ವಿಶೇಷವಾಗಿ ಎಲ್ಲರೂ ತಿಳಿಸಿದ್ದಾರೆ. ಆದರೂ ಈ ಬಗ್ಗೆ ಕೂಡ ಭಿನ್ನಾಭಿಪ್ರಾಯಗಳಿವೆ. ಕೆಲವರು ಬಸವಣ್ಣನಿಗೆ ಉಪನಯನ ಸಂಸ್ಕಾರವಾಯಿತೆಂದೂ, ಇನ್ನೂ ಕೆಲವರು ಆಗಲಿಲ್ಲವೆಂತಲೂ ತಿಳಿಸಿದ್ದಾರೆ.

ಭೀಮ ಕವಿಯ 'ಬಸವಪುರಾಣ'ದ ಪ್ರಕಾರ, ಬಸವಣ್ಣ ಮುಂಜಿಯನ್ನು ನಿರಾಕರಣೆ ಮಾಡಿ ತಂದೆಯೊಡನೆ ವಾದಕ್ಕಿಳಿದು ವಿರಸದಿಂದ ಮನೆ ಬಿಟ್ಟು ಹೋಗುತ್ತಾನೆ. ಆದರೆ ಚೆನ್ನಪ್ಪ ಕವಿಯ 'ಶರಣ ಲೀಲಾಮೃತದಲ್ಲಿ' 'ವಿರಸ'ವನ್ನು ಮರೆಸಿ ಬಸವಣ್ಣನ ಮನೆ ಬಿಡುವ ನಿರ್ಧಾರದಿಂದ ತಂದೆ-ತಾಯಿ ಕಳವಳಗೊಂಡು ದುಃಖಿತರಾಗುತ್ತಾರೆ ಎಂದು ತಿಳಿಸಲಾಗಿದೆ; ಇಲ್ಲಿ ಬಸವಣ್ಣ ವಿರಸದಿಂದ ಕೂಡಲಸಂಗಮಕ್ಕೆ ಹೋಗದೇ ಕುಲದವರು (ಬ್ರಾಹ್ಮಣರು) ಹೀಗಳೆಯಬಾರದೆಂದು ಅಲ್ಲಿಗೆ ಹೋಗುತ್ತಾನೆ. ಇಲ್ಲಿ ಒಬ್ಬರಿಂದ ಒಬ್ಬರು ಕವಿಗಳು ಭಿನ್ನವಾಗಿ ನಿಲ್ಲುತ್ತಾರೆ; ವ್ಯತ್ಯಾಸ ಸ್ಪಷ್ಟವಾಗಿದೆ. ಹರಿಹರನ 'ಬಸದೇವರಾಜ ರಗಳೆ', ಚಾಮರಸನ 'ಪ್ರಭುಲಿಂಗಲೀಲೆ', ಸಿಂಗಿರಾಜನ 'ಬಸವರಾಜ ಚಾರಿತ್ರ್ಯ'ಗಳಲ್ಲಿ ಬಸವಣ್ಣನಿಗೆ ಮುಂಜಿಯಾದ ಬಗ್ಗೆ ಉಲ್ಲೇಖಗಳಿವೆ.

**ಕೆ. ಸಿದ್ರಾಮ**

ಲಕ್ಕಣ್ಣ ದಂಡೇಶನ 'ಶಿವತತ್ವ ಚಿಂತಾಮಣಿ'ಯಲ್ಲಿ ಬಸವಣ್ಣ ಉಪನಯನ ಸಂಸ್ಕಾರ ಧಿಕ್ಕರಿಸಿದಾಗ ತಂದೆ-ತಾಯಿಗಳು ಆ ಗೋಜಿಗೆ ಹೋಗುವುದಿಲ್ಲ. ಅಂದರೆ ಬಸವಣ್ಣನಿಗೆ ಉಪನಯನ ಸಂಸ್ಕಾರ ಆಗುವುದಿಲ್ಲ. ವಿರೂಪಾಕ್ಷ ಪಂಡಿತನ 'ಚೆನ್ನಬಸವ ಪುರಾಣ'ದಲ್ಲಿಯೂ ಬಸವಣ್ಣನಿಗೆ ಉಪನಯನವಾದ ಯಾವುದೇ ಪ್ರಸ್ತಾಪವಿಲ್ಲ.

ಈ ಉಪನಯನ ಸಂಸ್ಕಾರಕ್ಕಿಂತ ಮತ್ತೊಂದು ಅಚ್ಚರಿ ಹುಟ್ಟಿಸುವ ಸಂಗತಿಯೆಂದರೆ, ಬಸವಣ್ಣ ಬ್ರಾಹ್ಮಣನ ಮಗನೊಬ್ಬನನ್ನು ಕೊಲೆ ಮಾಡಿದ ಆರೋಪ ಎದುರಿಸಿದ್ದು. ಈ ಬಗ್ಗೆ ಹೆಚ್ಚಿನ ಕೃತಿಕಾರರು ಗಮನಹರಿಸಿಲ್ಲವೆಂಬುದು ಸ್ಪಷ್ಟ. ಆದರೆ ಲಕ್ಕಣ್ಣ ದಂಡೇಶ, ಸಿಂಗಿರಾಜ, ವಿರೂಪಾಕ್ಷ ಪಂಡಿತ ಮೊದಲಾದವರು ಕೆಲವೇ ಕೆಲವು ಕವಿಗಳು ಈ ಬಗ್ಗೆ ಉಲ್ಲೇಖ ನೀಡಿದ್ದಾರೆ.

ಲಕ್ಕಣ್ಣ ದಂಡೇಶನ 'ಶಿವತತ್ವ ಚಿಂತಾಮಣಿ'ಯಲ್ಲಿ ಮಕ್ಕಳಾಟದಲ್ಲಿ ಬ್ರಾಹ್ಮಣನ ಮಗನೊಬ್ಬ ಬಾವಿಗೆ ಬಿದ್ದು ಸತ್ತಾಗ ಬ್ರಾಹ್ಮಣರೆಲ್ಲ ಬಸವಣ್ಣನ ಮೇಲೆ ಆರೋಪವನ್ನು ಹಾಕಿ ಆತನನ್ನು ಬೆನ್ನಟ್ಟಿದಾಗ ಆತ ಸಂಗಮಕ್ಕೆ ಓಡಿಹೋಗುತ್ತಾನೆ.

ಸಿಂಗಿರಾಜನ 'ಬಸವರಾಜ ಚಾರಿತ್ರ್ಯ'ದಲ್ಲಿ ಬಾಲಕರೆಲ್ಲ ಒಬ್ಬರ ಮೇಲೊಬ್ಬರು ಬಿದ್ದು ಆಡುವ ಆಟದಲ್ಲಿ ಬ್ರಾಹ್ಮಣನ ಮಗನೊಬ್ಬ ಸಾಯುತ್ತಾನೆ. ಆಗ ಮಿಕ್ಕ ಬ್ರಾಹ್ಮಣರೆಲ್ಲ ಸೇರಿ ಬಸವಣ್ಣನ ಮೇಲೆ ಆರೋಪ ಹೊರಿಸಿ, ತಂಡವಾಗಿ ಬಂದು ಆತನ ಬೆನ್ನಟ್ಟುತ್ತಾರೆ. ಅವರಿಂದ ತಪ್ಪಿಸಿಕೊಂಡು ಮನೆಗೆ ಬರುವ ಬಸವಣ್ಣ , ತಂದೆ-ತಾಯಿಗಳಿಗೆ ವಿಷಯ ತಿಳಿಸಿ ಬೇರೊಂದು ಬಾಗಿಲಿನಿಂದ ಸಂಗಮಕ್ಕೆ ಹೋಗುತ್ತಾನೆ.

ವಿರೂಪಾಕ್ಷ ಪಂಡಿತನ 'ಚೆನ್ನಬಸವ ಪುರಾಣ'ದಲ್ಲಿಯೂ ಬ್ರಾಹ್ಮಣನ ಮಗನ ಸಾವಿನ ಆರೋಪ ಹೊತ್ತ ಬಸವಣ್ಣ ಸಂಗಮಕ್ಕೆ ಓಡಿಹೋದ ಪ್ರಸ್ತಾಪವಿದೆ. ಆದರೆ ಇಲ್ಲಿ , ಬಸವಣ್ಣನ ತಂದೆ- ತಾಯಿಗಳೂ ಆತನನ್ನು ಹಿಡಿಯಲು ಬೆನ್ನಟ್ಟುತ್ತಾರೆ ಎಂಬಂಶವನ್ನು ಗಮನಿಸಿದಾಗ ವಿರೂಪಾಕ್ಷ ಪಂಡಿತ ಹಾಗೂ ಸಿಂಗಿರಾಜರ ಅಭಿಪ್ರಾಯಗಳಲ್ಲಿ ವ್ಯತ್ಯಾಸ ಗೋಚರವಾಗುತ್ತದೆ.

ಮುಂದೆ ಬಸವಣ್ಣ ಸಂಗಮಕ್ಕೆ ಹೋದ ನಂತರ ಆತನ ತಂದೆ-ತಾಯಿ-ಸಹೋದರರ ಬಗ್ಗೆ ಯಾವುದೇ ಕೃತಿಕಾರ ಯಾವುದೇ ಪ್ರಸ್ತಾಪವನ್ನು ಸ್ಪಷ್ಟಗೊಳಿಸುವುದೇ ಇಲ್ಲ. ಈ ವಿಷಯ ಕುರಿತ ಚರ್ಚೆಗಾಗಿಯೇ ಮೇಲಿನ ಎಲ್ಲ ಆಕರಗಳನ್ನು ಆಧಾರವಾಗಿಟ್ಟುಕೊಂಡು ಮರೆತುಹೋದ ಆ ಘಟನೆಯನ್ನು ಇಲ್ಲಿ ಊಹಿಸುವ ಪ್ರಯತ್ನ ಮಾಡಲಾಗಿದೆ.

ಬಸವಣ್ಣನ ತಂದೆ ಮಾದಿರಸ, ಶೀಘ್ರ ಕೋಪಿ, ನಿಷ್ಠುರ ಸ್ವ-ಧರ್ಮಾನುಯಾಯಿ ಎಂದು ಕೆಲವು ಕೃತಿಗಳಲ್ಲಿ ಉಲ್ಲೇಖಿಸಲಾಗಿದೆ. ತಾಯಿ ಮಾದಲಾಂಬೆ ಕರುಣಾಮೂರ್ತಿ. ಪತಿಭಕ್ತೆ , ಗಂಡನ ಮಾತಿಗೆ ಎಂದೂ ಎದುರಾಡದವಳು. ಮಾದಿರಸ-ಮಾದಲಾಂಬೆಗೆ ಮೂವರು ಮಕ್ಕಳು. ನಾಗಲಾಂಬೆ, ದೇವರಾಜ ಹಾಗೂ ಬಸವಣ್ಣ. ದೇವರಾಜ ಹಿರಿಯ ಮಗನೋ, ನಾಗಲಾಂಬೆ ಹಿರಿಯ ಮಗಳೋ ಎಂಬ ಬಗ್ಗೆ ಗೊಂದಲವಿದ್ದರೂ ಇವರಿಬ್ಬರಿಗಿಂತ ಚಿಕ್ಕವನು ಬಸವಣ್ಣ.

ದೇವರಾಜನನ್ನು ಪ್ರಕಾಂಡ ಪಂಡಿತನನ್ನಾಗಿ ಮಾಡುವ ಹಂಬಲ ಮಾದಿರಸನಿಗೆ. ಆದರೆ ದೇವರಾಜ ಹಾಗೇನೂ ಆಗಲಿಲ್ಲ ಎಂಬ ಖೇದ ಆತನಿಗೆ. ಬಸವಣ್ಣ ಜನಿಸಿದ ಮೇಲೆ ಆತನ ಬುದ್ಧಿವಂತಿಕೆ ಕಂಡು ಹರುಷಗೊಂಡರೂ ಸಂಪ್ರದಾಯಸ್ಥ ಧರ್ಮದ ಕಟ್ಟಳೆಗಳನ್ನು ಮೀರಿ ಮುರಿಯುತ್ತ ಸಾಗಿದ

ಬಸವಣ್ಣನ ವರ್ತನೆಯಿಂದ ಆಘಾತವಾಗುತ್ತದೆ.

ಬಸವಣ್ಣ ಉಪನಯನ ಸಂಸ್ಕಾರ ಧಿಕ್ಕರಿಸುತ್ತಾನೆ; ನಿಜ. ಆದರೆ ಆತನಿಗೆ ಉಪನಯನ ಸಂಸ್ಕಾರ ಆಗಿಯೇ ಇಲ್ಲ ಎಂಬ ಹೇಳಿಕೆ ಅಷ್ಟು ಸರಿಯಲ್ಲ. ಬಸವಣ್ಣನಿಗೆ ಉಪನಯನ ವಾಗುತ್ತದೆ ಎಂಬುದೇ ನನ್ನ ವಾದ. ಕೇವಲ ಏಳೆಂಟು ವರ್ಷದ ಬಾಲಕನ ನಿರಾಕರಣೆಯ ಮಾತಿಗೆ ಸಂಪ್ರದಾಯಸ್ಥ ಬ್ರಾಹ್ಮಣನೊಬ್ಬ ಮಣಿಯುತ್ತಾನೆ ಎಂಬುದು ಒಪ್ಪತಕ್ಕ ಸಂಗತಿಯಲ್ಲ. ಅದೂ ಮಾದಿರಸನಂತಹ ನಿಷ್ಠುರ ಸ್ವ-ಧರ್ಮಾನುಯಾಯಿ ವ್ಯಕ್ತಿ ಬಾಲ ಬಸವಣ್ಣನ ಮಾತಿಗೆ ಒಪ್ಪಿಗೆ ನೀಡುತ್ತಾನೆಯೇ ? ಇಲ್ಲ. ಬಸವಣ್ಣನಿಗೆ ಉಪನಯನವಾಗುತ್ತದೆ ಎಂಬುದೇ ಒಪ್ಪತಕ್ಕ ಮಾತು.

ಇನ್ನು ಬ್ರಾಹ್ಮಣನ ಮಗನೊಬ್ಬನ ಸಾವಿನ ಆರೋಪ ವನ್ನು ಬಸವಣ್ಣ ಎದುರಿಸಿದ್ದು ವಾಸ್ತವ ಘಟನೆಯಾಗಿ ನಿಲ್ಲು ತ್ತದೆ. ಬಸವಣ್ಣನ ಕಥೆಗಳಲ್ಲಿ ವಿಶೇಷವಾಗಿ ಈ ಘಟನೆಯನ್ನು 'ಮರೆಮಾಚಲಾಗಿದೆ'. ಬಸವಣ್ಣ ಕೆಳಜಾತಿಯ ಮಕ್ಕಳೊಡನೆ ಹೆಚ್ಚಾಗಿ ಬೆರೆಯುತ್ತಿದ್ದ ವಿಚಾರ ಪ್ರತಿ ಬಸವ ಕಥೆಗಳಲ್ಲಿ ಕಾಣ ಬಹುದು. ಹೀಗೆ ಬೆರೆಯುತ್ತಿದ್ದ ಬಸವಣ್ಣನ ಬಗ್ಗೆ ತಕರಾರು ಕೂಡ ಮಾದಿರಸನಿಗೆ ಮುಟ್ಟಿರಬೇಕು. ಆತ ಬಸವಣ್ಣನಿಗೆ 'ತಿಳಿ ಹೇಳಿ' ಅತ್ತ ಸುಳಿಯದಂತೆ ಪ್ರತಿಬಂಧಿಸಿದ್ದು ಸಹಜ. ಅನಿವಾರ್ಯವಾಗಿ ಬಸವಣ್ಣ ಬ್ರಾಹ್ಮಣರ ಮಕ್ಕಳೊಂದಿಗೆ ಬೆರೆಯುವ ಸಂದರ್ಭ ಒದಗಿತು ಎನ್ನಬಹುದು.

ಆ ಬ್ರಾಹ್ಮಣರ ಮಕ್ಕಳೆಲ್ಲ ಬಸವಣ್ಣನನ್ನು ಹೀಯಾಳಿಸಿದಾಗ, ಅವರಿಗೂ ಬಸವಣ್ಣನಿಗೂ ಜಗಳವಾಗಿರಬೇಕು. ಈ ಜಗಳದಲ್ಲಿಯೇ ಬ್ರಾಹ್ಮಣನ ಮಗನೊಬ್ಬ ಸತ್ತಿರಬೇಕು. ಅದು ಬಸವಣ್ಣನಿಂದ ಘಟಿಸಿತೋ, ಆಕಸ್ಮಿಕವಾಗಿ ಆಯಿತೋ ಎಂಬುದು ಪ್ರಸ್ತುತವಲ್ಲ. ಆದರೆ ಆ ಆರೋಪವನ್ನು ಬಸವಣ್ಣನ ಮೇಲೆ ಹೊರಿಸಿ, ಆತನನ್ನು ಶಿಕ್ಷಿಸಲು ಬ್ರಾಹ್ಮಣರು ಧಾವಿಸುತ್ತಾರೆ ಎಂಬುದು ಇಲ್ಲಿ ಬಹುಮುಖ್ಯವಾದ ವಿಚಾರ.

ಬಸವಣ್ಣ ಹೇಗೋ ತಪ್ಪಿಸಿಕೊಂಡು ಸಂಗಮಕ್ಕೆ ಹೋಗು ತ್ತಾನೆ. ಸಂಗಮದಿಂದ ಮುಂದಿನ ಕಥೆ ಎಲ್ಲರಿಗೂ ತಿಳಿದದ್ದೇ. ಇಲ್ಲಿ ಅದು ಅಪ್ರಸ್ತುತ. ಆದರೆ ಮಾದಿರಸ- ಮಾದಲಾಂಬೆ- ದೇವರಾಜರು ಆವಾಗ ಎಂತಹ ಪರಿಸ್ಥಿತಿಯಲ್ಲಿ ಸಿಲುಕಿರಬೇಕು ಎಂಬುದು ವಿಚಾರ ಮಾಡುವಂಥದ್ದು.

ಅಂದಿನ ಕಾಲದಲ್ಲಿ ಧರ್ಮದ ಚೌಕಟ್ಟನ್ನು ಮುರಿದು ಧರ್ಮದ ನಿಯಮಗಳನ್ನು ಉಲ್ಲಂಘನೆ ಮಾಡಿದರೆ ಉಳಿಗಾಲವಿರಲಿಲ್ಲ. ಧರ್ಮದ ಬಗ್ಗೆ ಅವಹೇಳನ ಕಂಡಲ್ಲಿ ತಲೆ ತೆಗೆಯುವ ಕಾಲವದು. ಅಂಥದರಲ್ಲಿ ಧರ್ಮದ ಕಟ್ಟಳೆ ಮುರಿಯಲು ಹವಣಿಸುತ್ತಿದ್ದ ಬಸವಣ್ಣನ ಬಗ್ಗೆ ಬ್ರಾಹ್ಮಣರಲ್ಲಿ ಸಹಜವಾಗಿ ರೊಚ್ಚು ಮೂಡಿತ್ತು. ಅವರಿಗೊಂದು ನೆವ ಬೇಕಾಗಿತ್ತು. ಯಾಕೆಂದರೆ ಮಾದಿರಸ ಅಗ್ರಹಾರದ ಅಗ್ರಜ. ಆತನನ್ನು ನೇರವಾಗಿ ಎದುರುಹಾಕಿ ಕೊಳ್ಳಲು ಅವರು ಹಿಂಜರಿದಿರಬೇಕು. ಬ್ರಾಹ್ಮಣನೊಬ್ಬನ ಮಗನ ಸಾವು ಅವರಿಗೆ ಅನುಕೂಲವಾಯಿತು.

ಅಧಿಕಾರದ ಲಾಲಸೆಯ ರಾಜಕಾರಣದಲ್ಲಿ ಗದ್ದುಗೆ ಏರುವ ಹಂಬಲದ ಕೆಲ ಬ್ರಾಹ್ಮಣರು ಮಾದಿರಸನನ್ನು ಅಧಿಕಾರದಿಂದ ಕಿತ್ತೊಗೆದು ತಾವು ಆ ಸ್ಥಾನಪನ್ನಾಕ್ರಮಿಸಲು ಹೊಂಚುಹಾಕಿರುವ ಸಂಭವವಿದೆ. ಬಸವಣ್ಣನ ಮೇಲೆ ಕೊಲೆ ಆರೋಪ ಹೊರಿಸಿದ ಸಂದರ್ಭವನ್ನು ಅವರು ಬಳಸಿಕೊಂಡಿದ್ದಾರೆ. ಮಾದಿರಸನ ಕುಟುಂಬವನ್ನೇ ಇನ್ನಿಲ್ಲದಂತೆ ನಿರ್ನಾಮ ಮಾಡುವ ಸಂಚು ಮಾದಿರಸನಿಗೆ ಯಾರಿಂದಲೋ ತಿಳಿದುಬಂದಿರಬೇಕು. ಅಪಾಯವನ್ನರಿತ ಆತ ತನ್ನ ಕುಲ ಕಾಪಾಡಿಕೊಳ್ಳುವ ಉದ್ದೇಶದಿಂದ ಬಾಗೇವಾಡಿ ಬಿಟ್ಟು ಯಾರಿಗೂ ಗೊತ್ತಾಗದಂತೆ ಪಲಾಯನಗೈಯ್ದಿರಬೇಕು; ಇಲ್ಲವೆ ಹೊಂಚು ಹಾಕಿದ್ದ ಜನ ಮಾದಿರಸನಿಗೆ ಬಹಿಷ್ಕಾರ ಹಾಕಿದಾಗ ಆತ ಅನಿವಾರ್ಯವಾಗಿ ನೆಲೆ ಹುಡುಕುತ್ತ ಅಲೆದಿರಬೇಕು.

ಹೀಗೆ ಬಾಗೇವಾಡಿಯಿಂದ ಚ್ಯುತವಾದ ಮಾದಿರಸನ ಕುಟುಂಬ ಅಲ್ಲಿ - ಇಲ್ಲಿ ಅಲೆದಾಡುತ್ತ ಬಂದು 'ಕವಿಳಾಸಪುರ'ದಲ್ಲಿ ನೆಲೆ ನಿಂತಿರಬೇಕು. ಕಾಲಕ್ರಮೇಣ ಮಾದಿರಸ-ಮಾದಲಾಂಬೆ, ದೇವರಾಜನ ಮದುವೆ ಮಾಡಿಯೋ ಅಥವಾ ಅದಕ್ಕೂ ಮುಂಚೆಯೇ ಗತಿಸಿರಬೇಕು.

ಬಸವಣ್ಣನಿಂದಲೇ ತಾವು ಹೀಗೆ ಊರು ಬಿಟ್ಟು ಅಲೆದಾಡುವಂತಾದದ್ದು, ಕಷ್ಟ ಅನುಭವಿಸುವಂತಾದದ್ದು ಎಂಬ ಸಿಟ್ಟು ದೇವರಾಜನಿಗೆ ಇದೆ. ಬಸವಣ್ಣ ಕಲ್ಯಾಣದಲ್ಲಿ ಬೆಳಗಿ ಪ್ರಸಿದ್ಧಿ ಪಡೆದರೂ ನಾಡಿನ ಮೂಲೆ-ಮೂಲೆ ಗಳಿಂದ ಶರಣರು ಬಂದು ಬಸವಣ್ಣನನ್ನು ಸಂದರ್ಶಿಸಿ ಹೋಗುತ್ತಿದ್ದರಾದರೂ ದೇವರಾಜ ಮಾತ್ರ ಆತನನ್ನು ಭೆಟ್ಟಿಯಾದಂತಿಲ್ಲ. ಇದರಿಂದ ದೇವರಾಜನಿಗೆ ಬಸವಣ್ಣನ ಮೇಲೆ ಸಿಟ್ಟಿತ್ತು ಎಂಬುದು ಖಚಿತಗೊಳ್ಳುತ್ತದೆ. ಹಾಗೇ ಬಸವಣ್ಣ ಕೂಡ ಇತ್ತ ಒಲುವು ತೋರಿಲ್ಲವೆಂಬುದು ಅಷ್ಟೇ ಸತ್ಯ.

> *''ಅಣ್ಣ-ತಮ್ಮ ಹೆತ್ತಣ್ಣ ಗೋತ್ರವಾದರೇನು*
> *ಲಿಂಗ ಸಾಹಿತ್ಯವಿಲ್ಲದವರ ಎನ್ನವರೆನ್ನೆನಯ್ಯ*
> *ನಂಟು ಭಕ್ತಿ ನಾಯಕ ನರಕ*
> *ಕೂಡಲಸಂಗಮದೇವಾ''*

– ಈ ವಚನ ಮೇಲಿನ ಮಾತಿಗೆ ಪುಷ್ಟಿ ನೀಡುತ್ತದೆ. 'ಧರ್ಮವನ್ನು ತೊರೆದು ನಿಂತ ಅವರು (ಬಸವಣ್ಣ) ಪೂರ್ವ ಸಂಬಂದವನ್ನು ಕಡಿದು ಕೊಂಡಿರಬೇಕು.'' (ಎಂ. ಎಂ. ಕಲ್ಬುರ್ಗಿ).

ಅದೇ ರೀತಿ ಬಸವಣ್ಣ ವೀರಶೈವ ಧರ್ಮವನ್ನು ಸಾರಿದರೂ ದೇವರಾಜ ಮಾತ್ರ ತಮ್ಮ ಹಳೆಯ ಶೈವಮತವನ್ನೇ ಅಂಗೀಕರಿಸಿ ಬದುಕಿದ್ದು ಸಂಭವನೀಯ ವೆನಿಸುತ್ತದೆ. ಮುಂದೆ ಕಲಿದೇವರಸ, ಹಾಲಬಸವಿ ದೇವರೂ ಕೇವಲ ಶೈವರಾಗಿಯೇ ಉಳಿಯುತ್ತಾರೆ. ಇದಕ್ಕೆ ಪುರಾವೆಯಾಗಿ ಅರ್ಜುನವಾಡ ಶಾಸನ ನಿಲ್ಲುತ್ತದೆ. ಬಸವಣ್ಣ ಮೂರ್ತಿಪೂಜೆ, ಗುಡಿ-ಗುಂಡಾರಗಳನ್ನು ಧಿಕ್ಕರಿಸಿ ತತ್ವಗಳನ್ನು ಸಾರಿದ್ದರೆ, ಅದೇ ವಂಶದವನಾದ ಹಾಲಬಸವಿದೇವ 'ಕವಿಳಾಸಪುರ'ವನ್ನು ದತ್ತಿ ಸ್ವೀಕರಿಸಿದ ವಿಷಯ ಶಾಸನದಲ್ಲಿ ಉಲ್ಲೇಖಿತವಾಗಿದೆ.

ಇಲ್ಲಿಯವರೆಗೆ ಪ್ರಸ್ತಾಪಿಸಿದ ಪ್ರತಿಯೊಂದು ವಿಚಾರ ಕೂಡ ಇತಿಹಾಸಕ್ಕೆ ಸಮೀಪವಾದಂಥವು. ಪುರಾಣ ಪವಾಡ ಗಳ ಕಲ್ಪಕತೆಯಲ್ಲಿ ಇರುವುದಕ್ಕಿಂತ ತರ್ಕಬದ್ಧ ಮತ್ತು ಸತ್ಯದ ಸಮೀಪವನ್ನು ತಲುಪುವುದು ಬಹುಮುಖ್ಯ. ಈ ದಿಸೆಯಲ್ಲಿ ಸಹೃದಯರು ಮುಕ್ತಮನಸ್ಸಿನಿಂದ ಚರ್ಚೆ ನಡೆಸಬೇಕು.

**ಕೆ. ಸಿದ್ರಾಮ**
ಎ/೩, ಗಿರೀಶ್ ಕಾಂಪ್ಲೆಕ್ಸ್, ರಾಮದೇವಗಲ್ಲಿ, ಬೆಳಗಾವಿ-೫೯೦ ೦೦೨

## ಸಾದರ ಸ್ವೀಕಾರ

**ಪ್ರೀತಿಯ ಸೋನೆ** (ಕವಿತೆ) *ಡಿ. ಮೀನಾಕ್ಷಿ*
**ಪುಟ : ೭೬** **ಬೆಲೆ : ರೂ. ೩೦**
**ಮಯ ಪ್ರಕಾಶನ**, ಸೀತಾರಾಮ್‌ಸಿಂಗ್ ಬಿಲ್ಡಿಂಗ್,
ಕಮಲಾಪುರ-೫೮೩೨೨೧

**ನಿಂಗು ಸೊಲಗಿಯ ಮಕ್ಕಳ ನಾಟಕಗಳು**
*ನಿಂಗು ಸೊಲಗಿ*
**ಪುಟ : ೭೦** **ಬೆಲೆ : ರೂ. ೩೦**
**ಚಿಲಿಪಿಲಿ ಪ್ರಕಾಶನ**, ಶಿವಾನಂದ ನಗರ, ಧಾರವಾಡ

**ರೆಕ್ಕೆ - ಗೂಡು - ಆಕಾಶ** (ಕವನ ಸಂಕಲನ)
*ಶೇಷಾದ್ರಿ, ಹೊಳವನಹಳ್ಳಿ*
**ಪುಟ : ೧೪೬** **ಬೆಲೆ : ರೂ. ೪೦**
**ಕಮಲ ಪ್ರಕಾಶನ**, ರಾಮಮಂದಿರ,
ಹೊಳವನಹಳ್ಳಿ - ೫೭೨ ೧೨೧

**ಮುಖಾಮುಖಿ** (ಲೇಖನ ಸಂಗ್ರಹ)
*ಸಂ: ಡಾ|| ಪ್ರಭು ಖಾನಾಪುರೆ*
**ಪುಟ : ೧೬೦** **ಬೆಲೆ : ರೂ. ೬೦**
[illegible] **ಚೆನ್ನಬಸವ ಪಟ್ಟದ್ದೇವರು ಪ್ರತಿಷ್ಠಾನ**,
ಹಿರೇಮಠ ಸಂಸ್ಥಾನ, ಭಾಲ್ಕಿ - ೫೮೫ ೩೨೮

**ಅರ್ಥಶೋಧ** (ವೈಚಾರಿಕ ಪ್ರಬಂಧಗಳು)
*ಅರವಿಂದ ಚೊಕ್ಕಾಡಿ*
**ಪುಟ : ೧೦೮** **ಬೆಲೆ : ರೂ. ೫೫**
**ಸ್ವಾತಿಕಾ ಸಾಹಿತ್ಯ ಬಳಗ**, ಸುಳ್ಯ (ದ.ಕ.) ೫೭೪ ೨೩೯

**ಬಾಯಾರಿಕೆ** (ಕವನ ಸಂಕಲನ) *ಡಾ|| ವಿನಯಾ*
**ಪುಟ : ೭೦** **ಬೆಲೆ : ರೂ. ೩೫**
**ಲಡಾಯಿ ಪ್ರಕಾಶನ**, ೪೨, ಪ್ರಸಾದ್ ಲಾಡ್ಜ್, ಗದಗ

**ಕಡಲಾಚೆಯ ತುದಿಗೆ** (ಕವನ ಸಂಕಲನ)
*ಲಕ್ಷ್ಮಣ ಗಂಟಿ*
**ಪುಟ : ೭೨** **ಬೆಲೆ : ರೂ. ೩೫**
**ಕವಿತಾ ಪ್ರಕಾಶನ**, ಹರಪನಹಳ್ಳಿ

**ದಟ್ಟದಾವಣಿ** (ಕವನ ಸಂಕಲನ) *ಶಂಕರ ಕಟಗಿ*
**ಪುಟ : ೧೦೦** **ಬೆಲೆ : ರೂ. ೫೦**
**ಸಂಕೇತ ಪ್ರಕಾಶನ**, ನಂ. ೧೦, ಸಿ.ಎಂ.ಸಿ.
ಕಾಲೊನಿ, ಇಬ್ರಾಹಿಂಪುರ, ಬಿಜಾಪುರ

**ಭಕ್ತಿ : ಭಜನೆ ಮತ್ತು ಕೆಳವರ್ಗ** (ಲೇಖನಗಳು)
*ಡಾ|| ವೀರೇಶ ಬಡಿಗೇರ*
**ಪುಟ : ೪೫** **ಬೆಲೆ : ರೂ. ೧೫**
**ಮಯ ಪ್ರಕಾಶನ**, ಸೀತಾರಾಮ್‌ಸಿಂಗ್ ಬಿಲ್ಡಿಂಗ್,
ಕಮಲಾಪುರ - ೫೮೩ ೨೨೧

**ಕರ್ನಾಟಕದ ಭಾಷಾ ನೀತಿ** (ಪ್ರಬಂಧಗಳು)
(ಇಂಗ್ಲಿಷಿನಲ್ಲಿ) *ಡಾ|| ಮಿಡತಲ ರಾಣಿ*
**ಪುಟ : ೨೭೮** **ಬೆಲೆ : ರೂ. ೧೨೫**
**ಗಾಯತ್ರಿ ಪೀಠ ಮಹಾಸಂಸ್ಥಾನ**
ದೇವಾಂಗ ಹಾಸ್ಟೆಲ್, ಸಂಪಂಗಿರಾಮನಗರ
ಬೆಂಗಳೂರು - ೫೬೦ ೦೨೭

# ಜಾಗತೀಕರಣಧ ವಿರುದ್ಧವಾಗಿ ಸಂಸ್ಕೃತಿ ಒಂದು ಆಯುಧ

■

*ಕೇರಳದ ಕೋಳಿಕ್ಕೋಡ್ ವಿಶ್ವವಿದ್ಯಾಲಯದಲ್ಲಿ ಇ.ಎಂ. ಎಸ್. ನಂಬೂದ್ರಿಪಾದರ ಹೆಸರಿನಲ್ಲಿ ಪೀಠವೊಂದನ್ನು ಸ್ಥಾಪಿಸಲಾಗಿದೆ. ಅದರ ವತಿಯಿಂದ ಈ ವರ್ಷ ಯೋಜಿಸಲಾಗಿದ್ದ ಉಪನ್ಯಾಸವನ್ನು ನೀಡಿದವರು ಶ್ರೀ ಕೃಷ್ಣ ಅನಂತ್. ಉಪನ್ಯಾಸದ ಸಂಕ್ಷಿಪ್ತ ರೂಪವನ್ನಿಲ್ಲಿ ಕೊಡಲಾಗಿದೆ.*

**ವಿ. ಕೃಷ್ಣ ಅನಂತ್**

**ಸ್ವಾ**ತಂತ್ರ್ಯ ನಂತರದ ದಿವಸಗಳು ಅಂದರೆ ಪ್ರಧಾನಿ ಜವಹರಲಾಲ್ ನೆಹರು ಅವರ ಸರಕಾರ ತನ್ನ ಪ್ರಮುಖ ಧೋರಣೆಯಾಗಿದ್ದ ಸರಕಾರದ ಸ್ವಾಮ್ಯಕ್ಕೆ ಒಳಪಟ್ಟ ಕ್ಷೇತ್ರಗಳ ಸ್ಥಾಪನೆಗೆ ಇತ್ತ ಪ್ರೋತ್ಸಾಹ ಮತ್ತು ಇತರ ಸಮಾಜವಾದಿ ಆರ್ಥಿಕ ನೀತಿಗಳನ್ನು ಅನುಸರಿಸುತ್ತಿದ್ದ ಕಾಲ. ನಂತರ ಪಿ. ವಿ. ನರಸಿಂಹರಾಯರ ನೇತೃತ್ವದ ಕಾಂಗ್ರೆಸ್ ಸರಕಾರ ಅದಕ್ಕೆಲ್ಲ ತಿಲಾಂಜಲಿಯಿತ್ತು ಈಗಾಗಲೇ ಒಂದು ದಶಕ ಕಳೆದಿದೆ. ಹೊಸ ಆರ್ಥಿಕ ನೀತಿ, ಉದಾರೀಕರಣ, ಜಾಗತೀಕರಣಗಳ ಹೆಸರಿನಲ್ಲಿ ಭಾರತದ ಭಾಗ್ಯದ ಬಾಗಿಲನ್ನು ತೆರೆದಿಡುತ್ತೇವೆಂದು ನರಸಿಂಹರಾಯರ ಜೊತೆಯಲ್ಲಿ ಘೋಷಿಸಿದವರು ಅಂದಿನ ವಿತ್ತ ಮಂತ್ರಿ ಮನಮೋಹನ್ ಸಿಂಗ್. ಇದು ಜರುಗಿದ್ದು ೧೯೯೧ರಲ್ಲಿ. ದೇಶದಲ್ಲಿನ ಕೋಮು ಸಾಮರಸ್ಯಕ್ಕೆ ಆಧಾರವಾದ ಜಾತ್ಯತೀತತೆಯು ಈ ಪ್ರಕ್ರಿಯೆಯ ಭಾಗವಾಗಿ ನಗಣ್ಯವಾಗಿರುವುದೂ ಈ ಕಾಲಾವಧಿಯಲ್ಲಿಯೇ.

ಭಾರತದ ಆರ್ಥಿಕತೆ ಬೆಳೆಯಬೇಕಾದರೆ, ನಮ್ಮೆಲ್ಲ ಆರ್ಥಿಕ ರೋಗರುಜಿನಗಳನ್ನು ನಿವಾರಿಸಬೇಕಾದರೆ ಜಾಗತೀಕರಣವಲ್ಲದೆ ಪರ್ಯಾಯ ಮಾರ್ಗವಿಲ್ಲವೆನ್ನುವ ಏಕೈಕ ವಾದದ ಆಧಾರದ ಮೇಲೆ ಈಗಿನ ಭಾಜಪ ನೇತೃತ್ವದ ಎನ್. ಡಿ. ಎ ಸರಕಾರ ತನ್ನ ಎಲ್ಲ ಜನವಿರೋಧಿ ನೀತಿಗಳನ್ನು ಹಮ್ಮಿಕೊಂಡಿದೆ. ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ, ವಿಶ್ವಬ್ಯಾಂಕ್ ಮತ್ತು ವಿಶ್ವವ್ಯಾಪಾರ ಸಂಸ್ಥೆಗಳ ಆದೇಶಗಳಿಗೆ ತಲೆಬಾಗಿ ಜನತೆಯ ಭವಿಷ್ಯದೊಡನೆ ಚೆಲ್ಲಾಟವಾಡುತ್ತಿರುವ ದೇಶದ ಬಂಡವಾಳಶಾಹಿ ಆಡಳಿತ ವರ್ಗ ಭಾರತದ ಸಾರ್ವಭೌಮತ್ವವನ್ನೇ ಒತ್ತೆಗಿಟ್ಟಿದೆ. ಇದರಿಂದಾಗಿ, ದೇಶದ ಆರ್ಥಿಕ ಕ್ಷೇತ್ರವಲ್ಲದೆ ಸಾಮಾಜಿಕ, ಶೈಕ್ಷಣಿಕ ಕ್ಷೇತ್ರಗಳಲ್ಲೂ ಭೀಕರ ಪರಿಣಾಮಗಳು ಸಂಭವಿಸುತ್ತಿವೆ. ಜನತೆ ತತ್ತರಿಸಿ ಹೋಗಿದ್ದಾರೆ.

ಈ ಹಿನ್ನೆಲೆಯಲ್ಲಿ, ನೆಹರು ಕಾಲದ ನೀತಿಗಳನ್ನು ನೆನೆಗುದಿಗೆ ತಳ್ಳಿ ಹೊಸ ಆರ್ಥಿಕ ನೀತಿಯನ್ನು ಜಾರಿಗೆ ತಂದ ಬಗೆ ಮತ್ತು ಈ ವಿಪತ್ಕಾರಿ ಜಾಗತೀಕರಣದ ವಿರುದ್ಧ ಜನಪರ ಹೋರಾಟಗಳನ್ನು ರೂಪಿಸುವ ನಿಟ್ಟಿನಲ್ಲಿ ರಾಷ್ಟ್ರದ ಮುಂದಿರುವ ಜವಾಬ್ದಾರಿಗಳ ಬಗ್ಗೆ ಆಳವಾದ ವಿಶ್ಲೇಷಣೆಯ ಅವಶ್ಯಕತೆಯಿದೆ.

೧೯೪೭ರಲ್ಲಿ ಬ್ರಿಟಿಷರಿಂದ ಅಧಿಕಾರ ಪಡೆದುಕೊಂಡ ಸಂದರ್ಭದಲ್ಲಿ ರಾಜಕೀಯ ನಾಯಕತ್ವದಲ್ಲಿದ್ದವರು ಕಾರ್ಲ್ ಮಾರ್ಕ್ಸ್ ಪ್ರತಿಪಾದಿಸಿದ ಕ್ರಾಂತಿಗೆ ವಿರುದ್ಧವಾಗಿದ್ದವರೇ. ಎಂದೇ ೧೯೫೦ರ ದಶಕಗಳಲ್ಲಿ ಕಾರ್ಮಿಕ ವರ್ಗ ಹಾಗೂ ರೈತಾಪಿಜನ ಸಂಘಟಿಸಿದ ಎಲ್ಲ ಮುಷ್ಕರಗಳನ್ನು ಹೋರಾಟಗಳನ್ನು ಬಗುಬಡೆಯಲು ಅಂದಿನ ಸರಕಾರ ಮುಂದಾದದ್ದು. ಹಾಗೆ ನೋಡಿದರೆ, ಸ್ವಾತಂತ್ರ್ಯದ ಪೂರ್ವದಲ್ಲಿಯೇ ಬೃಹತ್ ಕೈಗಾರಿಕೆಗಳಲ್ಲಿ ಬಂಡವಾಳದ ಹೂಡಿಕೆ, ಅದರಿಂದ ಉಂಟಾಗುವ ಉದ್ಯೋಗ ಸೃಷ್ಟಿ, ಬಡತನ ನಿವಾರಣಾ ಕ್ರಮಗಳು, ಖೋತಾ ಬಜೆಟ್, ಸ್ಥಳೀಯ ಮಾರುಕಟ್ಟೆ ವ್ಯಾಪಕತೆಯ ಹೆಚ್ಚಳ ಇತ್ಯಾದಿ ಧೋರಣೆಗಳನ್ನೊಳಗೊಂಡ 'ಬಾಂಬೆ ಯೋಜನೆ'ಯನ್ನು ಬಂಡವಾಳಶಾಹಿ ಪ್ರತಿನಿಧಿಗಳು ಮಂಡಿಸಿದ್ದರು. ಏನೇ ಆದರೂ, ಪೂರ್ವ ಏಷ್ಯ ರಾಷ್ಟ್ರಗಳಂತೆ ಇಲ್ಲಿಯೂ ಬೇಸಾಯ ಕ್ಷೇತ್ರವನ್ನು ಪಾಳೇಗಾರಿ ಬಿಗಿ ಹಿಡಿತದಿಂದ ತಪ್ಪಿಸಿ ಭೂಸುಧಾರಣೆಯನ್ನು ಜಾರಿಗೆ ತರುವ ಯಾವ ಕ್ರಮವನ್ನೂ ಕೈಗೊಳ್ಳದೇ ಇದ್ದುದನ್ನು ನಾವು ಗಮನದಲ್ಲಿಡಬೇಕು. ಇದರ ಹಿಂದಿನ ರಾಜಕೀಯ ಕಾರಣಗಳು ಏನೆಂಬುದನ್ನು ತಿಳಿಯಲು ಕಷ್ಟವೇನಲ್ಲ. ಬಹುಶಃ ಭೂ ಸುಧಾರಣೆಯಿಂದ ರೈತಾಪಿಜನತೆ ಮತ್ತು ಕಾರ್ಮಿಕ ವರ್ಗಗಳ ಧ್ರುವೀಕರಣ ಅಂದಿನ ರಾಜಕೀಯ ಪರಿಸ್ಥಿತಿಯನ್ನೇ ಬದಲಾಯಿಸಿಬಿಡಬಹುದೆಂಬ ಭಯವೂ ಆಳುವ ವರ್ಗಕ್ಕೆ ಇದ್ದಿರಬಹುದು.

ಭಾರತದ ವ್ಯಾಪಾರಸ್ಥ ವರ್ಗ ರೂಪಿಸಿದ 'ಬಾಂಬೆ ಯೋಜನೆ' ನೆಹರು ಅವರ ಕಾಲದಲ್ಲಿಯೇ ಆಚರಣೆಗೆ ಬಂದಿತು. ಇದರಿಂದಾಗಿ ಅಸ್ತಿತ್ವಕ್ಕೆ ಬಂದ ಸರಕಾರಿ ಸ್ವಾಮ್ಯದ ಕ್ಷೇತ್ರದ ಉದ್ಯಮಗಳ ಒಡೆತನವನ್ನು ನಂತರದ ದಿನಗಳಲ್ಲಿ ಖಾಸಗಿಯವರಿಗೆ ವರ್ಗಾಯಿಸುವ ಅಂಶವೂ 'ಬಾಂಬೆಯೋಜನೆ'ಯ ಒಂದು ಮುಖ್ಯ ಭಾಗ. ಈ ನಿಟ್ಟಿನಲ್ಲಿ ವಿವಿಧ ಪಕ್ಷಗಳು ಪಾಲ್ಗೊಳ್ಳಬಹುದಾದ ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆ ಜಾರಿಗೆ ಬಂದಿತಾದರೂ ಇಡೀ ಸ್ವಾತಂತ್ರ್ಯ ಚಳವಳಿಗೆ ತಾನೇ ವಾರಸುದಾರನೆಂಬ ಪ್ರಚಾರದ ಮೇಲೆ ಕಾಂಗ್ರೆಸ್ ಅಧಿಕಾರದ ಗದ್ದುಗೆಯನ್ನೇರಿತು. ಅಷ್ಟೇ ಹೋರಾಟಗಳನ್ನು, ತ್ಯಾಗಬಲಿದಾನಗಳನ್ನು ಮಾಡಿದ ಕಮ್ಯೂನಿಸ್ಟರು ನೆಹರು, ಆಜಾದ್, ಸರದಾರ ಪಟೇಲರ ವರ್ಚಸ್ಸಿಗೆ ಸರಿಸಮಾನರಾಗಿ ತೂಗದೆ ಮಿಂಚದಿದ್ದದ್ದು ಚಾರಿತ್ರಿಕ ಸತ್ಯ. ಭೂ ಸ್ವಾಮಿಗಳು, ಹಣವಂತ ರೈತರು ಮತ್ತು ಮೇಲ್ವರ್ಗದ ಜನ ವಿಭಾಗಗಳು ಕಾಂಗ್ರೆಸ್‌ಗೆ ಬೆಂಬಲವಾಗಿ ನಿಂತರು. ಮೇಲಾಗಿ ದಲಿತರು ಮತ್ತು ಮುಸ್ಲಿಮರು ತಮ್ಮ ಉದ್ಧಾರಕ್ಕಾಗಿ ಕಾಂಗ್ರೆಸ್ಸಿಗೆ ಮೊರೆಹೋದರು. ಆದರೆ ಅದೊಂದು ಕೇವಲ ಭ್ರಮೆಯಾಗಿ ಪರಿಣಮಿಸಿದ್ದು ಈಗ ಪ್ರಸ್ತುತವಲ್ಲ. ಹೀಗೆ ನಿರಾಯಾಸವಾಗಿ ವಿವಿಧ ಜನ ವಿಭಾಗಗಳ ಬೆಂಬಲ ಪಡೆದುಕೊಂಡ ಕಾಂಗ್ರೆಸ್ ಪಕ್ಷಕ್ಕೆ ಶೋಷಿತ ವರ್ಗದತ್ತ ದೃಷ್ಟಿ ಹಾಯಿಸುವ ಅವಶ್ಯಕತೆಯೇ ಇಲ್ಲದಾಯಿತು. ಮೊದಲ ಮೂರು ಪಂಚವಾರ್ಷಿಕ ಯೋಜನೆಗಳೇ ಈ ಅಂಶವನ್ನು ಸಾಬೀತುಪಡಿಸುತ್ತವೆ.

ಅನಂತರ ಪಂಚವಾರ್ಷಿಕ ಯೋಜನೆಗಳನ್ನು ಕೈಬಿಟ್ಟು ವಾರ್ಷಿಕ ಯೋಜನೆಗಳನ್ನು ಅಳವಡಿಸಿಕೊಂಡ ಸರಕಾರ ದವಸಧಾನ್ಯ ಸಂಗ್ರಹಣೆ, ಗೊಬ್ಬರಗಳಿಗೆ ರಿಯಾಯಿತಿ ಇತ್ತಿತ್ತಲ್ಲದೆ ಭಾರತೀಯ ಆಹಾರ ನಿಗಮವನ್ನು ಪ್ರಾರಂಭಿಸುವುದಕ್ಕೆ ಆದ್ಯತೆ ನೀಡಿ ಸ್ಥಾಪಿಸಿತಾದರೂ ಬೆಲೆ ಏರಿಕೆಯನ್ನು ತಡಗಟ್ಟಲಾರದೆ ಹೋಯಿತು. ಈ ಬೆಲೆ ಏರಿಕೆಯಿಂದ ತೀವ್ರವಾಗಿ ಕಂಗೆಟ್ಟವರು ಹಳ್ಳಿಗಾಡಿನ ಜನತೆ. ಇದೆಲ್ಲದರ ಪರಿಣಾಮ ೧೯೬೭ರ ಚುನಾವಣೆಗಳಲ್ಲಿ ಮೊದಲ ಬಾರಿ ಕಾಂಗ್ರೆಸ್‌ಗೆ ಹೀನಾಯ ಸೋಲು. ಅದರಲ್ಲೂ ಉತ್ತರ ಪ್ರದೇಶ, ಮಧ್ಯ ಪ್ರದೇಶ ಮತ್ತು ಬಿಹಾರದ ಹಣವಂತ ರೈತಾಪಿ ವರ್ಗದ ಪ್ರಭಾವ ಕಾಂಗ್ರೆಸ್ ಸೋಲಿಗೆ ಕಾರಣವಾದ ಮುಖ್ಯ ಅಂಶ. ಅದೇ ವರ್ಗ ರಾಜಕೀಯದಲ್ಲಿ ತಮ್ಮ ಹಿಡಿತವನ್ನು ಗಟ್ಟಿಮಾಡಿಕೊಳ್ಳಲು ಪ್ರಾರಂಭವಾದದ್ದು ಆವಾಗಲೇ. ಬಿಕ್ಕಟ್ಟಿನಲ್ಲಿ ಸಿಕ್ಕ ಇಂದಿರಾ ಗಾಂಧಿ ನೇತೃತ್ವದ ಕಾಂಗ್ರೆಸ್ ಮರುಜೀವ ಪಡೆದುಕೊಳ್ಳಲು ಬ್ಯಾಂಕ್ ರಾಷ್ಟ್ರೀಕರಣ, ರಾಜಧನ ರದ್ಧತಿ, ಸಾರ್ವಜನಿಕ ವಿತರಣಾ ವ್ಯವಸ್ಥೆಯಂತಹ 'ಸಮಾಜವಾದಿ' ಯೋಜನೆಗಳಿಗೆ ಮೊರೆಹೋದದ್ದು ಒಂದು ವಿಪರ್ಯಾಸ. ಭೂಸುಧಾರಣೆಗಳಿಗೆ ಕಿಂಚಿತ್ತೂ ಆದ್ಯತೆ ಕೊಡದೆ ಅಂದು ಜರುಗಿದ ಹಸಿರು ಕ್ರಾಂತಿಯ ಲಾಭವನ್ನೂ ಪಡೆಯದೆ ಕಾಂಗ್ರೆಸ್ ಮುಗ್ಗರಿಸಿತು.

ಈ ಕಾಲಘಟ್ಟದಲ್ಲಿ ಗಮನಿಸಬೇಕಾದ ಬಹುಮುಖ್ಯ ಸಾಮಾಜಿಕ ಬೆಳವಣಿಗೆಯೆಂದರೆ ಭಾರತದ ಮಧ್ಯಮ ವರ್ಗ ದೊಡ್ಡ ರೀತಿಯಲ್ಲಿ ವ್ಯವಸ್ಥೆಯ ಭಾಗವಾಗಿದ್ದು, ಅಲ್ಲಿಯವರೆಗೂ ಕಾರ್ಮಿಕರೆನಿಸಿಕೊಂಡಿದ್ದವರು ಮಧ್ಯಮವರ್ಗದವರಾಗಿ ಬೆಳೆದದ್ದು. ಮಧ್ಯಮ ವರ್ಗದ ಎಲ್ಲ ಲಕ್ಷಣಗಳನ್ನೂ ಅಳವಡಿಸಿಕೊಂಡ ಈ ಮಾಜಿ ಕಾರ್ಮಿಕ ಗೆಳೆಯರು ತಮ್ಮ ಎಲ್ಲ ಉನ್ನತಿಗೆ ಕಾರಣವಾದ ಕಾರ್ಮಿಕ ಸಂಘಟನೆಗಳನ್ನು ನೋಡುವ ದೃಷ್ಟಿಕೋನವೇ ಕ್ರಮೇಣ ಬದಲಾಗಿದ್ದು ಬಹಳ ಕುತೂಹಲಕಾರಿ ವಿಷಯ. ರಾಷ್ಟ್ರದ ಜನಸಂಖ್ಯೆಯ ಶೇಕಡ ೧೦ ರಿಂದ ೧೫ರಷ್ಟಿರುವ ಮಧ್ಯಮ ವರ್ಗ (೧೦ರಿಂದ ೧೫ ಕೋಟಿ)ರಾಷ್ಟ್ರದ ಅನೇಕ ರಾಜಕೀಯ, ಸಾಮಾಜಿಕ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಬಹುಮುಖ್ಯ ಸ್ಥಾನ ಪಡೆದಿದ್ದಾರೆ.

೧೯೯೧ರಲ್ಲಿ ತಂದ ಬದಲಾವಣೆಗಳ ರೂಪದಲ್ಲಿ ಆಚರಣೆಗೆ ಬಂದ ಹೊಸ ಆರ್ಥಿಕ ನೀತಿಗೆ ಮೇಲಿನ ಬೆಳವಣಿಗೆಯು ಒಂದು ಮುಖ್ಯ ಹಿನ್ನಲೆ. ಕೊಳ್ಳುಬಾಕತನಕ್ಕೆ ಮಾರುಹೋಗಿದ್ದ ಮೇಲ್ವರ್ಗದ ಹಾಗೂ ಮಧ್ಯಮ ವರ್ಗದ ಜನರಿಂದಾಗಿ ಹೊಸದಾದ ಬೃಹತ್ ಮಾರುಕಟ್ಟೆಯೇ ಸೃಷ್ಟಿಯಾಯಿತು. ಅದುವರೆಗೂ ಕೈಗಾರಿಕೀಕರಣಕ್ಕೆ ಸಾಕಷ್ಟು ಒತ್ತು ನೀಡಲಾಗಿದ್ದಿತು. ಅದಕ್ಕೆ ಪರ್ಯಾಯವಾಗಿ ಆಮದು ವಸ್ತುಗಳಿಗೆ ಆದ್ಯತೆ ನೀಡಲಾಯಿತು. ರಾಷ್ಟ್ರದ ಆರ್ಥಿಕ

ವ್ಯವಸ್ಥೆಯನ್ನು ವಿಶ್ವದ ಮಾರುಕಟ್ಟೆಯೊಡನೆ ವಿಲೀನಗೊಳಿಸಿ ವಿಶ್ವ ಮಾರುಕಟ್ಟೆಯನ್ನು ಅಸ್ತಿತ್ವಕ್ಕೆ ತರಲಾಯಿತೆಂಬ ''ಹೊಸ ಮಂತ್ರ'' ಎಲ್ಲೆಡೆ ರಾರಾಜಿಸಿತು. ಸರಕಾರ ತೆಗೆದುಕೊಂಡ ಈ ಎಲ್ಲ ಕ್ರಮಗಳಿಗೆ ಮೂಲ ಬ್ರೆಟನ್‌ವುಡ್ಸ್ ಸಂಸ್ಥೆಗಳು ನಿಗದಿ ಪಡಿಸಿದ ಶರತ್ತುಗಳೇ ಎಂಬುದು ಇಲ್ಲಿ ಮುಖ್ಯ. ತಾಂತ್ರಿಕವಾಗಿ ಹೆಚ್ಚು ಗುಣಮಟ್ಟ ಹೊಂದಿರುವ ವಿದೇಶಿ ಸರಕುಗಳ ಜೊತೆ ಸ್ಪರ್ಧಿಸಿ ನಮ್ಮ ಕೈಗಾರಿಕೆಗಳು ಬೆಳೆಯಲಿ ಎಂಬುದು ಅದರ ಪ್ರಕಟಿತ ಉದ್ದೇಶ. ಆದರೆ ಶೈಶವಾವಸ್ಥೆಯಲ್ಲಿರುವ ನಮ್ಮ ಉದ್ಯಮಗಳು ಸ್ಪರ್ಧೆಯಲ್ಲಿ ನೆಲಕಚ್ಚಿ ಆಂತರಿಕವಾಗಿ ಶಿಥಿಲಗೊಳ್ಳುವ ಸಾಧ್ಯತೆಯೇ ಹೆಚ್ಚು ಎನ್ನುವುದು ವಾಸ್ತವದ ಅಂಶ.

ಭಾರತೀಯ ಆಹಾರ ನಿಗಮದ ಗೋದಾಮುಗಳಲ್ಲಿ ಹೆಪ್ಪುಗಟ್ಟುತ್ತಿದ್ದ ಬೆಟ್ಟದಾಕಾರದ ಆಹಾರ ಧಾನ್ಯಗಳ ರಾಶಿಗಳು ಒಂದು ಕಡೆಯಾದರೆ ಇನ್ನೊಂದು ಕಡೆ ಕಡು ಬಡವರ ಮತ್ತು ಹಿಂದುಳಿದವರ, ಏರುತ್ತಿರುವ ಜನ ಸಂಖ್ಯೆಯ ಆಹಾರ ಬೇಡಿಕೆಗಳನ್ನು ಪೂರೈಸುವಲ್ಲಿ ಚಾಲ್ತಿಯಲ್ಲಿದ್ದ ಸಬ್ಸಿಡಿಯನ್ನು ಕಡಿತಗೊಳಿಸಲು ಸರಕಾರದ ಕಾತುರ. ಸಬ್ಸಿಡಿ ನೀತಿಯಂತಹ ಸಮಾಜ ಕಲ್ಯಾಣ ಕ್ರಮಗಳಿಂದ ಸಾರ್ವಜನಿಕ ವಿತರಣಾ ಕ್ರಮಗಳಿಂದ ಲಂಚಗುಳಿತನ ಹೆಚ್ಚಾದೀತೇ ಹೊರತು ಬಡತನ ರೇಖೆ ಯಿಂದ ಕೆಳಗುಳಿದಿರುವ ಜನತೆಗೆ ಯಾವ ರೀತಿಯಲ್ಲೂ ಅನುಕೂಲವಾಗಲಾರದೆಂಬ ವಾದ ಸರಕಾರದ್ದು. ಇದನ್ನು ಪ್ರಬಲವಾಗಿ ಬೆಂಬಲಿಸಿದ್ದು ದೇಶದ ಮಧ್ಯಮ ವರ್ಗದ ಜನತೆ. ಇದೇ ಮಧ್ಯಮವರ್ಗ ದಶಕಗಳ ಕಾಲ ಚಾಲ್ತಿಯಲ್ಲಿದ್ದ ಕೆಲವು ಕ್ಷೇತ್ರಗಳಲ್ಲಿ ನೀಡಲಾಗುತ್ತಿದ್ದ ಸಬ್ಸಿಡಿಗಳಿಂದ (ಅಡಿಗೆ ಅನಿಲ, ಪ್ರೌಢ ಶಿಕ್ಷಣ, ರೈಲು ಪ್ರಯಾಣ, ವರಮಾನ ತೆರಿಗೆ ರಿಯಾಯಿತಿ ಇತ್ಯಾದಿ) ಸಂಪೂರ್ಣ ಲಾಭ ಪಡೆದುಕೊಳ್ಳುತ್ತಿದ್ದದ್ದು ಅದರ ವರ್ಗ ಧೋರಣೆಗೆ ಕನ್ನಡಿ ಹಿಡಿಯುತ್ತದೆ.

ಇದೇ ಕಾಲಘಟ್ಟದಲ್ಲಿ ೧೯೯೪ರ ಮರಕೇಶ್ ಒಪ್ಪಂದದ ಎಲ್ಲೆಯನ್ನೂ ಮೀರಿ ವಿಶ್ವವ್ಯಾಪಾರ ಸಂಸ್ಥೆಯನ್ನು ಸಂಪ್ರೀತಗೊಳಿಸುವ ನಿಟ್ಟಿನಲ್ಲಿ ದೇಶಿ ವಸ್ತುಗಳನ್ನು ಕಡೆಗಾಣಿಸಿ ಆಮದು ನೀತಿಯಲ್ಲಿ ಜಾರಿಗೊಳಿಸಿದ ತೀವ್ರತರನಾದ ಬದಲಾವಣೆಗಳಿಂದಾಗಿ ಆರ್ಥಿಕ ಪರಿಸ್ಥಿತಿ ಪಲ್ಲಟಗೊಂಡಿತು. ಉದಾರೀಕರಣದ ಹೆಸರಿನಲ್ಲಿ ದೇಶದ ಮಾರುಕಟ್ಟೆಗೆ ಬಂದಿಳಿದ ರೇಜರ್‌ಗಳು, ಅಡುಗೆ ಉಪ್ಪು, ಹಣ್ಣಿನ ರಸದಂತಹ ದಿನಬಳಕೆಯ ಸಾಮಾನ್ಯ ವಸ್ತುಗಳು, ರೆಫ್ರಿಜರೇಟರ್, ದ್ವಿಚಕ್ರ ವಾಹನಗಳು ಇತ್ಯಾದಿಗಳ ಬಳಕೆ ಶೇಕಡ ೨ರಷ್ಟು ಇಮ್ಮಡಿಸಿತು. ಅದೇ ಸಮಯದಲ್ಲಿ, ಸೋವಿಯೆತ್ ಮಾದರಿ ಛಿದ್ರವಾದ ನಂತರ ಮಾರುಕಟ್ಟೆ ಆಧಾರಿತ ಆರ್ಥಿಕತೆ ಬಿಟ್ಟರೆ ಬೇರಾವ ಪರ್ಯಾಯವೂ ಇಲ್ಲ ಎಂಬ ವಾದವನ್ನು ಮತ್ತಷ್ಟು ಪ್ರತಿಪಾದಿಸಲಾಯಿತು.

**ಸುಧಾರಣೆಗಳು**

ಏನೇ ಇತಿಮಿತಿಗಳಿದ್ದರೂ ನೆಹರು ಅವರ ಕಾಲದ ಸಮಾಜವಾದಿ ನೀತಿಗಳ ಫಲವನ್ನುಂಡು ಪ್ರವರ್ಧಮಾನಕ್ಕೆ ಬಂದ ಅದೇ ೧೫ ಕೋಟಿ ಮಧ್ಯಮ ವರ್ಗದ ಜನರ ಜೀವನ ಶೈಲಿಯಲ್ಲಿ, ಅವರ ಧೋರಣೆಗಳಲ್ಲಿ ಬಹಳ ಬದಲಾವಣೆಗಳಾಗಿವೆ. ಅವರ ಮಧ್ಯಮ ವರ್ಗದ ಬಣ್ಣ ಈಗ ಬದಲಾಗಿದೆ. ಅವರಲ್ಲಿ ಲೆಕ್ಕವಿಲ್ಲದಷ್ಟು ಭ್ರಮೆಗಳು ನುಸುಳಿವೆ. ಯುವಕರಲ್ಲಂತೂ ಬೆವರು, ದುಡಿಮೆ, ಕೂಲಿ ಇವೆಲ್ಲವೂ, ಬಹುಶಃ ಅವರಿಗೆ ಅರಿವಿಲ್ಲದೆಯೇ, ಕೀಳು ಅರ್ಥಗಳನ್ನು ಪಡೆದುಕೊಳ್ಳುತ್ತಿವೆ. ಬೆವರು ಸುರಿಸದೆ ಹವಾನಿಯಂತ್ರಿತ ಕೋಣೆಗಳಲ್ಲಿ ಕೂತು ಕಂಪ್ಯೂಟರ್ ಬೆರಳಚ್ಚುಗಳ ಮೇಲೆ ಕೈಯಾಡಿಸಿ ಸಂಪಾದಿಸುವುದೇ ಹೆಚ್ಚು ಪ್ರತಿಷ್ಠಿತ ಎನಿಸಿಕೊಳ್ಳುತ್ತಿದೆ. ದುರಂತವೆಂದರೆ ಕೋಲಾ-ಪಿಜಾ-ಕಂಪ್ಯೂಟರ್ ಸಂಸ್ಕೃತಿಯ ಹುಚ್ಚುಹೊಳೆಯಲ್ಲಿ ತೇಲಾಡುತ್ತಿರುವ ಜನವಿಭಾಗಗಳೇ ಜಾಗತೀಕರಣ-ಉದಾರೀಕರಣದ ವಿರುದ್ಧದ ಹೋರಾಟದ ಮಾತುಗಳನ್ನಾಡುತ್ತಿರುವ ಚಿತ್ರವೂ ನಮ್ಮ ಮುಂದಿದೆ. ಇಂತಹವರಲ್ಲಿ ಮಾರ್ಕ್ಸ್‌ವಾದಿ ಚಿಂತನೆಗಳಿಂದ ಪ್ರಭಾವಿತ ರಾದವರೂ ಇದ್ದಾರೆ. ಎಂದರೆ, ಉದಾರೀಕರಣ-ಜಾಗತೀಕರಣಗಳಿಗೆ ಗ್ರಾಸ ಒದಗಿಸುವುದು ಈ ೧೫ ಕೋಟಿ ಜನಬಲವುಳ್ಳ ಮಧ್ಯಮ ವರ್ಗದವರ ಡಾಂಭಿಕತನ, ಕೊಳ್ಳುಬಾಕತನ ಎಂಬ ಕಟು ಸತ್ಯವನ್ನು ಗುರುತಿಸದೇ ಹೋದಲ್ಲಿ ಅದೊಂದು ದೊಡ್ಡ ಪ್ರಮಾದವಾಗುತ್ತದೆ.

**ಇದಕ್ಕೆ ಪರ್ಯಾಯವೇನು?**

ಜಾಗತೀಕರಣದ ಅನಿಷ್ಟ ಬೆಳವಣಿಗೆಯ ವಿರುದ್ಧ ಜಗತ್ತಿನಾದ್ಯಾಂತ ಹೋರಾಟಗಳು ಜರಗುತ್ತಲೇ ಇವೆ, ನಿಜ. ನಮ್ಮ ದೇಶದಲ್ಲಿಯೂ ಕಾರ್ಮಿಕರು, ರೈತರು ಪ್ರತಿಭಟಿಸುತ್ತಲೇ ಇದ್ದಾರೆ. ಆದರೆ ಇಷ್ಟೇ ಸಾಲದು. ಇದನ್ನೂ ಮೀರಿ ಅಥವಾ ಇದಕ್ಕೆ ಜೊತೆಜೊತೆಯಾಗಿ ಗ್ರಾಮೀಣ ಕರಕುಶಲ ಕರ್ಮಿಗಳು, ಬಡರೈತರು, ಬೇಸಾಯಗಾರರು ಈ ಹೋರಾಟದ ಭಾಗವಾಗಿ ಮಧ್ಯಮ ವರ್ಗವನ್ನೂ ಒಗ್ಗೂಡಿಸಿಕೊಂಡು ಜಾಗತೀಕರಣದ ವಿರುದ್ಧ ದೇಶಾದ್ಯಂತ ಆಂದೋಲನಗಳನ್ನು ರೂಪಿಸಿ ಸಾಂಸ್ಕೃತಿಕ ಪರ್ಯಾಯಗಳನ್ನು ಜನರ ಮುಂದಿಡ ಬೇಕಾಗಿದೆ. ಈ ಸೂಪರ್ ಮಾರುಕಟ್ಟೆಗಳ ವಿರುದ್ಧ ಮತ್ತು ಅದರ ಭಾಗವಾಗಿರುವ ಇತರ ಸಾಂಸ್ಕೃತಿಕ ವೈಪರೀತ್ಯಗಳ ವಿರುದ್ಧ ಸಮರ ಸಾರಬೇಕಾಗಿದೆ. ನಮ್ಮ ಹೋರಾಟಗಳು ಹೊಸ ಸ್ವರೂಪಗಳನ್ನು ಪಡೆಯಬೇಕಾಗಿದೆ.

ಇದರ ಅರ್ಥ ಕಾರ್ಮಿಕ ಸಂಘಟನೆಗಳು ಮತ್ತು ರಾಜಕೀಯ ಪಕ್ಷಗಳು ಜಾಗತೀಕರಣದ ವಿರುದ್ಧದ ತಮ್ಮ ಹೋರಾಟವನ್ನು ನಿಲ್ಲಿಸಬೇಕೆಂದೇನಲ್ಲ. ಅವು ಇನ್ನೂ ತೀವ್ರಗೊಳ್ಳಬೇಕು. ಸರಕಾರದ ಗೋದಾಮುಗಳಲ್ಲಿ ಶೇಖರಿಸಲ್ಪಟ್ಟಿರುವ ಕೋಟಿಗಟ್ಟಲೆ ಟನ್‌ಗಳ ಆಹಾರ ಧಾನ್ಯಗಳು ಕೂಡಲೇ ವಿತರಣೆಗಾಗಿ ಹೊರಬರಬೇಕು. ಕೈ ಬಿಟ್ಟಿರುವ ಅಥವಾ ಸರಿಯಾಗಿ ಕಾರ್ಯಗತ ಗೊಳಿಸದಿರುವ ಸಮಾಜಕಲ್ಯಾಣ ಯೋಜನೆಗಳನ್ನು ಕೂಡಲೇ ಜನತೆಗೆ ಮುಟ್ಟಿಸಬೇಕೆಂಬ ಕೂಗು ಮೊಳಗ ಬೇಕು. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹೇಳಬೇಕೆಂದರೆ, ಭಾರತೀಯ ಆಹಾರ ಸಂಸ್ಥೆಯ ಗೋದಾಮುಗಳಲ್ಲಿರುವ ೬೦ ಮಿಲಿಯನ್ ಟನ್ ಆಹಾರ ಧಾನ್ಯಗಳನ್ನು ಹಸಿದ ಜನತೆ ಗೋದಾಮುಗಳ ಒಳಗೆ ನುಗ್ಗಿ ವಶಪಡಿಸಿಕೊಂಡರೆ ಅಂತಹ ಕ್ರಮ 'ಜನತಂತ್ರ ವಿರೋಧಿ' ಅಲ್ಲವೆಂಬುದು ನನ್ನ ಅನಿಸಿಕೆ.

ಯಾವುದೇ ಪಕ್ಷ ಅಥವಾ ಸಮ್ಮಿಶ್ರ ಸರಕಾರ ಅಧಿಕಾರ ದಲ್ಲಿರಲಿ ಆಮದನ್ನು ರದ್ದು ಮಾಡುವುದು ಇಂದಿನ ಸಂದರ್ಭದಲ್ಲಿ ಸಾಧ್ಯವಿಲ್ಲ. ಇದು ವಾಸ್ತವ ಅಂಶ. ಅಲ್ಲದೆ ಭಾರತ ವಿಶ್ವವ್ಯಾಪಾರ ಸಂಸ್ಥೆಯಿಂದ ಹೊರಬರಬೇಕೆನ್ನುವ ವಾದವೂ ಹುರುಳಿಲ್ಲದ್ದಾಗುತ್ತದೆ. ಎಲ್ಲ ವಿದೇಶಿ ವಸ್ತುಗಳ ಆಮದನ್ನು ಸಂಪೂರ್ಣವಾಗಿ ಕೈಬಿಡಬೇಕೆನ್ನುವುದು ಕೂಡ ವಾಸ್ತವಕ್ಕೆ ದೂರದ ಮಾತು. ಬದಲಾಗಿ ವಿಶ್ವವ್ಯಾಪಾರ ಸಂಸ್ಥೆ, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ, ವಿಶ್ವ ಬ್ಯಾಂಕ್‌ಗಳೊಡನೆಯ ಸಂಧಾನಗಳ ಮೂಲಕ ಆಮದು ನೀತಿಯಿಂದಾಗಿ ನಮ್ಮ ಆರ್ಥಿಕ ವ್ಯವಸ್ಥೆಯಲ್ಲಿ ಉಂಟಾಗಿರುವ ಜನವಿರೋಧಿ ಅಂಶಗಳನ್ನು ಕಿತ್ತೊಗೆದು ಎಗ್ಗಿಲ್ಲದೆ ಮಾರುಕಟ್ಟೆಗೆ ಹರಿದುಬರುತ್ತಿರುವ ಹಲವಾರು ಸರಕುಗಳ ಆಮದನ್ನು ನಿಲ್ಲಿಸಬೇಕಾಗಿದೆ ಅಥವಾ ಒಂದು ನಿರ್ದಿಷ್ಟ ಕಾಲಾವಧಿಗಾದರೂ ಮಿತಿಗೊಳಿಸಬೇಕಾಗಿದೆ.

ಒಟ್ಟಾರೆ ಹೇಳಬೇಕೆಂದರೆ, ಜಾಗತೀಕರಣದ ಪ್ರಕ್ರಿಯೆಯಿಂದಾಗಿ ದಿನನಿತ್ಯದ ಬದುಕಿಗೆ ಸಂಬಂಧಿಸಿ ದಂತೆ ಹಿಂದೆಂದೂ ಇಲ್ಲದ ಹಲವಾರು ಹೊಸ ಸಾಂಸ್ಕೃತಿಕ ಮೌಲ್ಯಗಳು (ಬಟ್ಟೆಬರೆ, ದಿನ ನಿತ್ಯದ ಆಹಾರ ಸೇವನೆ, ಔಷಧಿ ಹಾಗೂ ಆರೋಗ್ಯ ವ್ಯವಸ್ಥೆ ಇತ್ಯಾದಿ) ತಲೆ ಎತ್ತಿಕೊಂಡಿವೆ. ನಮ್ಮ ಮಧ್ಯಮ ವರ್ಗದ ಜನತೆ ಈ ಪ್ರಕ್ರಿಯೆಗೆ ಬಲಿಪಶುಗಳಾಗಿದ್ದಾರೆಯೇ ಹೊರತು ಅದರಿಂದ ಅವರಿಗೆ ಕಿಂಚಿತ್ತೂ ಲಾಭವಿಲ್ಲವೆಂಬ ಅರಿವನ್ನು ಅವರಲ್ಲಿ ಮೂಡಿಸುವುದು ಈಗಿನ ಸಂದರ್ಭದಲ್ಲಿ ಬಹುಮುಖ್ಯ. ಕ್ರೆಡಿಟ್ ಕಾರ್ಡ್‌ಗಳು ಅವರನ್ನು ಸಾಲಗಾರರನ್ನಾಗಿ ಪರಿವರ್ತಿಸುತ್ತಿವೆಯೆಂಬುದನ್ನು ವಿವರಿಸಿ ಹೇಳಬೇಕು. ಸದಾ ಕಾಡುತ್ತಿರುವ ಬೆಲೆ ಏರಿಕೆ, ನಿರುದ್ಯೋಗ, ಆರ್ಥಿಕ ಕುಸಿತ ಇವುಗಳತ್ತ ಅವರ ಗಮನ ಸೆಳೆಯಬೇಕು. ಅವರಲ್ಲಿ ಹೊಸ ಮಾನವೀಯ ಮೌಲ್ಯಗಳು ಮತ್ತು ಸಾಮಾಜಿಕ ಪ್ರಜ್ಞೆ ಮೂಡುವಂತಾಗಬೇಕು. ವಿದೇಶಿ ಬ್ರಾಂಡ್ ಅಂಗಿಗಳು, ಅಂಕಲ್ ಚಿಪ್ಸ್, ಪೆಪ್ಸಿ, ಕೋಲಾಗಳಿಗೆ ಧಿಕ್ಕಾರ ಹೇಳಿ ಸ್ಥಳೀಯವಾಗಿಯೇ ಶ್ರಮಿಕ ಜನತೆ ತಯಾರಿಸಿದ ನಿತ್ಯಬಳಕೆಯ ವಸ್ತುಗಳನ್ನು ಮಧ್ಯಮ ವರ್ಗ ಕೊಳ್ಳುವಂತಾದರೆ ಕಡೆಯ ಪಕ್ಷ ಯಾವನೋ ಒಬ್ಬ ಕೈಮಗ್ಗದ ನೇಕಾರ ಆತ್ಮಹತ್ಯೆಗೆ ತುತ್ತಾಗುವುದು ತಪ್ಪುತ್ತದೆ, ಒಬ್ಬ ಹಳ್ಳಿಯ ಹುಡುಗ ನಿರ್ಗತಿಕನಾಗಿ ನಗರಕ್ಕೆ ಬಂದು ಭಯೋತ್ಪಾದಕನಾಗುವುದೋ, ಮೂಲಭೂತವಾದಿಗಳ ಬಲೆಗೆ ಸಿಕ್ಕಿ ಚಾಕು ಬಾಕುವನ್ನೊ, ಬಾಂಬನ್ನೊ, ತ್ರಿಶೂಲವನ್ನೊ ಹಿಡಿಯದೆ ನಾಗರಿಕ ಜೀವನಶೈಲಿಗೆ ತನ್ನನ್ನು ತಾನು ತೊಡಗಿಸಿಕೊಳ್ಳುವ ಸಾಧ್ಯತೆಗಳನ್ನು ಸೃಷ್ಟಿಸಿದಂತಾಗು ತ್ತದೆ. ಇದರ ಅರ್ಥ, ಜಾಗತೀಕರಣದಿಂದ ನೊಂದ ಗ್ರಾಮಾಂತರದ, ಹಳ್ಳಿಗಾಡಿನ, ಪಟ್ಟಣಗಳಲ್ಲಿ ವಾಸಿಸುವ ಬಡಜನತೆಯ, ಸಣ್ಣಪುಟ್ಟ ವ್ಯಾಪಾರಿಗಳ, ಕೂಲಿಗಾರರ ಮತ್ತು ಮಧ್ಯಮ ವರ್ಗದ ಒಂದು ಹೊಸ ಒಕ್ಕೂಟದ ನಿರ್ಮಾಣವಾಗಬೇಕಾಗಿದೆ. ಇಷ್ಟಾದರೆ, ಜಾಗತೀಕರಣದ ವಿರುದ್ಧ ನಾವು ಹೇಳುವ ಧಿಕ್ಕಾರಕ್ಕೆ ಅರ್ಥ ಬಂದೀತು. ಅಲ್ಲದೆ ಈ ಸಾಮಾಜಿಕ ಚೌಕಟ್ಟಿನಲ್ಲಿಯೇ ನಾವು ಹಮ್ಮಿ ಕೊಳ್ಳಬೇಕಾದ ಈ ಇಡೀ ಹೋರಾಟದ ಯಶಸ್ವಿಯತ್ತ ಗಟ್ಟಿ ಹೆಜ್ಜೆಯಿಟ್ಟಂತಾಗುತ್ತದೆ. ಅಂತೆಯೇ ಅದಕ್ಕೆ ಸಂಬಂಧಿಸಿದ ಮೌಲ್ಯಗಳ ಸಂಘರ್ಷದಲ್ಲಿ ಸಂಸ್ಕೃತಿ ಬಹಳ ಪ್ರಮುಖ ಅಸ್ತ್ರವಾಗುವುದರಲ್ಲಿ ಯಾವ ಸಂಶಯವೂ ಇಲ್ಲ.

**ಎ. ಕೃಷ್ಣ ಅನಂತ್**
ಸಹಾಯಕ ಸಂಪಾದಕ, 'ದಿ ಹಿಂದು'
ಚೆನ್ನೈ - ೬೦೦ ೦೦೨

(ಈ ಲೇಖನವನ್ನು ಕನ್ನಡದಲ್ಲಿ ಸಂಗ್ರಹಿಸಿದವರು ಎಸ್. ಸುರೇಂದ್ರ)

ಹಂಝ ಮಲಾರ್



# ಕುಸಿದು ಬಿದ್ದ ಜಾತಿಗೋಡೆ

ಮಧ್ಯರಾತ್ರಿಯಾಗಿತ್ತು.

ಅರಸ್ತಾನ ಮಮ್ಮಲ ಮಲಗಿತ್ತು.

ಹೆಜ್ಜೆ ಹಾಕುತ್ತಿದ್ದ ಅಬ್ಬಾಸ್ ಹಾಜಿ ಇದ್ದಕ್ಕಿದ್ದಂತೆ ನಿಂತು ಸುತ್ತಲೂ ಕಣ್ಣರಳಿಸಿದರು. ಏನು ? ಇದು ನನ್ನೂರಾ ? ಎಷ್ಟೊಂದು ಬದಲಾಗಿದೆ. ರಸ್ತೆಗೆ ಟಾರು ಹಾಕಲಾಗಿದೆ. ದಾರಿಗೆ ದೀಪ ಅಳವಡಿಸಲಾಗಿದೆ. ಮತ್ತೊಮ್ಮೆ ಅಬ್ಬಾಸ್ ಹಾಜಿ ನಿಂತು ನೋಡಿದರು. ಅರಸ್ತಾನ ಸಂಪೂರ್ಣ ಬದಲಾದಂತೆ ಅವರಿಗೆ ಕಂಡಿತು. ಇಪ್ಪತ್ತು ವರ್ಷದ ಹಿಂದೆ ಈ ಊರು ಹೇಗಿತ್ತು ? ಈಗ ಹೇಗಾಗಿದೆ ?

ಹಿಂದೆ ಈ ಊರಲ್ಲಿ ಇದ್ದದ್ದು ಬಾವಾಕನ ಒಂದು ಅಂಗಡಿ ಮಾತ್ರ. ಅಲ್ಲಿ ಅವರದ್ದೇ ಆದ ಒಂದು ಬೀಡಿ ಬ್ರಾಂಚಿತ್ತು. ವಾರದ ಭಾನುವಾರ ಅಲ್ಲಿ ಲೆಕ್ಕದ ದಿನವಾಗಿತ್ತು. ಜತೆಗೆ ವಾರದ ಸಾಮಾನು ಕೊಡುವ ದಿನ ಕೂಡಾ. ಬೆಳಿಗ್ಗೆ ೭ ಗಂಟೆಗೆ ಬಾಗಿಲು ತೆರೆದು ಲೆಕ್ಕ ಮಾಡುವುದರೊಂದಿಗೆ ಸಾಮಾನು ಕೊಡಲು ನಿಂತರೆ ರಾತ್ರಿ ೧೧ ಗಂಟೆಗೆ ಬಾಗಿಲು ಮುಚ್ಚಲ್ಪಡುತ್ತಿತ್ತು. ಆದರೆ ಈಗ ಬಾವಾಕ ಏನು ಮಾಡಿಯಾರು ? ಬದಲಾದ ಇದೇ ಜನರನ್ನು ನಂಬಿ ಕೂತಿದ್ದಾರಾ ? ಅಥವಾ ಬದುಕಿಗೆ ಬೇರೆ ದಾರಿ ಮಾಡಿದ್ದಾರಾ ? ''ನಾನು ಕೂಡಾ ಇಪ್ಪತ್ತು ವರ್ಷದ ಹಿಂದೆ ಅವರಿಗೆ ೬೦ ರೂಪಾಯಿ ಸಾಲ ಬಾಕಿ ಇಟ್ಟ ನೆನಪು. ಅದನ್ನು ನಾಳೆ ಖಂಡಿತಾ ಅವರಿಗೆ ಕೊಟ್ಟು ಕ್ಷಮೆ ಕೇಳಬೇಕು'' ಎಂದು ಅಬ್ಬಾಸ್ ಹಾಜಿ ತನ್ನಲ್ಲೇ ಹೇಳಿಕೊಂಡರು.

ಅಬ್ಬಾಸ್ ಹಾಜಿ ಆ ಮನೆಯ ಮುಂದೆ ನಿಂತು ಒಮ್ಮೆ ಕಣ್ಣರಳಿಸಿದರು. ದಾರಿ ದೀಪದ ಲಾಭ ಪಡೆದ ಅವರು ಮತ್ತೊಮ್ಮೆ ಆ ಮನೆಯನ್ನು ನೋಡಿದರು. ''ಇದು ನನ್ನ ಮನೆಯಾ ? ಎಷ್ಟೊಂದು ಬದಲಾಗಿಬಿಟ್ಟಿದೆ ಈ ಮನೆ ? ಈ ಮನೆಗೆ ಆವಾಗ ಇದ್ದದ್ದು ಒಂದು ಮುಳ್ಳು ಬೇಲಿ. ಈಗ ಕಂಪೌಂಡ್ ಆಗಿದೆ. ಎದುರಿಗೆ ಕಬ್ಬಿಣದ ಗೇಟ್ ಇದೆ !'' ಅಬ್ಬಾಸ್ ಹಾಜಿಗೆ ನಂಬಲಿಕ್ಕೆ ಆಗಲಿಲ್ಲ. ಮೆಲ್ಲನೆ ಕಬ್ಬಿಣದ ಗೇಟು ತೆರೆದರು. ಅಂಗಳದಲ್ಲಿ ಕಟ್ಟಿ ಹಾಕಲಾಗಿದ್ದ ನಾಯಿ ಬೊಬ್ಬೆ ಹಾಕತೊಡಗಿತು. ಅಬ್ಬಾಸ್ ಹಾಜಿ ಕಂಪಿಸ ತೊಡಗಿದರು. ''ಏನು ನನ್ನವಳು ನನ್ನನ್ನು ಗುರುತಿಸಿ ಕೊಂಡಾಳೇ ?'' ನಾನು ನಿನ್ನ ಗಂಡ ಅಂತ ಹೇಳಿದರೆ ಅವಳು ನಂಬಿಯಾಳೇ ? ಎಂಬ ಪ್ರಶ್ನೆ ಅಬ್ಬಾಸ್ ಹಾಜಿಗೆ ಕಾಡ ತೊಡಗಿತು. ನಾಯಿಯ ಬೊಬ್ಬೆಗೆ ಮನೆಯೊಳಗಿದ್ದವರಿಗೆ ಎಚ್ಚರವಾಯಿತು. ಅವರು ಎದ್ದು ಒಳಗಿನ ಲೈಟ್ ಹಾಕಿದರು. ಹಾಗೇ ಕಿಟಕಿಯ ಬಾಗಿಲು ಸರಿಸಿ ಇಣುಕಿದರು. ಅಬ್ಬಾಸ್ ಹಾಜಿ ಅದೇ ಕಿಟಕಿಗೆ ಕಣ್ಣು ನೆಟ್ಟಿದ್ದರು. ಅಲ್ಲಿ ನಿಂತ ಮಹಿಳೆಯನ್ನು ಕಂಡು ''ಹಫ್ಸಾ.... ನಾನು ನಿನ್ನ ಗಂಡ'' ಎಂದು ಅಬ್ಬಾಸ್ ಹಾಜಿ ಮೆಲ್ಲನೆ ಹೇಳಿದರು. ''ಹ್ಞಾಂ ಯಾರು ನೀವು ?'' ಹಫ್ಸಾ ಆತಂಕದಿಂದ ಪ್ರಶ್ನಿಸಿದಳು. ''ಅದೇ ನಾನು ನಿನ್ನ ಗಂಡ. ಇಪ್ಪತ್ತು ವರ್ಷದ ಹಿಂದೆ ನಾನು ಓಡಿ ಹೋದ ಮೇಲೆ ನಾನು ಸತ್ತಿದ್ದೇನೆ ಅಂತ ನೀನು ಭಾವಿಸಿರಬೇಕು. ಆದರೆ ನಾನು ಇನ್ನೂ ಬದುಕಿದ್ದೇನೆ. ನನ್ನನ್ನು ನಂಬು. ನಾನು ನಿನ್ನ ಗಂಡ ಅಬ್ಬಾಸ್.'' ಗಲ್ಲ ತುಂಬ ಗಡ್ಡವನ್ನು ಕಂಡ ಹಫ್ಸಾಳಿಗೆ ಹೊರಗೆ ನಿಂತ ವ್ಯಕ್ತಿಯ ಮಾತನ್ನು ನಂಬಬೇಕೋ, ಬೇಡವೋ ಎಂದು ಗೊತ್ತಾಗಲಿಲ್ಲ. ಹಫ್ಸಾ ತೀರಾ ಇಕ್ಕಟ್ಟಿಗೆ ಸಿಕ್ಕಿದವಳಂತಾದಳು. ಮೇಲ್ನೋಟಕ್ಕೆ ಇವರು ನನ್ನ ಗಂಡನಂತೆ ಕಾಣುತ್ತಾರೆ. ಆದರೆ ಒಬ್ಬ ಮನುಷ್ಯನಂತೆ ಇನ್ನೊಬ್ಬರು ಇರಬಾರದು ಅಂತ ಇದೆಯಾ ? ನನಗೆ ಗಂಡನಿಲ್ಲ ಎಂದು ತಿಳಿದು ಯಾರೋ ನನ್ನನ್ನು ದುರುಪಯೋಗಪಡಿಸಲು ಇಂಥ ವೇಷ ಹಾಕಿ ಬಂದಿದ್ದರೆ... ? ಅಷ್ಟಕ್ಕೂ ಇವರು ನನ್ನ ಗಂಡನೇ ಆಗಿದ್ದಲ್ಲಿ ಈ ಮಧ್ಯ ರಾತ್ರಿ ಯಾಕೆ ಬರಬೇಕಿತ್ತು ? ಹಗಲು ಹೊತ್ತಲ್ಲಿ ಬರಬಾರದಿತ್ತಾ ? ಹಫ್ಸಾ ತನ್ನಲ್ಲೇ ಪ್ರಶ್ನಿಸಿಕೊಂಡಳು.

''ಏನೋ ಯೋಚಿಸುತ್ತಿದ್ದೀಯಲ್ಲ ಹಫ್ಸಾ, ನಾನು ನಿನ್ನ ಗಂಡ ಅಂತ ಹೇಳಿದೆನಲ್ಲ. ಅಲ್ಲಾಹನಾಣೆ ನಾನು ನಿನ್ನ ಗಂಡ.'' ಅಬ್ಬಾಸ್ ಹಾಜಿಯ ಧ್ವನಿಯಲ್ಲಿ ನೋವಿತ್ತು.

ಅಷ್ಟರಲ್ಲಿ ಕೋಣೆಯೊಳಗೆ ಮಲಗಿದ್ದ ಮಗ ಇಮ್ರಾನ್ ''ಏನು ಉಮ್ಮ, ಯಾಕೆ ಈ ರಾತ್ರಿ ಎದ್ದಿದ್ದೀರಿ ? ಯಾರನ್ನು ನೋಡುತ್ತಿದ್ದೀರಿ ?'' ಎಂದು ಪ್ರಶ್ನಿಸಿದ.

''ಏನಿಲ್ಲ, ಮೋನೇ. ಹೊರಗಡೆ ಒಬ್ಬರು ನಿಂತಿದ್ದಾರೆ. ನೋಡಲು ನನಗೆ ನಿನ್ನ ಅಬ್ಬನಂತೆಯೇ ಕಾಣುತ್ತಾರೆ. ಆದರೆ, ಯಾಕೋ ಅವರನ್ನು ಒಳ ಸೇರಿಸಲು ಹೆದರಿಕೆಯಾಗುತ್ತಿದೆ'' ಎಂದು ಹಫ್ಸಾ ಹೇಳಿದಳು.

''ಏನು ಉಮ್ಮ, ಎಂಥ ಹೇಳುತ್ತಿದ್ದೀರಿ ? ಹೊರಗಡೆ ನಿಂತವರು, ನನ್ನ ಅಬ್ಬವಾ ? ನೀವೇನು ಕನಸು

ಕಾಣುತ್ತಿದ್ದೀರಾ ?'' ಎಂದು ಕೇಳುತ್ತ ಇಮ್ರಾನ್ ಎದ್ದು ಬಂದು ಕಿಟಕಿಯ ಮೂಲಕ ಕಣ್ಣು ಹೊರಹಾಕಿದ. ''ಹೌದು ಮೋನೇ, ನಾನು ನಿನ್ನ ಅಬ್ಬ. ಬಾಗಿಲು ತೆಗೆ. ನಾನೊಮ್ಮೆ ನಿಮ್ಮನ್ನು ಕಂಡು ಮಾತನಾಡಲು ಬಂದಿದ್ದೇನೆ. ನಿಮಗೆ ಇಷ್ಟವಿಲ್ಲದಿದ್ದರೆ ಈ ರಾತ್ರಿಯೇ ಎದ್ದು ಹೋಗುತ್ತೇನೆ'' ಎಂದು ಅಬ್ಬಾಸ್ ಹಾಜಿ ಹೇಳಿದಾಗ, ''ಉಮ್ಮ ಬಾಗಿಲು ತೆಗೆಯೋಣ. ಅವರು ಏನು ಹೇಳುತ್ತಾರೆ ನೋಡೋಣ'' ಎಂದು ಹೇಳುತ್ತಾ ಇಮ್ರಾನ್ ಬಾಗಿಲು ತೆಗೆದ. ಹಫ್ಸಾಳಿಗೆ ಹೆದರಿಕೆ ಶುರುವಾಯಿತು. ಅಬ್ಬಾಸ್ ಹಾಜಿ ಒಳ ಪ್ರವೇಶಿಸಿದರು. ಅವರಿಗೆ ಹೆಂಡತಿ ಮಕ್ಕಳನ್ನು ಅಪ್ಪಿ ಹಿಡಿದು ಮುದ್ದಾಡಬೇಕೆಂಬ ಮನಸ್ಸಾದರೂ ಕೂಡಾ ಯಾಕೋ ತಕ್ಷಣಕ್ಕೆ ಅವರಿಂದಾಗಲಿಲ್ಲ. ಹಾಗಾಗಿ ಅಲ್ಲೇ ಇದ್ದ ಕುರ್ಚಿಯಲ್ಲಿ ಕೂತರು. ಬಾಯಾರಿಕೆಯಾಗದಿದ್ದರೂ ಕೂಡಾ ಸುಮ್ಮನೆ ಒಂದು ಲೋಟ ನೀರು ಕೇಳಿ ಬಾಯಿಗಿಟ್ಟರು. ಹಾಗೇ ಹೆಂಡತಿ ಮಗನನ್ನು ಕಣ್ಣು ಬಿಟ್ಟು ನೋಡಿದರು. ಹಫ್ಸಾಳಿಗೆ ಒಳಗೊಳಗೆ ಇದು ತನ್ನ ಗಂಡ ಅಂತ ಗೊತ್ತಾಗತೊಡಗಿತು. ಒಂದು ರೀತಿಯಲ್ಲಿ ಸೆಳೆತವೂ ಉಂಟಾಯಿತು. ಆದರೆ ಯಾಕೋ ತಕ್ಷಣಕ್ಕೆ ಅಬ್ಬಾಸ್ ಹಾಜಿಯನ್ನು ತನ್ನ ಗಂಡ ಅಂತ ಒಪ್ಪಿಕೊಳ್ಳಲು ಮನಸ್ಸಾಗಲಿಲ್ಲ. ಆವಾಗ ಅವರಿಗೆ ಗಡ್ಡ ಇರಲಿಲ್ಲ. ಈಗ ಗಲ್ಲ ತುಂಬಾ ಗಡ್ಡ ಬಿಟ್ಟಿದ್ದಾರೆ. ಅಲ್ಲದೆ ಅವರ ಹೊಟ್ಟೆಯಲ್ಲೊಂದು ಕಪ್ಪು ಕಲೆ ಇತ್ತು. ಅದೇ ಕಲೆ ಇವರ ಮೇಲೂ ಇದ್ದರೆ ನನ್ನ ಗಂಡ ಅಂತ ಒಪ್ಪಿಕೊಳ್ಳಬಹುದಿತ್ತು. ಆದರೆ ಬಂದ ಬೆನ್ನಿಗೆ ಹೊಟ್ಟೆಯಲ್ಲಿರುವ ಕಲೆ ಹೇಗೆ ನೋಡುವುದು ? ಹೇಗೆ ಕೇಳುವುದು ? ಅವರಾಗಿಯೇ ತೋರಿಸಿದರೆ, ಆ ಕಲೆಯನ್ನು ನೋಡಿ, ಇವರೇ ನನ್ನ ಗಂಡ ಅಂತ ನಂಬಬಹುದಿತ್ತು ಎಂದು ಹಫ್ಸಾ ತನ್ನಲ್ಲೇ ಹೇಳಿಕೊಂಡಳು.

''ಮೋನೇ ಎಷ್ಟು ದೊಡ್ಡವನಾಗಿದ್ದೀಯಾ ? ನಿನಗೆ ಇನ್ನೂ ನನ್ನ ಮೇಲೆ ನಂಬಿಕೆ ಬರಲಿಲ್ಲಾಂತ ಕಾಣುತ್ತದೆ. ನಾನು ಈ ಊರು ಬಿಟ್ಟು ಹೋಗುವಾಗ ನಿನಗೆ ಒಂದು ವರ್ಷವೂ ಪೂರ್ತಿಯಾಗಿರಲಿಲ್ಲ. ಹಾಗಿರುವಾಗ ನಿನಗೆ ನನ್ನ ಗುರುತು ಹಿಡಿಯಲು ಕಷ್ಟ'' ಎಂದು ಹೇಳಿದ ಅಬ್ಬಾಸ್ ಹಾಜಿ, ''ಅದಿರಲಿ ಮೋನೇ, ನೀನು ಈಗ ಏನು ಮಾಡುತ್ತಿದ್ದೀಯಾ ?'' ಎಂದು ಕೇಳಿ ಮಗನನ್ನು ಪ್ರೀತಿಯಿಂದ ನೋಡಿದರಲ್ಲದೆ, ''ಹಫ್ಸಾ.......ನಿನಗೆ ನನ್ನ ಮೇಲೆ ಇನ್ನೂ ನಂಬಿಕೆ ಬಂದಿಲ್ಲಾಂತ ಕಾಣುತ್ತದೆ. ಚಿಂತಿಲ್ಲ, ಈ ಒಂದು ರಾತ್ರಿ ಇಲ್ಲಿ ಕಳೆಯುತ್ತೇನೆ. ನಾಳೆ ನೆರೆಹೊರೆಯವರು ನನ್ನನ್ನು ನೋಡಿ ಗುರುತು ಹಿಡಿದುಕೊಟ್ಟಾರು ಎಂದು ನುಡಿದಾಗ, ''ಬೇಡ ಅಬ್ಬಾ.... ಇಲ್ಲೇ ಮಲಗಿ'' ಎಂದು ಹೇಳಿ ಇಮ್ರಾನ್ ಅಲ್ಲೇ ಒಂದು ಚಾಪೆ ಹಾಕಿಕೊಟ್ಟ. ಹಫ್ಸಾ ಹೆದರಿ ಕೋಣೆಯ ಚಿಲಕ ಹಾಕಿ ನಿದ್ದೆಗೆ ಹೋದಳು.

ಮುಂಜಾನೆ ಎದ್ದ ಅಬ್ಬಾಸ್ ಹಾಜಿ ಸುಬೈ ನಮಾಜ್ ಮಾಡಿ, ಅಂಗಳ ಸುತ್ತಾಡಿದರು. ಹಫ್ಸಾ ಎದ್ದು ವಲು ಮಾಡಲೆಂದು ಅಂಗಳಕ್ಕಿಳಿದಾಗ, ಅಲ್ಲಿ ಅಬ್ಬಾಸ್ ಹಾಜಿಯನ್ನು ಕಂಡು ತನ್ನ ಹೆಜ್ಜೆಯನ್ನು ಹಿಂದಕ್ಕೆ ಸರಿಸಿದಳು. ಅದನ್ನು ಗಮನಿಸಿದ ಅಬ್ಬಾಸ್ ಹಾಜಿ, ''ಹಫ್ಸಾ..... ಯಾಕೆ ಹಾಗೇ ನಿಂತಿದ್ದೀಯಾ ? ನನ್ನ ಗುರುತು ಇನ್ನೂ ಸಿಗಲಿಲ್ಲವಾ ? ಅಥವಾ ನನ್ನ ಮೇಲಿದ್ದ ಕೋಪ ಇನ್ನೂ ತಣಿಯಲಿಲ್ಲವಾ ? ನೋಡು, ನಿನಗೆ ನಾನಿಲ್ಲಿರುವುದು ಇಷ್ಟವಿಲ್ಲದಿದ್ದರೆ ಖಂಡಿತಾ ಹೇಳು, ನಾನೀಗಲೇ ಹೋಗುತ್ತೇನೆ'' ಎಂದಾಗ, ಹಫ್ಸಾಳಿಗೆ ಮಾತು ಹೊರಡಲಿಲ್ಲ. ಅವಳು ಅಬ್ಬಾಸ್ ಹಾಜಿಯನ್ನು ನುಂಗುವಂತೆ ನೋಡಿದಳು. ಮಂಜು ಹನಿ ಹನಿಯಾಗಿ ಬೀಳುತ್ತಿತ್ತು. ಮೂಗಲ್ಲಿ ಶೀತದ ಬಾಧೆ ಕಾಣಿಸತೊಡಗಿತು.

''ನಿಮ್ಮ ಹೊಟ್ಟೆಯಲ್ಲೊಂದು ಕಪ್ಪು ಕಲೆ ಇತ್ತಲ್ಲಾ ?'' ಹಫ್ಸಾ ತಣ್ಣಗಾಗಿ ಪ್ರಶ್ನಿಸಿದಳು. ''ಹೌದು, ಇದೆ. ಏನು ಆ ಬಗ್ಗೆ ಸಂಶಯವಾ ? ಈಗ ನೀನು ನಮಾಜ್ ಮಾಡು, ನಂತರ ಅಗತ್ಯವಿದ್ದರೆ ಆ ಕಪ್ಪು ಕಲೆಯನ್ನೂ ತೋರಿಸುತ್ತೇನೆ'' ಎಂದು ಅಬ್ಬಾಸ್ ಹಾಜಿ ಹೇಳಿದಾಗ, ಹಫ್ಸಾ ವಲು ಮಾಡಲು ಮುಂದಾದಳು. ನಮಾಜ್ ಮಾಡಿ ದುಆ ಮಾಡುವಾಗ ಹಫ್ಸಾಳಿಗೆ ಅದ್ದೇಗೋ ಅಬ್ಬಾಸ್ ಹಾಜಿಯ ಮೇಲೆ ಬಲವಾದ ನಂಬಿಕೆ ಬರತೊಡಗಿತು.

''ಹಫ್ಸಾ.... ನಿನಗೆ ಇನ್ನೂ ನನ್ನ ಮೇಲೆ ವಿಶ್ವಾಸ ಇಲ್ಲದಿದ್ದರೆ ನೋಡು, ಈ ಕಪ್ಪು ಕಲೆಯನ್ನು'' ಅಂತ ಹೇಳಿ ಅಬ್ಬಾಸ್ ಹಾಜಿ ಬನಿಯನ್ ಮೇಲೆಳೆದು ತನ್ನ ಹೊಟ್ಟೆಯನ್ನು ತೋರಿಸಿದಾಗ ಹಫ್ಸಾ ಒಂದು ಕ್ಷಣ ಕಣ್ಣಟ್ಟು ನೋಡಿದಳು. ಅವಳಿಗೆ ನಿಂತ ನೆಲವೇ ಕುಸಿದಂತಾಯಿತು. ಹೌದು ಅಲ್ಲೊಂದು ಕಪ್ಪು ಕಲೆ ಕಂಡುಬಂದಿತ್ತು. ಅವಳು ಮತ್ತೊಮ್ಮೆ ಅದನ್ನು ನೋಡಿದಳು. ಹಾಗಿದ್ದರೆ ಇವರು ಗಂಡ

ಬಿಟ್ಟ ಕಾರಣ ಬದಲಾಗಿ ಹೋದರೇ ? ಎಂದು ತನ್ನಲ್ಲೇ ಪ್ರಶ್ನಿಸಿ ಇವರು ನನ್ನ ಗಂಡ ಎಂಬುದನ್ನು ಖಚಿತಪಡಿಸಿಬಿಟ್ಟು ಕೊಂಡ ಮೇಲೆ ಇಡಿಯಾಗಿ ನಕ್ಕಳು.

• • •

ಇಪ್ಪತ್ತು ವರ್ಷದ ಹಿಂದೆ.

ಹಫ್ಸಾರನ್ನು ವರಿಸಿದ ಅಬ್ಬಾಸ್ ಕೇವಲ ಒಂದು ವರ್ಷ ಮಾತ್ರ ಆ ಮನೆಯಲ್ಲಿ ಉಳಿದಿದ್ದರು. ಮದುವೆಗೆ ಮುನ್ನವೇ ಅಬ್ಬಾಸ್‌ನ ತಂದೆ ತೀರಿಹೋಗಿದ್ದರು. ಮದುವೆಯಾದ ಮೂರು ತಿಂಗಳಲ್ಲಿ ತಾಯಿಯೂ ತೀರಿಹೋಗಿದ್ದರು. ಅಬ್ಬಾಸ್ ಅವರ ಏಕೈಕ ಮಗ ಆಗಿದ್ದ ಕಾರಣ ಆ ಪುಟ್ಟದಾದ ಮನೆಯೂ ಅವರ ಪಾಲಿಗಾಯಿತು. ಒಂದು ವರ್ಷ ಪೂರ್ತಿಯಾಗುವ ಮುನ್ನವೇ ರಾತ್ರೋ ರಾತ್ರಿ ಅಬ್ಬಾಸ್ ತನ್ನ ಹೆಂಡತಿ ಮತ್ತು ಗಂಡು ಮಗುವನ್ನು ಬಿಟ್ಟು ಓಡಿಹೋಗಿದ್ದರು. ಯಾಕೆ ಹೋದ ? ಎಲ್ಲಿಗೆ ಹೋದ ? ಎಂಬುದು ನಿಗೂಢವಾಗಿತ್ತು. ಹಫ್ಸಾ ಗಂಡನಿಗಾಗಿ ಹಲವು ತಿಂಗಳು, ವರ್ಷ ಕಾದಳು. ಆದರೆ ದಿನ ಉರುಳುತ್ತಲೇ ತನ್ನ ಗಂಡ ಮಣ್ಣಾಗಿರಬೇಕೆಂದು ಭಾವಿಸಿ ಗಂಡನನ್ನು ಮರೆತುಬಿಟ್ಟಳು. ನನ್ನ ಅಬ್ಬ ಎಲ್ಲಿ ಎಂದು ಮಗ ಕೇಳತೊಡಗಿದಾಗ, ಹಫ್ಸಾ ಅದೇನೋ ಸುಳ್ಳು ಹೇಳುತ್ತಿದ್ದಳು. ಗಂಡನಿಂದ ದೂರವಾದ ಹಫ್ಸಾಳ ಮೇಲೆ ಕೆಲವು ಪಡ್ಡೆ ಹುಡುಗರು ಕಣ್ಣುಹಾಕಿದ್ದರು. ಇನ್ನು ಕೆಲವು ಊರ ದಲ್ಲಾಳಿಗಳು ಮದುವೆಯ ಪ್ರಸ್ತಾಪವನ್ನೂ ಎತ್ತಿದ್ದರು. ಆದರೆ ಅದೆಲ್ಲವನ್ನೂ ಹಫ್ಸಾ ಸ್ಪಷ್ಟವಾಗಿ ತಿರಸ್ಕರಿಸಿದ್ದಳು. ಮಗ ದೊಡ್ಡವನಾಗುತ್ತಲೇ ಅವನಿಗೆ ವಿದ್ಯೆ ಕಲಿಸಿದಳು. ತನ್ನ ಮನೆಯನ್ನು ಭದ್ರಪಡಿಸಿಕೊಂಡಳು. ಜೀವನ ಸಾಗಿಸಲು ಬೀಡಿ ಕಟ್ಟತೊಡಗಿದಳು. ಸ್ವಲ್ಪ ತರಕಾರಿಯನ್ನೂ ಬೆಳೆಯತೊಡಗಿದಳು. ಬಂದ ಸಂಕಷ್ಟವನ್ನೆಲ್ಲಾ ನುಂಗಿಕೊಂಡಳು. ಹಾಗೇ ಗಂಡನಿಲ್ಲದೆ ಇಪ್ಪತ್ತು ವರ್ಷ ಕಳೆದದ್ದೇ ಅವಳಿಗೆ ಗೊತ್ತಾಗಲಿಲ್ಲ. ಈಗ ಗಂಡ ಕಣ್ಮುಂದೆ ನಿಂತು ನಗುತ್ತಿದ್ದಾರೆ.

• • •

''ಹಾಗಿದ್ದರೆ ನೀವು ಈವರೆಗೆ ಎಲ್ಲಿ ಇದ್ದದ್ದು ? ಯಾಕಾಗಿ ಆವತ್ತು ಓಡಿಹೋದಿರಿ ?'' – ಹಫ್ಸಾ, ಗಂಡನ ಮುಖ ನೋಡಿ ಕೇಳಿದಳು. ''ಯಾಕಾಗಿ ಓಡಿ ಹೋದೆ ಎನ್ನಲಿ ? ಆವಾಗ ಓಡಿಹೋಗಬೇಕೆಂಬ ಮನಸ್ಸಾಯಿತು. ನಿನ್ನನ್ನೂ ಮಗುವನ್ನೂ ಬಿಟ್ಟು ಓಡಿ ಹೋದೆ. ಇಪ್ಪತ್ತು ವರ್ಷ ನಿಮ್ಮನ್ನು ಮರೆತು ಕಾಲ ಕಳೆದೆ. ಆದರೆ ಯಾಕೋ ನಿಮ್ಮನ್ನು ಕಾಣುವ ಸೌಭಾಗ್ಯ ಅಲ್ಲಾಹು ನನಗೆ ಕೊಟ್ಟಿರಬೇಕು. ಹಾಗಾಗಿ ಈ ಕಡೆ ಬಂದಿದ್ದೇನೆ. ದಿಕ್ಕು ಕಾಣದೆ ಬರಿ ಕೈಲಿ ಬಂದಿದ್ದೇನೆ ಅಂತ ನೀನು ಭಾವಿಸಬೇಡ. ನಿಮ್ಮನ್ನು ಕೊನೆಯುಸಿರಿರುವ ತನಕ ಸಾಕುವ ಸಂಪತ್ತನ್ನು ಸಂಪಾದಿಸಿ ಬಂದಿದ್ದೇನೆ. ಈವರೆಗೆ ನಿನ್ನನ್ನು ಕೈಬಿಟ್ಟದ್ದಕ್ಕೆ ಕ್ಷಮೆ ಕೊಡು'' – ನಿಂತಿದ್ದ ಅಬ್ಬಾಸ್ ಹಾಜಿಯ ಕೈ ಹಫ್ಸಾಳ ಕೈ ಹಿಡಿಯಲು ಮುಂದಾಗುವಷ್ಟರಲ್ಲಿ 'ಉಮ್ಮಾ....' ನಿದ್ದೆಗಣ್ಣಿನಿಂದ ಎದ್ದು ಬಂದ ಇಮ್ರಾನ್ ಕೂಗಿದಾಗ, ಹಫ್ಸಾ ಒಂದು ಕ್ಷಣ ನಾಚಿದಳಾದರೂ, ''ಬಾ.... ಮೋನೇ'' ಎಂದು ಅಬ್ಬಾಸ್ ಹಾಜಿ ಹತ್ತಿರ ಕರೆದರು. ಇಮ್ರಾನ್ ತಾಯಿಯ ಮುಖ ನೋಡಿದ. ''ಹೌದು, ಮೋನೇ, ಇದು ನಿನ್ನ ಅಬ್ಬ. ಅವರು ಊರು ಬಿಟ್ಟು ಹೋದಾಗ, ನೀನಿನ್ನು ಚಿಕ್ಕವ. ಊರು ಬಿಟ್ಟು ಇಪ್ಪತ್ತು ವರ್ಷವಾಯಿತು. ಈಗ ಮತ್ತೆ ಬಂದಿದ್ದಾರೆ'' ಎಂದು ಹಫ್ಸಾ ಹೇಳಿದಾಗ, ಇಮ್ರಾನ್ ತನ್ನ ತಂದೆಯ ಮುಖವನ್ನೇ ದಿಟ್ಟಿಸಿ ನೋಡಿದ.

ಸ್ವಲ್ಪ ಹೊತ್ತಿನ ನಂತರ ಮೂವರು ಜತೆಯಾಗಿ ಕೂತು ತಿಂಡಿ ತಿಂದರು. ಒಂಬತ್ತುವರೆಗೆ ಇಮ್ರಾನ್ ಅಂಗಳ ದಾಟಿ ಕಾಲೇಜಿಗೆ ಹೋದ. ಅಬ್ಬಾಸ್ ಹಾಜಿ ತನ್ನ ಕೋಣೆಯೊಳಗೆ ಪ್ರವೇಶಿಸಿದರು. ಒಂದು ಕ್ಷಣ ಅಲ್ಲಿ ನಿಂತು ಆ ಕೋಣೆಯನ್ನು ಇಡಿಯಾಗಿ ನೋಡಿದರು. ಅದು ತುಂಬಾ ಬದಲಾಗಿ ಹೋದದ್ದನ್ನು ಗಮನಿಸಿದರು. ಅವರ ಹಿಂದೆಯೇ ಹಫ್ಸಾ ಕೂಡಾ ಆ ಕೋಣೆಗೆ ಕಾಲಿಟ್ಟು, ''ಯಾಕೆ ಹಾಗೇ ನಿಂತು ನೋಡುತ್ತಿದ್ದೀರಾ ?'' ಎಂದು ಕೇಳಿ ''ಅದಿರಲಿ, ನೀವು ಈವರೆಗೆ ಎಲ್ಲಿದ್ದದ್ದು ? ಏನು ಕೆಲಸ ಮಾಡುತ್ತಿದ್ದದ್ದು ಅಂತ ಹೇಳಲಿಲ್ಲವಲ್ಲ ?'' ಎಂದಳು. ಅಬ್ಬಾಸ್ ಹಾಜಿ ಅಲ್ಲೇ ಬೆಡ್ ಮೇಲೆ ಕೂತು, ''ಕೆಲಸ ಏನೂ ಅಂತ ಬೇಡ. ಆದರೆ ಕೈ ತುಂಬಾ ಸಂಪಾದಿಸಿಕೊಂಡಿದ್ದೇನೆ. ಮೊದಲಿಗೆ ನಮಗೊಂದು ಚಂದದ ಮನೆ ಆಗಬೇಕು. ಆ ಮನೆಗೊಂದು ಹೊಸ ಶೈಲಿಯ ಕಂಪೌಂಡ್ ಹಾಲ್ ಕಟ್ಟಬೇಕು. ಎದುರಿನ ಗೇಟಲ್ಲಿ ಹಫ್ಸಾ ಮಂಝಿಲ್ ಅಂತ ಹೆಸರು ಬರೆಯಬೇಕು. ಕಾಲೇಜಿಗೆ ಹೋಗುವ ಮಗ ಇಮ್ರಾನ್‌ಗೊಂದು ಕಾರು ಖರೀದಿಸಿ ಕೊಡಬೇಕು'' ಎಂದಾಗ, ಹಫ್ಸಾ ತನ್ನ ಗಂಡನನ್ನು ಆಶ್ಚರ್ಯದಿಂದ ನೋಡುತ್ತಾ ''ಅಷ್ಟೊಂದು ಹಣ ನಿಮ್ಮಲ್ಲುಂಟಾ ?'' ಎಂದು ಕೇಳಿದಳು. ''ಹಣದ ಮಟ್ಟಿಗೆ ನೀನೇನು ಹೆದರಬೇಡ. ಮನಸ್ಸು ತುಂಬಾ ನೀನು ಪ್ರೀತಿ ಕೊಟ್ಟರೆ ಸಾಕು ?'' ಎಂದು ಅಬ್ಬಾಸ್ ಹಾಜಿ ಹೇಳಿ ಹೆಂಡತಿಯ ಕೆನ್ನೆ ಹಿಂಡಿದರು. ''ಅದಿರಲಿ, ನಿಮ್ಮ ಕೆಲಸ ಎಂಥಾದ್ದು ಮತ್ತು ಎಲ್ಲಿ ಇದ್ದದ್ದು ಅಂತ ಹೇಳಿದ್ದರೆ ಚೆನ್ನಾಗಿತ್ತು'' ಹಫ್ಸಾ ತಲೆ ತಗ್ಗಿಸಿಕೊಂಡಳು. ''ನಾನು ಈವರೆಗೆ ಮುಂಬೈಯಲ್ಲಿದ್ದೆ. ಇನ್ನು ಅಲ್ಲಿಗೆ ಹೋಗುವುದಿಲ್ಲ. ಇಲ್ಲೇ ಸೆಟ್ಲ್ ಆಗುತ್ತೇನೆ. ಆದರೆ ಏನು ಮಾಡುತ್ತಿದ್ದೆ ಎಂಬುದು ಬೇಡ'' – ಎಂದು ಅಬ್ಬಾಸ್ ಹಾಜಿ ಹೇಳಿದಾಗ, ಹಫ್ಸಾ ಮೌನವಾದಳು. ''ಹಫ್ಸಾ.... ನಾನು ನಿನ್ನನ್ನು ಬಿಟ್ಟು ಹೋದ ನಂತರ ನೀನು ತುಂಬಾ ಬೇಸರ, ಕಷ್ಟಪಟ್ಟಿರಬೇಕು ಅಲ್ವಾ ?''

''ಹೌದು. ಆದರೆ ಏನು ಮಾಡುವುದು ? ಎಲ್ಲಾ ಅಲ್ಲಾಹನ ವಿಧಿ ಅಷ್ಟೆ. ನಿಮಗಾಗಿ ಕನಿಷ್ಠ ಒಂದು ವರ್ಷ ಕಾದು ಕುಳಿತೆ. ನೀವು ಕಾಣದೆ ಆದಾಗ ಕಣ್ಮುಚ್ಚಿ ದಿನ ದೂಡಿದೆ.''

''ನಿನಗೆ ಬೇರೆಯವರೊಡನೆ ಮದುವೆ ಪ್ರಸ್ತಾಪ ಆಗಿತ್ತಾ ?'' – ಅಬ್ಬಾಸ್ ಹಾಜಿಯ ಧ್ವನಿಯಲ್ಲಿ ಪುರುಷ ಸ್ವಭಾವವಿತ್ತು. ''ಯಾಕೆ, ಸುಳ್ಳು ಹೇಳಲಿ ? ಮದುವೆ ಪ್ರಸ್ತಾಪ ಆಗಿತ್ತು. ಆದರೆ ನಾನದನ್ನು ತಿರಸ್ಕರಿಸಿದ್ದೆ. ಒಂದು ವೇಳೆ ಆಗಿದ್ದರೆ ಈವತ್ತು, ಈ ಕ್ಷಣ ನೀವು ಇಲ್ಲಿ ನನ್ನ ಎದುರು ಇರುತ್ತಿರಲಿಲ್ಲವೊ ಏನೋ ? ಆದರೆ ಈ ಇಮ್ರಾನ್‌ನನ್ನು ನೀವು ನನಗೆ ಕೊಡದೆ ಹೋಗಿದ್ದರೆ ನಾನು ಏನಾಗುತ್ತಿದ್ದೆನೋ ಏನೋ ? ನಾನು ಅವನಿಗಾಗಿಯೇ ಬದುಕಿದೆ. ಬೀಡಿ ಕಟ್ಟಿಯೇ ಅವನಿಗೆ ಒಳ್ಳೆಯ ವಿದ್ಯಾಭ್ಯಾಸ ಕೊಟ್ಟೆ. ಅದೇ ನನಗೆ ನೆಮ್ಮದಿಯ ವಿಷಯ.''

''ಯಾವತ್ತೋ ಒಂದು ಕೆಟ್ಟ ಘಳಿಗೆಯಲ್ಲಿ ನಾನು ಇಲ್ಲಿಂದ ಓಡಿಹೋದೆ. ನಿಮ್ಮನ್ನು ಕಷ್ಟಕ್ಕೀಡುಮಾಡಿದ ನನಗೆ ಈಗ ಪಶ್ಚಾತ್ತಾಪವಾಗುತ್ತಿದೆ. ನನ್ನನ್ನು ಕ್ಷಮಿಸು'' – ಅಬ್ಬಾಸ್ ಹಾಜಿಯ ಧ್ವನಿಯಲ್ಲಿ ಕ್ಷೀಣತೆ ಇತ್ತು. ''ಅದೆಲ್ಲ ಯಾಕೆ ? ನೀವೀಗ ಬಂದಿದ್ದೀರಲ್ಲ. ಅಷ್ಟು ಸಾಕು. ಆದರೆ ನೀವು ಬೇರೆ ಮದುವೆ ಆಗಿದ್ದೀರಾ ? ಅದನ್ನು ಮೊದಲು ಹೇಳಿ –'' ಹಫ್ಸಾಳ ಹೆಣ್ಣು ಮನಸ್ಸು ಪ್ರಶ್ನಿಸಿತು. ಇಲ್ಲ. ಹಾಗಂತ ಹೇಳಿ ಅಬ್ಬಾಸ್ ಹಾಜಿ ಬೇರೆ ಮಾತು ಆಡಲು ಪ್ರಯತ್ನಿಸಿದರು. ಒಂದು ಕ್ಷಣ ಅಲ್ಲಿ ಮೌನ ಆವರಿಸಿತು. ಆದರೆ ಹಫ್ಸಾ ಕಣ್ಣು ಬಿಡುವ ಮೊದಲೇ ಅಬ್ಬಾಸ್ ಹಾಜಿ ಅವಳನ್ನು ಅಪ್ಪಿ ಹಿಡಿದರು. ''ಛೇ... ಈ ಹಗಲಲ್ಲಿ ಎಂತದ್ದು ನಿಮ್ಮದು ? ಮನೆಯ ಮುಂಬಾಗಿಲು ಹಾಗೇ ತೆರೆದೇ ಇದೆ. ಯಾರಾದರೂ ಬಂದರೆ ?''

''ಯಾರು ಬಂದರೆ ನಮಗೇನು ? ನಾವೇನು ಗಂಡ ಹೆಂಡತಿಯಲ್ಲವಾ ?''

''ಅದು ಅಲ್ಲಾಂತ ನಾನು ಹೇಳುವುದಿಲ್ಲ. ಆದರೆ, ಈ ಹಗಲು ಒಳ್ಳೆಯದಲ್ಲ. ಮೊದಲು ನನ್ನ ಮನೆಗೆಲಸ ಆಗಲಿ. ಮತ್ತೆ ಕೂತು ಮಾತಾಡೋಣ'' ಎನ್ನುತ್ತಾ ಹಫ್ಸಾ ಅಲ್ಲಿಂದ ಎದ್ದು ಮನೆಗೆಲಸದಲ್ಲಿ ತೊಡಗಿಸಿಕೊಂಡಳು.

ಆವತ್ತು ಮಧ್ಯಾಹ್ನ ಒಳ್ಳೆಯ ಊಟವನ್ನೂ ಬಡಿಸಿದಳು. ಅಬ್ಬಾಸ್ ಹಾಜಿ ಮನೆಯೊಳಗಿಡೀ ಕಣ್ಣಾಡಿಸಿದರು. ಹಾಗೇ ಅಂಗಳಕ್ಕೂ ಇಳಿದು ಮತ್ತೊಂದು ಸುತ್ತು ಹಾಕುತ್ತಾ, ಹೆಂಡತಿಯ ಹಿಂದೆ ಓಡಾಡತೊಡಗಿ ಹಫ್ಸಾ ''ನಾವು ಈ ಹಗಲನ್ನೇ ರಾತ್ರಿ ಮಾಡಿಕೊಳ್ಳೋಣ'' ಅಂತ ಅಬ್ಬಾಸ್ ಹಾಜಿ ಮತ್ತೊಮ್ಮೆ ಹೇಳಿದಾಗ, ''ಏನಿದು ಈ ವಯಸ್ಸಲ್ಲಿ ?'' ಅಂತ ಹೇಳಿ ಹಫ್ಸಾ ನಾಚಿದಳಾದರೂ ಕೂಡಾ ಆ ರಾತ್ರಿ ಮಾತ್ರ ಹಫ್ಸಾ ತನ್ನನ್ನು ಗಂಡನಿಗೆ ಅರ್ಪಿಸಿದಳು.

'ನಿನ್ನೆ ಮೊನ್ನೆಯವರೆಗೆ ಒಂಟಿಯಾಗಿ ಮಲಗುತ್ತಿದ್ದ ಉಮ್ಮ ಈಗ ನನ್ನ ತಂದೆ ಅಂತ ಪರಿಚಯಿಸಿಕೊಟ್ಟವರ ಜತೆ

## ಆಸೆ - ಅಮಾವಾಸೆ

ಬದುಕಿನುದ್ದಕ್ಕೂ
ಅಕ್ಕಿ ರೊಟ್ಟಿಗಾಗಿ ಆಶಿಸಿದ
ದಲಿತ ಮಗುವೊಂದು
ಬಿದಿಗೆ ಚಂದ್ರನ ತೋರಿಸಿ
ಬೇಡಿತು
'ಅಷ್ಟಾದರೂ ಅಕ್ಕಿರೊಟ್ಟಿ
ಕೊಡೆ ಅವ್ವ'
''ನಾಳೆ''
ಎಂದ ಅವ್ವನ
ನಾಳೆಗಳು
ನಾಳೆಗಳಾಗಿ
ಹುಣ್ಣಿಮೆಯಂದೂ ಹಣ್ಣಾಗದೆ
ಕಡೆಗೆ
ಅವರಿಸಿಕೊಂಡಿತು
ಅಮಾವಾಸೆ.

ಜ. ಹೊ. ನಾರಾಯಣಸ್ವಾಮಿ
ವಕೀಲರು, ''ಮಾನವ'', ೨೦೬೪/ಎ, ಉತ್ತರ ಬಡಾವಣೆ
ಹಾಸನ - ೫೭೩ ೨೦೧

ಪ್ರೀತಿಯಿಂದ ಮಾತನಾಡುತ್ತಿರುವುದೆಂದರೆ ?' ಅಂತ ತನ್ನಲ್ಲೇ ಪ್ರಶ್ನಿಸಿ ಒಂದು ಕ್ಷಣ ಉಮ್ಮನನ್ನು ದುರುಗುಟ್ಟಿ ನೋಡಿದರೂ, ಉಮ್ಮನ ಮುಖದಲ್ಲಿ ಯಾವತ್ತೂ ಇಲ್ಲದ ಪ್ರೀತಿಯ ಕಾಂತಿ ಮತ್ತು ಉನ್ಮಾದದ ಗೆಲುವು ಕಂಡು ಖುಷಿಪಟ್ಟ. ನಾಳೆ ನಾನೂ ಕೂಡಾ ಮದುವೆಯಾದರೆ ಇದೇ ರೀತಿಯಾ ? ಅಂತಲೂ ಒರಟಾಗಿ ಪ್ರಶ್ನಿಸಿಕೊಂಡ.

ಎರಡೇ ಎರಡು ದಿನದ ನಂತರ,

ಇಪ್ಪತ್ತು ವರ್ಷದ ಹಿಂದೆ ಊರ ಬಿಟ್ಟು ಹೋದ ಅಬ್ಬಾಸ್ ಇದೀಗ ಹಾಜಿಯಾಗಿ ಎರಡು ದಿನದ ಹಿಂದೆಯೇ ಮನೆಗೆ ಬಂದಿದ್ದಾರೆ. ನೋಡಲು ಬಾರೀ ಚಂದ ಇದ್ದಾರಂತೆ. ಕೈ ತುಂಬಾ ಕಾಸು ತಂದಿದ್ದಾರೆ. ಇಡೀ ಊರು ತೆಗೆಯುವಷ್ಟು ಕಾಸು ಇದ್ದರೂ ಕೂಡಾ ಮಾತಲ್ಲಿ ಸ್ವಲ್ಪವೂ ಗತ್ತು ಇಲ್ಲವಂತೆ. ಚಂದದ ಒಂದು ಮನೆ ಕಟ್ಟಿಸುತ್ತಾರಂತೆ. ಮಗ ಇಮ್ರಾನ್‌ಗೆ ಒಂದು ಕಾರು ತೆಗೆದು ಕೊಡುತ್ತಾರಂತೆ ಎಂಬ ಮಾತು ಊರ ತುಂಬಾ ತೇಲಾಡಿತು. 'ಏನು, ಅವರು ಊರಿಗೆ ಬಂದಿದ್ದಾರಾ ? ಕೈ ತುಂಬಾ ಕಾಸು ತಂದಿದ್ದಾರಾ ? ಬಂದು ಎರಡು ದಿನವಾದರೂ ಯಾಕೆ ಮನೆ ಬಿಟ್ಟು ಅಂಗಳ ಇಳಿದಿಲ್ಲ ?' ಅಂತ ಕೆಲವರು, 'ಎಂಥ ಹಾಜಿ ಮಾರಾಯರೆ, ಹತ್ತಿರದಲ್ಲೇ ಪಳ್ಳಿ ಇದ್ದರೂ ಮನೆಯಲ್ಲೇ ನಮಾದ್ ಮಾಡುವುದು ಅಂದರೆ ? ಅಲ್ಲಾಹು ಅದನ್ನು ಮೆಚ್ಚಿಕೊಂಡಾನಾ ?' ಅಂತ ಮತ್ತೆ ಕೆಲವರು ಹೇಳಿಕೊಂಡರು. ಹೀಗೆ ಅನೇಕ ಮಂದಿ ಒಂದೊಂದು ಮಾತು ಆಡತೊಡಗಿದರು. ಎಲ್ಲಕ್ಕಿಂತ ಮುಖ್ಯವಾಗಿ ಅಬ್ಬಾಸ್ ಹಾಜಿಯನ್ನು ಬಾಲ್ಯದ ಅನೇಕ ಗೆಳೆಯರು ನೋಡಲು ಬಂದರು. ಬಂದವರೊಡನೆ ಅಬ್ಬಾಸ್ ಹಾಜಿ ಪ್ರೀತಿಯಿಂದ ಮಾತನಾಡತೊಡಗಿದರು. ನೆರೆಯ ಅನೇಕ ಹೆಂಗಸರೂ ಬಂದು ಹೋದರು. ಹಫ್ಸಾ ಅವರ ಜತೆಯೂ ಗೆಲುವಿನಿಂದಲೇ ಮಾತನಾಡಿಕೊಂಡಳು. ಅವರು ಈವರೆಗೆ ಎಲ್ಲಿಗೆ ಹೋದದ್ದು? ಎಂಥ ಕೆಲಸ ಮಾಡಿದ್ದು? ಹೇಗೆ ಕಾಸು ಮಾಡಿದ್ದು? ಎಂಬ ಪ್ರಶ್ನೆ ಎಲ್ಲರ ತಲೆ ತಿನ್ನತೊಡಗಿತ್ತು. ಅಬ್ಬಾಸ್ ಹಾಜಿ, ಮನೆಗೆ ಕಾಲಿಟ್ಟು ಒಂದು ವಾರ ಉರುಳಿತ್ತು. ಮಗ ಇಮ್ರಾನ್ ಬೇಡ ಬೇಡ ಅಂದರೂ ಕೂಡಾ ಅವನಿಗೆ ಅತ್ತಿತ್ತ ಓಡಾಡಲು ಒಂದು ಮಾರುತಿ ಕಾರು ಖರೀದಿಸಲಾಯಿತು. ಈಗ ಇರುವ ಮನೆಯ ಒಂದು ಪಾರ್ಶ್ವದಲ್ಲೇ ತಾರಸಿಯ ಮನೆಗೆ ಅಡಿಪಾಯ ಹಾಕಲಾಯಿತು. ಹಫ್ಸಾಳ ಮೈ ತುಂಬಾ ಚಿನ್ನದಾಭರಣ ನೇತಾಡತೊಡಗಿತು. ಚಂದದ ಸೀರೆ, ರವಕೆಯೂ ಕಾಣಿಸಿಕೊಂಡಿತು. ಸ್ವತಃ ಅಬ್ಬಾಸ್ ಹಾಜಿಗೇ ಅತ್ತಿತ್ತ ಓಡಾಡಲು ಝೆನ್ ಕಾರು ಅಂಗಳಕ್ಕೆ ಬಂದು ನಿಂತಿತು. ಅಬ್ಬಾಸ್ ಹಾಜಿಯ ಅವತಾರ ಕಂಡು ಊರಿನವರು ಮೂಗಿನ ಮೇಲೆ ಬೆರಳಿಟ್ಟರು. ಮಗಳ ಮದುವೆಗೆ, ಮಗನ ಸುನ್ನತಿಗೆ, ಸೊಸೆಯ ಬಯಕೆಗೆ, ತಂದೆಯ ಆಸ್ಪತ್ರೆಯ ಖರ್ಚಿಗೆ ಅಂತ ಹಲವಾರು ಮಂದಿ ಆ ಮನೆಯ ಕದ ತಟ್ಟಿ ಬೇಡಿಕೊಂಡಾಗ, ಅಬ್ಬಾಸ್ ಹಾಜಿ ಇಲ್ಲ ಎನ್ನಲಿಲ್ಲ. ನಿನ್ನೆ ಮೊನ್ನೆಯವರೆಗೂ ಚಾಹುಡಿ, ಸಕ್ಕರೆ ಅಂತ ನೆರೆಕರೆಯವರ ಮನೆ ಮುಂದೆ ನಿಂತು ಬೇಡಿಕೊಂಡಿದ್ದ ಹಫ್ಸಾ ಇದೀಗ ಕದಾ ತಟ್ಟಿ ಸಂಕಷ್ಟ ಹೇಳಿಕೊಂಡವರಿಗೆ ಧನಸಹಾಯ ಮಾಡತೊಡಗಿದಳು. ಹಫ್ಸಾ..... ಈ ಹಣ ನನ್ನದಾದರೂ ಬಂದವರಿಗೆ ನೀನೇ ಅದನ್ನು ಕೊಡಬಹುದು'' – ಅಂತ ಅಬ್ಬಾಸ್ ಹಾಜಿ ಹೇಳಿದ ನಂತರ ಹಫ್ಸಾ ಹಿಂದಿರುಗಿ ನೋಡಲಿಲ್ಲ. ಮನೆ ಮುಂದೆ ನಿಂತು ಬೇಡಿದವರಿಗೆಲ್ಲಾ ಕೈಲಾದಷ್ಟು ಸಹಾಯ ಮಾಡುತ್ತಿದ್ದಳು. ಹಾಗಾಗಿ ಊರು ತುಂಬಾ ಅಬ್ಬಾಸ್ ಹಾಜಿಯ ಬಗ್ಗೆಯೇ ಜನರು ಮಾತನಾಡತೊಡಗಿದರು. ''ಇದು ನಿಮಗೆ, ಮತ್ತೆ ಇದು ನಿಮ್ಮವರಿಗೆ ಇಪ್ಪತ್ತು ವರ್ಷದ ಹಿಂದೆ ನಮ್ಮವರು ೬೦ ರೂಪಾಯಿ ಕಡ ಕೊಡಲು ಬಾಕಿ ಇತ್ತು. ಆ ೬೦ರ ಬದಲು ೬೦೦ ರೂಪಾಯಿ ಕೊಟ್ಟಿದ್ದಾರೆ. ಅದನ್ನು ಅವರಿಗೆ ಕೊಟ್ಟು ಬಿಡಿ'' ಎಂದು ಹಫ್ಸಾ ಮನೆಗೆ ಬಂದಿದ್ದ ಬಾವಾಕನ ಹೆಂಡತಿಯಲ್ಲಿ ಹೇಳಿ ಕಡ ಪಾವತಿಸಿದಳು.

'ನಮ್ಮದೇ ಊರಿನ ಅಬ್ಬಾಸ್ ಈಗ ಹಾಜಿಯಾಗಿ ಬಂದಿದ್ದಾರೆ. ಮನೆ ತುಂಬಾ ಹಣದ ಕಟ್ಟನ್ನೇ ಹೊತ್ತು




ತಂದಿದ್ದಾರೆ. ಮುಂದಿನವಾರ ನಮ್ಮ ಮಸೀದಿಯ ಜನ್ರಲ್ ಬಾಡಿ ಮೀಟಿಂಗ್ ಕೂಡಾ ಉಂಟು. ಆವಾಗ ಅವರನ್ನೇ ಮಸೀದಿಯ ಪ್ರೆಸಿರೆಂಟ್ ಮಾಡಿದರೆ ಹೇಗೆ ? ಹೇಗೋ ನಮ್ಮ ಮಸೀದಿಯ ಕಾಮಗಾರಿ ಆಗಲು ಬಾಕಿಯಿದೆ. ಅವರೇ ಪ್ರೆಸಿರೆಂಟ್ ಆದರೆ, ಆ ಕೆಲಸವನ್ನೆಲ್ಲಾ ಅವರೇ ಮಾಡುವುದಂತೂ ಖಂಡಿತಾ' – ಅಂತ ಮಸೀದಿಯ ಮಾಜಿ ಕಾರ್ಯದರ್ಶಿ ಜಮಾತ್‌ನ ಉಪಾತನಲ್ಲಿ ಹೇಳಿದ್ದ. ಆ ಮಾತು ಹಾಲಿ ಅಧ್ಯಕ್ಷರ ಕಿವಿಗೆ ಬಿದ್ದಾಗ ಒಮ್ಮೆ ಅವರು ಹೌಹಾರಿದ್ದರೂ ಕೂಡಾ ಆಗಲಿ, ಮಸೀದಿಯ ಕೆಲಸ ಆಗುವವರೆಗೂ ಅಬ್ಬಾಸ್ ಹಾಜಿಯೇ ಅಧ್ಯಕ್ಷರಾಗಲಿ. ಒಂದೆರಡು ವರ್ಷದ ನಂತರ ಮತ್ತೆ ನೋಡೋಣ. ಈಗ ನಾನೇ ಮುಂದುವರಿದರೆ, ನನ್ನ ಕಿಸೆಗೆ ಕತ್ತರಿ ಬೀಳುತ್ತದೆ ಎಂದು ಭಾವಿಸಿ, ತನ್ನಲ್ಲಿ ಈ ಬಗ್ಗೆ ಯಾರೂ ಚರ್ಚಿಸಲು ಬರುತ್ತಾರೆ ಎಂಬುದಕ್ಕೆ ಕಾದವರಂತೆ ಕುಳಿತುಬಿಟ್ಟಿದ್ದರು. ಆದರೆ ಯಾರೂ ಆ ಬಗ್ಗೆ ನೇರವಾಗಿ ಹಾಲಿ ಅಧ್ಯಕ್ಷರಲ್ಲಿ ಮಾತನಾಡದಿದ್ದಾಗ, ಉಪಾಯವಿಲ್ಲದೆ ಅವರೇ 'ನನಗೆ ಆರೋಗ್ಯ ಸರಿ ಇಲ್ಲ. ನೀವು ಈ ಬಾರಿ ಬೇರೆ ಯಾರಾದರೊಬ್ಬರನ್ನು ಪ್ರೆಸಿರೆಂಟ್ ಆಗಿ ಮಾಡಿ' ಎಂದು ಒಂದಿಬ್ಬರಲ್ಲಿ ಹೇಳಿಕೊಂಡರು. ಅದಾದನಂತರ ಒಂದಿಬ್ಬರಿಗೆ ಆ ಬಗ್ಗೆ ಎದುರಿನಲ್ಲೇ ಮಾತನಾಡಲು ಧೈರ್ಯ ಬಂದಿರಬೇಕು. 'ಅದೇ ನಮ್ಮ ಅಬ್ಬಾಸ್ ಹಾಜಿಯನ್ನು ಮಾಡಿದರೆ ಹೇಗೆ ?' ಎಂದು ಒಬ್ಬಾತ ಕೇಳಿದಾಗ, 'ಮಾಡಿದರೆ ಹೇಗೆ ಅಂತ ಕೇಳಿದರೆ ಸಾಲದು ? ಅದರ ಬಗ್ಗೆ ಮಾತನಾಡಲು ನಾವೆಲ್ಲ ಒಮ್ಮೆ ಆ ಮನೆಗೆ ಹೋಗಬೇಕು. ಅಲ್ಲಿ ನಮ್ಮ ಮಸೀದಿಯ ಕಾಮಗಾರಿಯ ಅಪೂರ್ಣತೆಯ ಬಗ್ಗೆ ತಿಳಿಸಬೇಕು. ಹಾಗೇ ಮಾತಿನಲ್ಲೇ ಪಾಲಿಸಿ ಹಾಕಿ ಅವನನ್ನು ಒಪ್ಪಿಸಬೇಕು' ಎಂದು ಹಾಲಿ ಅಧ್ಯಕ್ಷ ರಝಾಕ್ ಹಾಜಿ ಹೇಳಿದರು. ಆ ಮಾತನ್ನು ಸ್ವೀಕರಿಸಿಕೊಂಡ ಹಲವರು, ಅದರಂತೆ ಮಾಡೋಣ ಎಂಬ ತೀರ್ಮಾನಕ್ಕೆ ಬಂದರಲ್ಲದೆ ರಝಾಕ್ ಹಾಜಿಯ ನೇತೃತ್ವದಲ್ಲಿ ಒಂದು ನಿಯೋಗ ಅಬ್ಬಾಸ್ ಹಾಜಿಯ ಮನೆಗೆ ಕಾಲಿಟ್ಟಿತು. ''ಈವತ್ತು ಶುಕ್ರವಾರ ರಾತ್ರಿ. ಒಳ್ಳೆಯ ದಿನ ನಿಮ್ಮ ಮನೆಗೆ ಕಾಲಿಟ್ಟಿದ್ದೇನೆ. ಪಡೆದವನ ಬರ್ಕತ್ ಸದಾ ಸುರಿಯುವ ರಾತ್ರಿ ಅಲ್ವಾ ?'' ಎಂದು ನಿಯೋಗದಲ್ಲಿದ್ದ ಬೆಂಡಿ ಸುಲೈಮಾಕ ಹೇಳಿ ಮಾತಿಗೆ ತೊಡಗಿದರು.

''ಅಬ್ಬಾಸ್ ಹಾಜಿ, ಕಳೆದ ಏಳು ವರ್ಷದಿಂದ ನಾನು ಈ ಮಸೀದಿಯ ಅಧ್ಯಕ್ಷನಾಗಿ ನಿಯತ್ತಿನಿಂದ ದುಡಿದಿದ್ದೇನೆ. ಇನ್ನು ದುಡಿಯಲು ನನ್ನ ದೇಹದಲ್ಲಿ ಶಕ್ತಿ ಇಲ್ಲ. ಹೇಗೋ ನೀನು ಮತ್ತೆ ಊರಿಗೆ ಬಂದಿದ್ದೀಯಾ. ಅಲ್ ಹಂದುಲಿಲ್ಲಾಹ್. ಮತ್ತೆ ನಾವು ಈ ರಾತ್ರಿ ಯಾಕೆ ಬಂದಿದ್ದೇವೆ ಅಂದರೆ, ನಾಳೆ ಶುಕ್ರವಾರ ಅಲ್ವಾ ? ಅದೇ ಜುಮಾ ನಮಾಜಿನ ನಂತರ ಮದ್ರಸದ ಹಾಲ್‌ನಲ್ಲಿ ಮಸೀದಿಯ ಜನ್ರಲ್ ಬಾಡಿ ಮೀಟಿಂಗ್ ಉಂಟು. ಅಲ್ಲಿ ಹೊಸ ಅಧ್ಯಕ್ಷರ ನೇಮಕ ಆಗುತ್ತದೆ. ಆ ಅಧ್ಯಕ್ಷ ನೀನೇ ಆಗಬೇಕು ಎಂದು ನಾವು ಬಯಸಿದ್ದೇವೆ. ಅದನ್ನು ಒಪ್ಪಿಸಲು ಈ ಕಡೆ ಬಂದಿದ್ದೇವೆ'' ಎಂದು ರಝಾಕ್ ಹಾಜಿ ಹೇಳಿದಾಗ, ಅಬ್ಬಾಸ್ ಹಾಜಿ ಗಡ್ಡವನ್ನೊಮ್ಮೆ ಪೂಸಿದರು. ಸ್ವಲ್ಪ ಸಮಯದ ನಂತರ ನಿಯೋಗದಲ್ಲಿದ್ದ ಒಂಬತ್ತು ಮಂದಿಗೂ ಕುಡಿಯಲು ಹಾರ್ಲಿಕ್ಸ್ ಬಂತು. ''ನಾನು ಅದಕ್ಕೆ ಲಾಯಕ್ಕಾದ ಮನುಷ್ಯ ಅಲ್ಲ, ಯಾಕೆಂದರೆ ನಾನು ಸಣ್ಣದಿರುವಾಗ ಮದ್ರಸಕ್ಕೂ ಹೋದವನಲ್ಲ. ಅಲ್ಲದೆ ದೀನಿನ ಬಗ್ಗೆ ನನಗೇನೂ ಹೆಚ್ಚು ಗೊತ್ತಿಲ್ಲ. ಹಾಗಾಗಿ ನನ್ನನ್ನು ಅದರಿಂದ ಬಿಟ್ಟು ಬಿಡಿ'' ಎಂದು ಅಬ್ಬಾಸ್ ಹಾಜಿ ಹೇಳಿದರಾದರೂ, ಒಳಗೊಳಗೆ ಬಯಸದೆ ಬಂದ ಭಾಗ್ಯ ಕಳಕೊಳ್ಳುತ್ತಿದ್ದೇನಾ ? ಅಂತ ಪ್ರಶ್ನಿಸಿಕೊಂಡರು.

''ಇಲ್ಲ, ಹಾಜಿಯಾರರೇ, ನೀವೇ ಆಗಬೇಕು. ನಮ್ಮ ಮಸೀದಿಯ ಕೆಲಸ ಪೂರ್ತಿ ನಿಮ್ಮಿಂದಲೇ ಆಗಬೇಕು.'' ಬೆಂಡಿ ಸುಲೈಮಾಕ ಹೇಳಿ ಒಂದು ನಗೆ ನಕ್ಕರು. ಹಾಗೂ ಹೀಗೂ ಮಾತನಾಡುತ್ತಾ ಕಾಲ ಕಳೆದ ನಿಯೋಗ ಕೊನೆಗೂ ಅಬ್ಬಾಸ್ ಹಾಜಿಯನ್ನು ಒಪ್ಪಿಸುವಲ್ಲಿ

ಯಶಸ್ವಿಯಾಯಿತು. ವಿಷಯ ತಿಳಿದ ಹಫ್ಸಾ ಸಂತಸಗೊಂಡಳಲ್ಲದೆ, ಒಂದು ವರ್ಷದಿಂದ ಬಾಕಿ ಇದ್ದ ತಿಂಗಳ ವಂತಿಗೆ ಕೊಡದಿದ್ದರೆ ಜಮಾತ್‌ನಿಂದ ಹೊರಗೆ ಹಾಕುತ್ತೇವೆ ಎಂದು ಕಳೆದ ತಿಂಗಳಷ್ಟೇ ಬೊಬ್ಬೆ ಹಾಕಿಹೋದ ಕರೆಂಟ್ ಅದ್ರಮಾಕನ ಮಾತು ನೆನಪಾಯಿತು. ಉಪಾಯವಿಲ್ಲದೆ ಇಮ್ರಾನ್‌ನ ವಾಚು ಅಡವಿಟ್ಟು ಮಸೀದಿಯ ವಂತಿಗೆ ಕಟ್ಟಿದ್ದನ್ನೂ ನೆನಪಿಸಿಕೊಂಡಳು. ಈಗ ಅದೇ ಮಂದಿ ನನ್ನ ಗಂಡನನ್ನೇ ಮಸೀದಿಯ ಅಧ್ಯಕ್ಷರಾಗಿ ಅಂತ ಒತ್ತಾಯಿಸಲು ಬಂದಿದ್ದಾರೆ ಎಂದು ತನ್ನಲ್ಲೇ ಹೇಳಿಕೊಂಡು ಗೆಲುವಾದಳು.

ಶುಕ್ರವಾರದ ಜುಮಾ ನಮಾಜಿನ ನಂತರ ಅಬ್ಬಾಸ್ ಹಾಜಿ ಮಸೀದಿಯ ಅಧ್ಯಕ್ಷರಾಗಿ ಸರ್ವಾನುಮತದಿಂದ ಆಯ್ಕೆಗೊಂಡರಲ್ಲದೆ, ನಿಕಟಪೂರ್ವ ಅಧ್ಯಕ್ಷ ರಝಾಕ್ ಹಾಜಿಯಿಂದ ಅಧಿಕಾರವನ್ನೂ ಸ್ವೀಕರಿಸಿದರು. ಅಲ್ಲದೆ ಅದೇ ವೇಳೆ ಆಡಳಿತ ಕಮಿಟಿಯ ಸಭೆಯನ್ನೂ ನಡೆಸಿ ಮಸೀದಿಯ ಕಾಮಗಾರಿಯ ಬಗ್ಗೆ ಚರ್ಚಿಸಿ ಅಂದಾಜು ವೆಚ್ಚವನ್ನೂ ತಯಾರಿಸಿ ಮುಂದಿನ ಕಾರ್ಯಕ್ರಮದ ಬಗ್ಗೆಯೂ ನಿರ್ಣಯ ಕೈಗೆತ್ತಿಕೊಳ್ಳಲಾಯಿತು.

ಈಗ ಅಬ್ಬಾಸ್ ಹಾಜಿ ಹಗಲು ಹೊತ್ತು ಮಸೀದಿಯ ಸುತ್ತ ಕಾಲ ಕಳೆಯುತ್ತಿದ್ದಾರೆ. ಅಷ್ಟೇ ಅಲ್ಲ, ಅಲ್ಲಿ ನಡೆಯುವ ಕಾಮಗಾರಿಯ ಮೇಲುಸ್ತುವಾರಿ ನೋಡಿಕೊಳ್ಳುತ್ತಿದ್ದಾರೆ. ಮನೆಯಿಂದ ಮಸೀದಿಗೆ ಕಾರಲ್ಲೇ ಓಡಾಡುತ್ತಿದ್ದಾರೆ. ಇಮ್ರಾನ್ ಕಾರಲ್ಲೇ ಕಾಲೇಜಿಗೆ ಹೋಗುವುದನ್ನು ನೋಡಿ ಸಂತಸದಿಂದ ಬೀಗುತ್ತಾರೆ. ಹಫ್ಸಾ ಗಂಡನನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಾಳೆ. ಬೀಡಿ ಕಟ್ಟುವ ಸೂಪನ್ನು ನೆರೆಯ ಹಲೀಮಾಳಿಗೆ ದಾನ ಮಾಡಿದ್ದಾಳೆ. ಗಂಡನಿಗೆ ಬಗೆ ಬಗೆಯ ತಿಂಡಿ, ತಿನಿಸು ಮಾಡಿಕೊಡುತ್ತಾಳೆ. ಅದಲ್ಲದೆ ಹೊಸದಾಗಿ ಕಟ್ಟಲ್ಪಡುವ ಮನೆಯ ಕೆಲಸದ ಮೇಲ್ವಿಚಾರಣೆ ನೋಡಿಕೊಳ್ಳುತ್ತಾಳೆ. ಬೋರಾದಾಗ ಟಿ.ವಿ.ಯ ಮುಂದೆ ಕೂತುಕೊಳ್ಳುತ್ತಾಳೆ. ನೆರೆಮನೆಯವರ ಜತೆ ಸ್ವಲ್ಪ ಮಾತನ್ನೂ ಕಡಿಮೆ ಗೊಳಿಸಿದ್ದಾಳೆ. ಅವರೇನಾದರೂ ತೀರಾ ಲಘುವಾಗಿ ಮಾತನಾಡಿದರೆ, 'ನಾನು ಮೊದಲಿನ ಹಫ್ಸಾ ಅಂತ ತಿಳಿದುಕೊಂಡಿದ್ದೀರಾ ?' ಅಂತ ಖಾರವಾಗಿಯೇ ಕೇಳುತ್ತಾಳೆ. 'ನಮ್ಮ ಗಂಡ ಕೂಡಾ ಹೀಗೆ ಆಗಿದ್ದರೆ, ನಾವೆಷ್ಟು ಖುಷಿಯಾಗಿ ಇರಬಹುದಿತ್ತು ಅಂತ ನೀವು ಭಾವಿಸುತ್ತಿರಬೇಕು ಅಲ್ಲವಾ ?' ಎಂದು ವ್ಯಂಗ್ಯವಾಗಿ ನೆರೆಕರೆಯ ತನ್ನದೇ ವಯಸ್ಸಿನ ಮಹಿಳೆಯರಲ್ಲಿ ಪ್ರಶ್ನಿಸುತ್ತಾಳೆ. ಅಲ್ಲದೆ ತನ್ನ ಗಂಡನ ಬಗ್ಗೆ ಜನರು ಹೆಮ್ಮೆಯಿಂದ ಮಾತನಾಡತೊಡಗಿದಾಗಲೆಲ್ಲಾ ಹೆಮ್ಮೆ ಯಿಂದ ಬೀಗುತ್ತಾಳೆ. ಇಮ್ರಾನ್ ಕೂಡಾ ಈಗ ಬದಲಾಗಿದ್ದಾನೆ. ಕಷ್ಟಪಟ್ಟು ಕಾಲೇಜಿಗೆ ಹೋಗುತ್ತಿದ್ದ ದಿನಗಳ ನೆನಪು ಈಗವನಿಗೆ ಇಲ್ಲವಾಗಿದೆ. ಕೇವಲ ಕಾಲೇಜು ಮಾತ್ರವಲ್ಲ, ಇತರ ಕಡೆಗೆ ಹೋಗುವಾಗಲೂ ಕಾರಲ್ಲೇ ಓಡಾಡುತ್ತಾನೆ. ಈಗ ತನ್ನ ತಂದೆ ಹಿಂದೆ ತನ್ನ ಆಪ್ತರ ಗುಂಪನ್ನು ಇಟ್ಟುಕೊಂಡಿದ್ದಾನೆ. ತಂದೆ ಮಸೀದಿಯ ಅಧ್ಯಕ್ಷನಾದ ನಂತರವಂತೂ ತುಂಬಾ ಬದಲಾಗಿದ್ದಾನೆ.

* * *

ಆವತ್ತು ಮನೆ ಮುಂದೊಂದು ಹೊಸ ಕಾರು ಬಂದು ನಿಂತಿತ್ತು. ಕೇವಲ ಕಾರು ಮಾತ್ರವಲ್ಲ, ಅದರಿಂದ ಒಬ್ಬಳು ಮಹಿಳೆ ಮತ್ತು ಹತ್ತು ವರ್ಷದ ಹುಡುಗಿಯೂ ಇದ್ದಳು. ಬುರ್ಖಾ ಧರಿಸದ ಆ ಮಹಿಳೆ ಅಬ್ಬಾಸ್ ಹಾಜಿಯ ಮುಖ ನೋಡಿ ನಗುತ್ತಾಳೆ. ಆ ಹುಡುಗಿ ಹಾಜಿಯ ಕೈ ಹಿಡಿದಿದ್ದಾಳೆ.

ಹಫ್ಸಾ ನಿಂತಲ್ಲೇ ಅವಕ್ಕಾದಳು. ಹೊಸ ಕಾರು ಬಂದು ನಿಂತಾಗ ಆದ ಆ ಪುಳಕ ಈಗ ಇಲ್ಲ. ಗಂಡನ ಜತೆ ಇರುವ ಮಹಿಳೆ ಮತ್ತು ಆ ಹುಡುಗಿ ಯಾರು ? ಅಂತ ತಿಳಿಯದ ಹೊರತು ಅವಳಿಗೆ ನಿಂತಲ್ಲಿ ನಿಲ್ಲಲು ಆಗಲಿಲ್ಲ. ಬಾ... ಬಾ... ಅಬ್ಬಾಸ್ ಹಾಜಿ ಕರೆಯುತ್ತಿದ್ದುದೂ ಹಫ್ಸಾಳಿಗೆ ಕೇಳಿಸುತ್ತಿತ್ತು. ಅವಳು ಅದೇನೋ ಹೇಳುತ್ತಿದ್ದಳು. ಬಹುಶಃ ಹಿಂದಿ ಭಾಷೆಯಾಗಿರಬೇಕು ಎಂದು ಭಾವಿಸಿ ಸುಮ್ಮನಾದಳಾದರೂ ಕೂಡಾ ಆಗಂತುಕರಾರು ಅಂತ ತಿಳಿಯದೆ ಗೊಂದಲಕ್ಕೀಡಾದಳು.

ಅಬ್ಬಾಸ್ ಹಾಜಿ ಅವರಿಬ್ಬರನ್ನೂ ಮಹಡಿಗೆ ಕರೆದೊಯ್ದರು. ಹಾಗೇ ಕರೆದುಕೊಂಡು ಹೋಗು ವಾಗಲೂ ಹಫ್ಸಾಳಲ್ಲಿ ಒಂದೇ ಒಂದು ಮಾತಿಲ್ಲ. ಅವಳು ಅಲ್ಲೇ ನಿಂತಿದ್ದರೂ ಕೂಡಾ ಅವಳಲ್ಲಿ ಅಬ್ಬಾಸ್ ಹಾಜಿಯಾಗಲೀ, ಆ ಮಹಿಳೆಯಾಗಲೀ ಮಾತನಾಡದೆ ಹೋದಾಗ 'ಬಂದವಳು ಯಾರು ?' ಅಂತ ತಿಳಿದು ಕೊಂಡ ಹಫ್ಸಾ ಬಚ್ಚಲು ಕೋಣೆಯ ಬಾಗಿಲು ಎಳೆದು ಕಣ್ಣೀರಿಳಿಸತೊಡಗಿದಳು.

''ಕಣ್ಣೀರು ಸುರಿಸಬೇಡ ಹಫ್ಸಾ.... ನಿನಗೆ ಇದೆಲ್ಲ ವಿಚಿತ್ರವಾಗಿ ಕಾಣಬಹುದು. ಆದರೆ ನಾನು ಈ ಸ್ಥಿತಿಗೆ ಬರಲು ಇವಳೇ ಕಾರಣ. ಇವಳಿಲ್ಲದೆ ಹೋಗಿದ್ದರೆ, ನಾನು ಯಾವತ್ತೋ ಮಣ್ಣಾಗುತ್ತಿದ್ದೆ. ಆತ್ಮವನ್ನು ಹತ್ಯೆ ಮಾಡಲು ಹೊರಟ ನನ್ನನ್ನು ತಡೆದು ನನ್ನ ಮನಸ್ಸಿಗೆ ನೆಮ್ಮದಿ ಕೊಟ್ಟವಳಿವಳು. ಬಂದಾಗಲೇ ನಾನು ಈ ವಿಷಯವನ್ನು ತಿಳಿಸಬೇಕಾಗಿತ್ತು. ಆದರೆ ನಾನು ಬೇರೆ ಮದುವೆಯಾಗಿಲ್ಲ ಅಂತ ಸುಳ್ಳು ಹೇಳಿದೆ. ಅಲ್ಲದೆ ನಾನೊಂದು ಮದುವೆಯಾಗಿದ್ದೇನೆ ಅಂತ ಹೇಳಿದ ಮೇಲೂ ಇವಳು ನನಗೆ ಆಸರೆಯಾಗಿ ನಿಂತಳು. ಉಪಾಯವಿಲ್ಲದೆ ಮದುವೆಯಾದೆ. ಒಂದು ಹೆಣ್ಮಗುವಿನ ತಂದೆಯೂ ಆದೆ.




ಆವಾಗ ನಿನ್ನ ಮತ್ತು ಇಮ್ರಾನ್‌ನ ನೆನಪು ಜಾಸ್ತಿಯಾಗತೊಡಗಿತು. ಅದೇ ನೆನಪಲ್ಲಿ ಇಲ್ಲಿಗೆ ಬಂದೆ. ಈ ಮನೆ ಕಟ್ಟಿಸಿದೆ. ಈ ಮನೆಯ ನಿರ್ಮಾಣದ ಹಿಂದೆ ಅವಳ ಬೆವರ ಹನಿಯೂ ಇದೆ. ಹಾಗಾಗಿ ಅವಳನ್ನೂ ಇಲ್ಲಿಗೆ ಕರೆತರಲೇಬೇಕಾಯಿತು. ನೀನು ಕೆಳಗಡೆ ಇರು. ಇವಳು ಮೇಲ್ಗಡೆ ದಿನ ದೂಡುತ್ತಾಳೆ. ನಾನು ನಿಮಗಿಬ್ಬರಿಗೂ ಗಂಡನಾಗಿ ಬದುಕು ಸವೆಸುತ್ತೇನೆ. ಆಗಬಹುದೆ? ಬೇಡಾ ಅಂತ ನೀನು ಹೇಳಿದ ತಕ್ಷಣ ನಾವು ಮೂವರು ಹೊರಟುಹೋಗುತ್ತೇವೆ'' ಎಂದು ಅಬ್ಬಾಸ್ ಹಾಜಿ ಹೇಳಿ ಹಫ್ಸಾಳ ಮುಖವನ್ನೇ ನೋಡತೊಡಗಿದರು.

''ಎಂಥ ಮಾತನ್ನು ಹೇಳುತ್ತಿದ್ದೀರಿ ? ನಾನು ನನ್ನಷ್ಟಕ್ಕೆ ದಿನ ದೂಡುತ್ತಿರಲಿಲ್ಲವಾ ? ಹೇಗೂ ಇಪ್ಪತ್ತು ವರ್ಷ ಕಾಲ ಕಳೆದೆ. ಇನ್ನು ಕೆಲವು ವರ್ಷ ಕಾಲ ಕಳೆಯಲು ನನಗೆ ಕಷ್ಟವಾಗುತ್ತಿತ್ತಾ ? ನನ್ನ ಸಂಕಟ ಸಾಯಲಿ. ಆ ಮಗನಿಗೆ ಇನ್ನು ಇದನ್ನೆಲ್ಲ ಹೇಗೆ ಹೇಳಲಿ ? ಅವನು ಇದನ್ನೆಲ್ಲ ನಂಬುತ್ತಾನಾ ? ಸಾಲದ್ದಕ್ಕೆ ನೀವು ಮಸೀದಿಯ ಅಧ್ಯಕ್ಷರೂ ಆಗಿದ್ದೀರಿ. ಒಬ್ಬಳು ಹಿಂದು ಮಹಿಳೆಯನ್ನು ಮದುವೆ ಯಾದ ವ್ಯಕ್ತಿ ನಮ್ಮ ಮಸೀದಿಯ ಅಧ್ಯಕ್ಷ ಯಾಕಾಗಬೇಕು ಅಂತ ಜಮಾತ್‌ನವರು ಪ್ರಶ್ನಿಸತೊಡಗಿದರೆ, ಅವರಿಗೆ ನಾನು ಏನೆಂದು ಉತ್ತರಿಸಲಿ ? ಸಮಾಜದ ವಕ್ರದೃಷ್ಟಿ ಯಿಂದ ನಾನೇಗೆ ತಪ್ಪಿಸಿಕೊಳ್ಳಲಿ ? ಅದೂ ಅಲ್ಲದೆ ನೀವೊಬ್ಬರು ಹಾಜಿಯಾರರಂತೆ. ಹಾಜಿಯಾರರು ಹಿಂದೂ ಮಹಿಳೆಯನ್ನು ಮದುವೆಯಾಗುವುದು ಎಲ್ಲಾದರೂ ಉಂಟೇ ? ಅಷ್ಟಕ್ಕೂ ಅವಳನ್ನು ಯಾಕೆ ನಮ್ಮ ದೀನಿಗೆ ಕರೆತರಲಿಲ್ಲ ?'' – ಹಫ್ಸಾ ಸಿಡಿದೇಳತೊಡಗಿದಳು.

''ಆಯ್ತು, ಹಫ್ಸಾ.... ಕಿರುಚಬೇಡ. ನಿನ್ನ ಮನಸ್ಥಿತಿ ಏನೂಂತ ನನಗೆ ಅರ್ಥವಾಗುತ್ತಿದೆ. ಆದರೆ ಇಂಥ ಮನೋಭಾವ ಒಳ್ಳೆಯದಲ್ಲ'' – ಅಬ್ಬಾಸ್ ಹಾಜಿಯ ಧ್ವನಿಯಲ್ಲಿ ನೋವಿತ್ತು.

''ಉಮ್ಮ ಯಾರವರು ? ಯಾಕೆ ಇಲ್ಲಿಗೆ ಬಂದಿದ್ದಾರೆ ? ಒಂದೆಡೆ ನಿಮ್ಮ ಗಂಡ, ನನ್ನ ಅಬ್ಬ ಅಂತ ಹೇಳುತ್ತಿದ್ದೀರಿ. ಈಗ ಆ ಹೆಂಗಸಿಗೂ ಅವರು ಗಂಡನಾ ? ಆ ಮಗುವಿಗೂ ಅವರು ತಂದೆಯಾ ?'' ಕಾರಿನಿಂದಿಳಿದು ಬಂದ ಮಗ ಇಮ್ರಾನ್ ಅಂಗಳ ದಾಟುತ್ತಲೇ ತಾಯಿಯನ್ನು ತರಾಟೆಗೆ ತೆಗೆದುಕೊಳ್ಳತೊಡಗಿದ. ಒಳಗಡೆ ತಂದೆ ಇರುವುದನ್ನು ಗುರುತಿಸಿ ಮತ್ತಷ್ಟು ಕಿರುಚತೊಡಗಿದ.

''ಊರಿಡೀ ಸುದ್ದಿಯಾಗಿದೆ ಉಮ್ಮ. ಮಸೀದಿಯ ಪ್ರೆಸಿಡೆಂಟರೇ ಹಿಂದೂ ಸ್ತ್ರೀಯನ್ನು ಮದುವೆಯಾಗಿದ್ದು ಅಂತ ಹೇಳಿ, ನನ್ನನ್ನೂ ತಮಾಷೆ ಮಾಡುತ್ತಾರೆ'' ಎಂದು ಮಾತು ಸೇರಿಸಿದ. ''ಮೋನೇ, ಏನಿದು ? ನೀನು ಕಲಿತವ. ಹೀಗೆ ಮಾತನಾಡುವುದೇ ? ನಾನು ಈ ಸ್ಥಿತಿಗೆ ತಲುಪಲು ಅವಳೇ ಕಾರಣ. ನಿನ್ನ ಕಾರಿನ ಹಿಂದೆ, ಈ ಮನೆಯ ಹಿಂದೆ ಅವಳ ಬೆವರಿದೆ. ಅಷ್ಟಕ್ಕೂ ನಿಮಗಿಬ್ಬರಿಗೆ ನಾವು ಇಲ್ಲಿರುವುದು ಇಷ್ಟವಿಲ್ಲದಿದ್ದರೆ ನಾವು ಹೊರಟುಹೋಗುತ್ತೇವೆ. ನನಗಿನ್ನು ಬದುಕಿನ ಮೇಲೆ ಯಾವುದೇ ಆಸೆ ಉಳಿದಿಲ್ಲ.'' ಅಬ್ಬಾಸ್ ಹಾಜಿಯ ಮಾತಲ್ಲಿ ಕೋಪವಿತ್ತಾದರೂ ಮಗನಿಗೆ ಸಮಾಧಾನ ಹೇಳುವ ವ್ಯವಧಾನವಿತ್ತು. ಹಾಗಾಗಿ ಇಮ್ರಾನ್ ಮತ್ತೆ ಕಿರುಚಾಡಲಿಲ್ಲ.

ರಾತ್ರಿಯಾಗಿತ್ತು.

ಅಬ್ಬಾಸ್ ಹಾಜಿ ತನ್ನ ಹೆಂಡತಿ ಮತ್ತು ಮಗಳನ್ನು ಕೆಳಗಡೆ ಕರೆತಂದು ಹಫ್ಸಾ ಮತ್ತು ಇಮ್ರಾನ್‌ಗೆ ಪರಿಚಯಿಸಲು ಮುಂದಾದರು. ಹಫ್ಸಾಳಿಗೆ ಅದು ಇಷ್ಟವಿಲ್ಲದೆ ಹೋದರೂ ಕೂಡಾ ಉಗುಳು ನುಂಗಿ ಸುಮ್ಮನಾದಳು. ಎಲ್ಲರೂ ಜತೆಗೂಡಿ ಊಟ ಮಾಡಬೇಕೆಂಬ ಅಬ್ಬಾಸ್ ಹಾಜಿಯ ಆಸೆ ಈಡೇರಲಿಲ್ಲ. ಮೊದಲ ರಾತ್ರಿ ಯಾರ ಜತೆ ಕಳೆಯಬೇಕು ? ಯಾರ ಕೈಯ ಊಟ ಮಾಡಬೇಕು ? ಎಂಬ ಸಂದಿಗ್ಧತೆಯಲ್ಲಿ ಸಿಲುಕಿಕೊಂಡ ಅಬ್ಬಾಸ್ ಹಾಜಿ ಅಂದು ಊಟ ಕೂಡಾ ಮಾಡದೆ ಅಲ್ಲೇ ವರಾಂಡದಲ್ಲಿ ಒಂಟಿಯಾಗಿ ಬಿದ್ದುಕೊಂಡರು.

ಕಣ್ಣು ಬಿಡುವಾಗ ಊರವರು ಎಚ್ಚರಗೊಂಡಿದ್ದರು. ಕೇವಲ ಎಚ್ಚರಗೊಂಡಿದ್ದಷ್ಟೇ ಅಲ್ಲ, ಮಸೀದಿಯ ಪ್ರೆಸಿರೆಂಟರು ಹಿಂದೂ ಹುಡುಗಿಯನ್ನು ಮದುವೆ ಯಾಗಿದ್ದಾರೆ ಎಂಬ ಸುದ್ದಿ ವಿಕಾರವಾಗಿ ಬೆಳೆಯತೊಡಗಿತು. ಇದನ್ನು ಕೇಳಿಸಿಕೊಂಡ ಅಬ್ಬಾಸ್ ಹಾಜಿಯ ತಲೆ ಚಿಟ್ಟು ಹಿಡಿಯಿತು.

''ಅವರು ಮಸೀದಿಯ ಅಧ್ಯಕ್ಷರಾಗಿ ಮುಂದುವರಿಯುವುದು ಬೇಡ. ಒಂದೋ ಆ ಹೆಂಗಸನ್ನು ನಮ್ಮ ದೀನಿಗೆ ಕರೆತರಲಿ'' ಅಂತ ಕೆಲವರು ಹೇಳಿದರೆ, ಮತ್ತೆ ಕೆಲವರು ''ಅವರಿಂದ ರಾಜಿನಾಮೆ ಕೇಳೋಣ. ಕೊಡದಿದ್ದರೆ ವಜಾ ಮಾಡೋಣ'' ಎಂದು ಜಮಾತ್‌ನ ಮಾಜಿ ಅಧ್ಯಕ್ಷ ರಝಾಕ್ ಹಾಜಿ ಹೇಳುತ್ತ ಕಿರುಚಾಡಿದ ಯುವಕರನ್ನು ಸುಮ್ಮನಾಗಿಸಿದರು.

''ನಾನು ಮತ್ತು ಮಗಳು ಎಲ್ಲಿಗಾದರೂ ಹೊರಟುಹೋಗುತ್ತೇವೆ. ಇಲ್ಲಿ ದಿನ ದೂಡುವುದು ಕಷ್ಟಾಂತ ಅನಿಸುತ್ತದೆ'' – ಅವಳು ಹಿಂದಿಯಲ್ಲಿ, ''ಸದ್ಯ ಇಲ್ಲೇ ಇರೋಣ'' ಅಂತ ಅಬ್ಬಾಸ್ ಹಾಜಿ ಹೇಳಿದ್ದನ್ನು ಕೇಳಿಸಿಕೊಂಡ. ಹಾಗೇ ಉಮ್ಮನಿಗೂ ಅದನ್ನು ಹೇಳಿಬಿಟ್ಟ.

ಒಂದು ವಾರ ಉರುಳಿತು.

ಆದರೆ ಆ ಮನೆಯಲ್ಲಿ ಅವರ ಮಧ್ಯೆ ಮಾತಿಲ್ಲ, ಕತೆ ಇಲ್ಲ. ಅಬ್ಬಾಸ್ ಹಾಜಿ, ಒಂದೊಂದು ದಿನ ಒಬ್ಬೊಬ್ಬರ ಜತೆ ಕಳೆಯುವ ಪರಿಪಾಠ ಇಟ್ಟುಕೊಂಡರೂ ಅವರ ಮನಸ್ಸಿಗೆ ಶಾಂತಿ ಇರಲಿಲ್ಲ. ಅಲ್ಲದೆ ಊರವರೂ ಕೂಡ ವಕ್ರವಾಗಿಯೇ ಕಾಣತೊಡಗಿದ್ದು ಅವರಿಗೆ ಮತ್ತಷ್ಟು ಚಿಂತೆ ಕಾಡಿತ್ತು. ಆರಂಭದಲ್ಲಿ ಪ್ರೀತಿ, ಗೌರವ ತೋರುತ್ತಿದ್ದ ಮಂದಿ ಈಗ ಎದುರು ಸಿಕ್ಕಿದರೂ ಕೂಡಾ ಗುರುತೇ ಇಲ್ಲದವರಂತೆ ಓಡಾಡತೊಡಗಿದ್ದನ್ನು ಕಂಡು ಅಬ್ಬಾಸ್ ಹಾಜಿಗೆ ಮತ್ತಷ್ಟು ಹತಾಶೆಯಾಯಿತು. ಎಲ್ಲಕ್ಕಿಂತ ಮುಖ್ಯವಾಗಿ ವಿದ್ಯಾವಂತ ಮಗ ಇಮ್ರಾನ್‌ನ ವರ್ತನೆ ಅವರಿಗೆ ಬೇಸರ ಹುಟ್ಟಿಸಿತ್ತು.

ಅವತ್ತು ಮುಂಜಾನೆ ಸುಬ್ಹೆ ನಮಾಜಿಗೆ ಏಳಬೇಕಾಗಿದ್ದ ಅಬ್ಬಾಸ್ ಹಾಜಿ ಕಣ್ತೆರೆಯಲೇ ಇಲ್ಲ. ಅಬ್ಬಾಸ್ ಹಾಜಿ, ಹೃದಯಾಘಾತಕ್ಕೀಡಾದರಂತೆ ಎಂಬ ಸುದ್ದಿ ಕಿವಿಗಪ್ಪಳಿಸಿದ ತಕ್ಷಣ ಮನೆಯವರೆಲ್ಲರೂ ಹೌಹಾರಿದ್ದರು. ಹಫ್ಸಾ ಮತ್ತು ಆಕೆ ಮೃತದೇಹದ ಮೇಲೆ ಬಿದ್ದು ಕೂಗಾಡತೊಡಗಿದ್ದರು. ಸುದ್ದಿ ತಿಳಿದ ಊರವರು ಸಾಲುಗಟ್ಟಿ ಬಂದು ಕಣ್ಣೀರಿಳಿಸತೊಡಗಿದರು. ಜನ ತಲೆಗೊಂದರಂತೆ ಮಾತನಾಡತೊಡಗಿದರು.

'ಅವರು ಕಣ್ಮುಚ್ಚುವ ವಯಸ್ಸಾ ಇದು ? ಅವರು ರಾತ್ರಿ ಅಲ್ಲೇ ಮಲಗಿದ್ದು. ಅವಳೇ ಏನೋ ಮಾಡಿರಬೇಕು' – ಅಂತ ಹಫ್ಸಾ ಎನ್ನುತ್ತಾ 'ನೀನೇ ನನ್ನ ಗಂಡನನ್ನು ಕೊಂದೆ' ಎಂದು ಹೇಳಿ ಕಿರುಚಾಡ ತೊಡಗಿದಳು. ಅವಳು ಏನೂ ಅರ್ಥವಾಗದವಳಂತೆ ಹಫ್ಸಾಳ ಮುಖವನ್ನೇ ನಿಂತು ನೋಡತೊಡಗಿದಳು. ಬಂದವರು ಮತ್ತೆ ಮತ್ತೆ ಕಣ್ಣೀರಿಳಿಸಿದರು. ಹಾಗೇ ಮಧ್ಯಾಹ್ನ ಸೂರ್ಯ ನಡು ನೆತ್ತಿಗೇರುವ ಮೊದಲೇ ಮೃತದೇಹವನ್ನು ಮಣ್ಣು ಮಾಡಲಾಯಿತು.

ಮೂರು ದಿನ ಆ ಮನೆಯಲ್ಲಿ ಸೊಳ್ಳೆ ಕೂಡಾ ಮಿಸುಕಾಡಲಿಲ್ಲ. ಹಫ್ಸಾಳಿಗೆ ಗಂಡನ ಅಗಲಿಕೆಯೊಂದಿಗೆ ಮುಂದಿನ ಬಾಳಿನ ಬಗ್ಗೆ ಚಿಂತೆ ಕಾಡತೊಡಗಿತ್ತು. ಮಾತು ಮಾತಿಗೂ ಅವಳು 'ಆಕೆ'ಯ ವಿರುದ್ಧ ಕೆಂಡಕಾರುತ್ತಲೇ ಇದ್ದಳು. ಜಮಾತ್‌ರಿಗೆ ಮಸೀದಿಯ ಕಾಮಗಾರಿ ಪೂರ್ತಿಯಾಗದ ಚಿಂತೆ ಇತ್ತು. ಮಸೀದಿಯ ಪ್ರಮುಖರು ಒಂದೊಂದು ಸಲಹೆಯ ಮಾತನ್ನಾಡತೊಡಗಿದರು.

ನಾವೇ ಆ ಮನೆಗೆ ಹೋಗೋಣ. ಈ ಮಸೀದಿಯ ಕೆಲಸ ಪೂರ್ತಿ ಮಾಡಿಕೊಡುತ್ತೇನೆ ಅಂತ ಅವರು ಬಾಯಿಬಿಟ್ಟು ಹೇಳಿದ್ದಾರಲ್ಲ. ಅವರ ಹಣದಿಂದ ಅದನ್ನು ಪೂರ್ತಿಗೊಳಿಸೋಣ. ಅದನ್ನು ಆ ಹಫ್ಸಾ ಅಥವಾ ಇಮ್ರಾನ್‌ನಿಂದ ಕೇಳಿ ಪಡೆಯೋಣ ಅಂತ ಸಿಗರೇಟ್ ಇಬ್ರಾಯಿಯಾಕ ಹೇಳಿದರು.

ಅವರ ಸಲಹೆ ಹಲವರಿಗೆ ಹಿಡಿಸಿತು. ಹಾಗೇ ಅವತ್ತು ರಾತ್ರಿ ರಝಾಕ್ ಹಾಜಿಯ ನೇತೃತ್ವದಲ್ಲಿ ಆ ಮನೆಗೆ ಮಸೀದಿಯ ಪ್ರಮುಖರು ಹೋಗಿ ಎಲ್ಲಾ ವಿಷಯವನ್ನೂ ಅಬ್ಬಾಸ್ ಹಾಜಿ ನೀಡಿದ ವಾಗ್ದಾನವನ್ನೂ ಹೇಳಿ ಅವರು ಬಿಟ್ಟು ಹೋದ ಹಣದಲ್ಲಿ ಕಾಮಗಾರಿಗೆಂದು ಇಂತಿಷ್ಟು ಕೊಡುವಂತೆ ವಿನಂತಿಸಿಕೊಂಡರು.

''ಇದೂ ನಿಮ್ಮ ಕೇಳಿಯಾ ? ಗಂಡ ನನ್ನ ಕೈಯಲ್ಲೇನೂ ಕೊಟ್ಟು ಹೋಗಲಿಲ್ಲ. ಎಲ್ಲಾ ಅವಳಲ್ಲಿರಬೇಕು'' ಅಂತ ಹಫ್ಸಾ ಹೇಳಿ ಕೂಗ ತೊಡಗಿದಳು.

''ಅವಳಲ್ಲೇ ಮಾತಾಡೋಣ'' ಒಬ್ಬ ಹೇಳಿದ.

''ಬೇಡ, ನಮಗೆ ಅವಳಲ್ಲಿ ಮಾತನಾಡಲು ಭಾಷೆ ಗೊತ್ತಿಲ್ಲವಲ್ಲ'' ಇನ್ನೊಬ್ಬ ಹೇಳಿದ.

''ಛೇ, ಛೇ ಅವಳು ಕೊಟ್ಟರೂ ಬೇಡ. ಯಾಕೆಂದರೆ ಹಿಂದುಗಳು ಕೊಟ್ಟ ಹಣವನ್ನು ಮಸೀದಿಗೆ ಹಾಕುವುದಾ ?'' ಮತ್ತೊಬ್ಬ ನಡುವೆ ಬಾಯಿ ಹಾಕಿದ.

''ಅವಳು ಕೊಟ್ಟರೇನು ? ಅದು ಅಬ್ಬಾಸ್ ಹಾಜಿಯದ್ದಲ್ಲವಾ ?''

''ಭಾಷೆ ಗೊತ್ತಿಲ್ಲದ್ದರೇನು ? ಈ ಇಮ್ರಾನ್‌ನನ್ನೇ ಮೇಲೆ ಕರೆದುಕೊಂಡುಹೋಗಿ ಮಾತನಾಡೋಣ'' – ಎನ್ನುತ್ತಾ ಮೊಯಿದಿನಾಕ ಹೇಳಿದರು.

ಅದರಂತೆ ಎಲ್ಲರೂ ಇಮ್ರಾನ್‌ನನ್ನು ಕರಕೊಂಡು ಮೇಲೆ ಹೋದರು. ಇಮ್ರಾನ್ ಹಿಂದಿಯಲ್ಲೇ ಅವಳಲ್ಲಿ ವಿಷಯ ಹೇಳಿದ.

''ಅದಕ್ಕೇನಂತೆ, ಇಗೋ. ಇದರಲ್ಲಿ ೫ ಲಕ್ಷ ರೂಪಾಯಿ ಇದೆ'' ಎಂದು ಹೇಳುತ್ತಾ ಆಕೆ ಹಣವನ್ನು ಇಮ್ರಾನ್‌ನ ಕೈಗಿತ್ತು, ''ಮಸೀದಿ ನಿರ್ಮಾಣದಂತಹ ಪುಣ್ಯ ಕೆಲಸಕ್ಕೆ ಕೊಡದಿದ್ದರೆ ಆಗುತ್ತದಾ ?'' ಎಂದರು.

ಹಣದ ಕಟ್ಟನ್ನು ನೋಡಿದ ಮಸೀದಿಯ ಪ್ರಮುಖರಿಗೆ ಮುಖ್ಯವಾಗಿ ರಝಾಕ್ ಹಾಜಿಗೆ ತಲೆ ತಿರುಗಿ ದಂತಾಯಿತು. ತಾವು ಕನಸು ಕಾಣುತ್ತಿದ್ದೇವೆಯೋ ಅಂತ ತಮ್ಮ ತಮ್ಮಲ್ಲೇ ಕೇಳಿಕೊಂಡು 'ಆಕೆ'ಗೆ ಅಭಿನಂದಿಸಿ ಮುಗುಳ್ನಗುತ್ತಾ ಮಹಡಿಯಿಂದ ಕೆಳಗಿಳಿದು ಬಂದರು. ಹಾಗೇ ನಡೆದುಕೊಂಡು ಬರುವಾಗಲೆಲ್ಲಾ ಅವರಿಗೆ ಅವಳು ಬಲವಾಗಿ ಕಾಡಿ ಹೋದಳು.

''ಉಮ್ಮಾ..... ಅವರೆಂಥ ಒಳ್ಳೆಯವರು ಉಮ್ಮಾ..... ನಾವಿಷ್ಟು ಕಿರುಚಾಡಿದಾಗ, ಅಷ್ಟೊಂದು ಸಂಪತ್ತು ಇದ್ದೂ, ಅದನ್ನು ತೋರಿಸಿಕೊಳ್ಳದೆ, ನಮ್ಮ ಮೇಲೆ ಒಂದಿಷ್ಟೂ ಹಗೆ ಸಾಧಿಸುವ ಮನೋಭಾವ ಇಟ್ಟುಕೊಳ್ಳದೆ, ನನ್ನ ಜತೆ ಪ್ರೀತಿಯಿಂದ ಮಾತನಾಡುತ್ತಲೇ, ಆ ಮಸೀದಿಗೆ ನಿನ್ನ ಅಬ್ಬನ ಹೆಸರು ಇಡುವಂತೆ ನೀ ನೋಡಿಕೋ'' ಎಂದು ಇಮ್ರಾನ್ ತಾಯಿಯಲ್ಲಿ ಹೇಳುವುದಕ್ಕೂ.... ''ನಾನಿನ್ನು ನನ್ನ ದಾರಿ ನೋಡುತ್ತೇನೆ. ಇನ್ನು ಈ ಕಡೆ ನಾನು ಬರೋಲ್ಲ. ನೀವು ಆರಾಮವಾಗಿರಿ. ನನ್ನಲ್ಲಿ ತಪ್ಪಿದ್ದರೆ ಕ್ಷಮಿಸಿ'' ಅಂತ ಹೇಳುವುದಕ್ಕೂ....... ಸರಿಸಮವಾಗಿತ್ತು. ತಾಯಿ ಮತ್ತು ಮಗ ಏನೋ ಮಾತನಾಡುತ್ತಿರುವುದನ್ನು ಕಂಡು ಅದ್ಯಾವುದರ ಬಗ್ಗೆಯೂ ಮಾತನಾಡದ ಆಕೆ ಮೇಲ್ಮನೆಯ ಬಾಗಿಲಿನ ಚಾವಿಯನ್ನೂ, ಹಣದ ಕಟ್ಟನ್ನೂ ಹಫ್ಸಾಳ ಮುಂದೆ ಚಾಚಿದಾಗ, ಹಫ್ಸಾಳಿಗೆ ತಾನು ಕನಸು ಕಾಣುತ್ತಿದ್ದೇನೆ ಎಂಬಂತಾಗಿ, ಒಂದು ಕ್ಷಣ ಬೆಚ್ಚಿಬಿದ್ದಳು. ಅವಳು ತನ್ನ ಕಣ್ಣನ್ನೇ ನಂಬದಾದಳು.

''ಬೇಡ, ಬೇಡ.... ನೀನು ಹೋಗಬೇಡ. ನಿನ್ನಂಥ ಉದಾತ್ತ ಹೆಣ್ಣು ನಮ್ಮನ್ನು ಬಿಟ್ಟು ಹೋಗುವುದು ಸರಿಯಲ್ಲ. ನೀನೇನೂ ತಪ್ಪು ಮಾಡಿಲ್ಲ, ನಾನೇ, ನಾನು ತಪ್ಪು ಮಾಡಿದೆ. ನನಗೆ ಕ್ಷಮೆ ನೀಡು. ಮಂದಿರ ಮಸೀದಿಗಳನ್ನು ಒಡೆಯುವ ಈ ಕಾಲದಲ್ಲಿ ನೀನು ನಿನ್ನ ಕೈಯಾರೆ ಮಸೀದಿಯ ಕಾಮಗಾರಿಗೆ ಹಣ ನೀಡಿದ್ದನ್ನು ನೋಡಿದ ಮೇಲೂ ನಾನು ನಿನ್ನನ್ನು ಅರ್ಥೈಸಿಕೊಳ್ಳದಿದ್ದರೆ, ನಾನು ಮುಸ್ಲಿಮಳಾಗಿ ಬದುಕಿ ಏನು ಪ್ರಯೋಜನ ? ಅಲ್ಲಾಹು ನನ್ನನ್ನು ಖಂಡಿತ ಕ್ಷಮಿಸಲಾರ. ಈ ಮನೆ, ಈ ಸಂಪತ್ತು, ಈ ವಾಹನಗಳ ಹಿಂದೆ ನಿನ್ನ ಬೆವರ ಹನಿ ಇದೆ ಅಂತ ಅವರು ಹೇಳಿದ ಮೇಲೂ ನಾನು ನಿನ್ನನ್ನು ಹೊರ ಹಾಕಿದರೆ ಅಥವಾ ನಿನ್ನ ಇಷ್ಟದಂತೆ ಹೊರಹೋಗುವಾಗಲೂ ತಡೆಯದಿದ್ದರೆ ನಾನು ಅವರಿಗೆ ದ್ರೋಹ ಬಗೆದಂತೆ. ನೀನು ಇಲ್ಲೇ ಇರು. ಒಂದೇ ಬಟ್ಟಲಲ್ಲಿ ಅನ್ನ ಬೇಯಿಸಿ ನಾವು ಜತೆಯಾಗಿ ದಿನ ದೂಡೋಣ. ನಮ್ಮ ಬದುಕಿಗೆ ನಿನ್ನ ಜಾತಿ ಕೂಡಾ ಅಡ್ಡಿಯಾಗದು ಎಂಬ ವಿಶ್ವಾಸ ನನಗಿದೆ'' – ಎನ್ನುತ್ತಾ ಹಫ್ಸಾ ಅವಳನ್ನು ಆಲಂಗಿಸಿಕೊಂಡಳು. ಅವಳ ಕಣ್ಣಲ್ಲಿ ಸಂತಸದ ಕಣ್ಣೀರಿಳಿಯಿತು. ಅವಳ ಪುಟ್ಟ ಮಗಳು ಅಳಬೇಡ ಅಮ್ಮಾ ಎನ್ನುತ್ತಿದ್ದಳು. ಕ್ಷಣಾರ್ಧದಲ್ಲಿ ಸೃಷ್ಟಿಯಾದ ಆ ದೃಶ್ಯವನ್ನು ಕಂಡ ಇಮ್ರಾನ್ ನಿಂತಲ್ಲೇ ಮರಗಟ್ಟಿದ.

ಹಂಝು ಮಲಾರ್
ಅರಸ್ತಾನ, ಅಂಚೆ : ಪಾವೂರು, ಮಂಗಳೂರು ತಾಲ್ಲೂಕು-೫೭೪೧೮೨

# ಸ್ವಾತಂತ್ರ್ಯದ ಸ್ವರೂಪ

*ದೀರ್ಘ ಹೋರಾಟದ ಮೂಲಕ ಭಾರತ ರಾಜಕೀಯ ಸ್ವಾತಂತ್ರ್ಯವನ್ನು ಸಾಧಿಸಿತು. ಗಾಂಧಿ ಯುಗಾಂತ್ಯಕ್ಕೆ ಕೊಂಚ ಮುನ್ನವೆ ರಾಷ್ಟ್ರೀಯ ಆಂದೋಲನ ಕಟ್ಟಿಕೊಟ್ಟ ಆದರ್ಶ ಮತ್ತು ಕನಸುಗಳು ಹೃದಯಗಳಿಂದ ದೂರ ಸರಿಯತೊಡಗಿದ್ದವು. ಪರಿಣಾಮ ಭ್ರಮಾ ನಿರಸನ. ಇದನ್ನು ಭಾರತೀಯ ಭಾಷಾ ಸಾಹಿತ್ಯದಲ್ಲಿ ಅಂದರೆ ಸ್ವಾತಂತ್ರ್ಯಾವಧಿ ಮತ್ತು ಸ್ವಾತಂತ್ರ್ಯೋತ್ತರ ಸಾಹಿತ್ಯ, ಕಲೆಗಳಲ್ಲಿ ಕಾಣಬಹುದು. ಕೆಲವು ಲೇಖಕರು 'ಸ್ವಾತಂತ್ರ್ಯ ಸ್ವರೂಪ'ವನ್ನು ತಮ್ಮ ರಚನೆಗಳಲ್ಲಿ ಚಿತ್ರಿಸತೊಡಗಿದ್ದರು. ಇದರ ಆಂತರ್ಯದಲ್ಲಿ ನೋವು, ನಿರಾಶೆ, ಅಸಹಾಯಕತೆ, ಸೂಚ್ಯ ಇಲ್ಲವೆ ವ್ಯಕ್ತ ಪ್ರತಿಭಟನೆಯ ಧ್ವನಿಯೂ ಮೂಡಿತ್ತು. ತೆಲುಗಿನ ಇಂಥ ಕತೆಗಳಲ್ಲಿ 'ಶಾರದ' (ಎಸ್. ನಟರಾಜನ್ ೧೯೨೪-೫೫) ಇವರ 'ಸ್ವಾತಂತ್ರ್ಯ ಸ್ವರೂಪಂ' (೧೯೪೮) ಒಂದು.*

**ಒಂ**ದೊಮ್ಮೆ, ಒಂದು ಚಿಕ್ಕ ದೇಶ, ಇನ್ನೊಂದು ದೇಶದಿಂದ ನಾನಾ ಅವಸ್ಥೆಗಳನ್ನು ಪಟ್ಟು ಸ್ವಾತಂತ್ರ್ಯ ಗಳಿಸಿತು. ಆ ಚಿಕ್ಕ ದೇಶದ ಜನರು ಸ್ವಾತಂತ್ರ್ಯ ಪಡೆದುದರ ಕುರುಹಾಗಿ ಸ್ವಾತಂತ್ರ್ಯ ಪ್ರತಿಮೆಯೊಂದನ್ನು ಮಾಡಿಸಿ ರಾಜಧಾನಿ ನಗರದಲ್ಲಿ ಪ್ರತಿಷ್ಠಾಪಿಸಬೇಕೆಂದು ತಮ್ಮ ಸ್ವತಂತ್ರ ಪ್ರಭುತ್ವಕ್ಕೆ ಮನವಿ ಸಲ್ಲಿಸಿದರು. ಸರಕಾರವೂ ಸಹ ತನ್ನ ಪ್ರಜೆಗಳ ಆಲೋಚನೆ ಯುಕ್ತವಾದುದೆಂದು ಒಪ್ಪಿ ಶಿಲ್ಪಿಯೊಬ್ಬನನ್ನು ಕರೆಸಿಕೊಂಡಿತು. ಆ ಶಿಲ್ಪಿ ಅಖಂಡ ಕಲೋಪಾಸಕನಾಗಿದ್ದ. ಅವರೆಗೆ ಅನೇಕ ವಿಗ್ರಹಗಳನ್ನು ಕೆತ್ತಿದ್ದ. ಅವನು ಕೆತ್ತಿದ ವಿಗ್ರಹಗಳು ಜೀವಕಳೆ ತುಂಬಿಕೊಂಡಿದ್ದವು. ಸರ್ಕಾರದ ಆಜ್ಞೆಯಂತೆ ಆ ಶಿಲ್ಪಿ ಒಂದು ಸುಮುಹೂರ್ತ ದಲ್ಲಿ ಶ್ರೇಷ್ಠ ಹಾಲುಗಲ್ಲಿನಲ್ಲಿ ವಿಗ್ರಹವನ್ನು ಕೆತ್ತಲು ತೊಡಗಿದ.

ಜನ ಹೋರಾಡಿ ಸ್ವಾತಂತ್ರ್ಯ ಗಳಿಸಿದವರಾದುದರಿಂದ, ಆ ಸ್ವಾತಂತ್ರ್ಯ ಪ್ರತಿಮೆಯು ತಮ್ಮ ಹೋರಾಟದ ಚರಿತ್ರೆಯನ್ನು ಸದಾ ನೆನಪಿಸುವಂತೆ, ತಮ್ಮ ಸುಖಪ್ರದವಾದ ಸ್ವಾತಂತ್ರ್ಯದ ಭವಿಷ್ಯತ್ತನ್ನು ಬಿಂಬಿಸುವಂತಿರುವ ಒಬ್ಬ ಮಹಾವೀರನ ಪ್ರತಿಮೆಯನ್ನು ಕೆತ್ತಬೇಕೆಂದು ಶಿಲ್ಪಿಯನ್ನು ಕೋರಿದರು. ಹಾಗೆಯೆ ಆಗಲೆಂದು ಶಿಲ್ಪಿಯು ಮಹಾವೀರನೊಬ್ಬನ ಪ್ರತಿಮೆಯನ್ನು ಕಡೆಯಲು ಪ್ರಾರಂಭಿಸಿದ.

ತೆಲುಗು ಮೂಲ : ಶಾರದ

ಆದರೆ ಮೊದಲಿನಿಂದಲೂ, ಜನಸಾಮಾನ್ಯರು ಹೋರಾಡಿ ಸ್ವಾತಂತ್ರ್ಯ ಗಳಿಸಿದರೆ, ತಮ್ಮ ಪ್ರಾಬಲ್ಯ ಮಣ್ಣುಗೂಡುವುದೆಂದು ಭಯಪಡುತ್ತ ಬಂದ ಶ್ರೀಮಂತರು ತಮ್ಮ ಮೇಲೆ ಅಧಿಕಾರ ನಡೆಸುತ್ತ ಬಂದ ವಿದೇಶಿ ಶ್ರೀಮಂತರೊಂದಿಗೆ ಗುಸುಗುಸು ಪಿಸಪಿಸ ಮಾತಾಡಿ ಅಧಿಕಾರವನ್ನು ತಮ್ಮ ಕೈ ಅಡಿಗೆ ತೆಗೆದುಕೊಂಡರು. ಈ ಧನವಂತರು, 'ಸ್ವಾತಂತ್ರ್ಯ ಪ್ರತಿಮೆ'ಯು ಪ್ರಜೆಗಳಿಗೆ ಹೊಸ ಸ್ವಾತಂತ್ರ್ಯ ಪ್ರಭುತ್ವಕ್ಕೆ ನಮ್ರತೆ, ವಿಧೇಯತೆಯಿಂದಿರುವಂತೆ ಕಲಿಸುವ ಸಂಕೇತವಾಗಿ, ದೊಂಬಿ, ಗಲಭೆ ಮಾಡದಂತೆ ಬೋಧಿಸುವ ಗುರುವಿನಂತಿರಬೇಕು. ಆದುದರಿಂದ ಆ ವಿಗ್ರಹವು ಪ್ರಶಾಂತ ತಪಸ್ವಿಯೊಬ್ಬನಂತೆಯೋ ಇಲ್ಲವೆ ಸನ್ಯಾಸಿಯಂತೆಯೋ ಇರಬೇಕೆಂದು ಆ ಶಿಲ್ಪಿಗೆ ಆಜ್ಞಾಪಿಸಿದರು. ಶಿಲ್ಪಿ 'ಅಪ್ಪಣೆ' ಎಂದು ಕೆತ್ತುತ್ತಿದ್ದ ಮಹಾವೀರನ ವಿಗ್ರಹಕ್ಕೆ ಸನ್ಯಾಸಿಯ ರೂಪ ಕೊಟ್ಟು ಕೆತ್ತತೊಡಗಿದ.

ಆ ದೇಶದ ಬಂಡವಾಳಶಾಹಿಗಳಲ್ಲಿ ಕೆಲವು ಮಹಾತ್ಮರು ದೇಶವನ್ನು, ಅದರ ಆರ್ಥಿಕ ಪರಿಸ್ಥಿತಿಯನ್ನು ತಮ್ಮ ಕಿಸೆಗಳಲ್ಲೂ ಭಾಷಣಗಳಲ್ಲೂ ಹಿಡಿದಿಟ್ಟುಕೊಂಡಿದ್ದರು. ಅವರಿಗೆ ಈ ಯಾವ ಸಲಹೆಗಳೂ ರುಚಿಸಲಿಲ್ಲ. ಅವರೆಲ್ಲ ಒಂದಾಗಿ, 'ಆ ವಿಗ್ರಹವು ನಮ್ಮ ವಿಶಾಲ ದೇಶದ ಸ್ವತಂತ್ರ ವ್ಯಾಪಾರದ ಶಕ್ತಿಯನ್ನು ವಿಸ್ತರಿಸುವಂತಹ ಒಂದು ದೊಡ್ಡ ಹಡಗಿನ ವ್ಯಾಪಾರಿಯ ರೂಪದಲ್ಲಿರಬೇಕು' ಎಂದು ಆ ಶಿಲ್ಪಿಗೆ ಆದೇಶ ಕಳಿಸಿದರು. ಆ ಶಿಲ್ಪಿ ಆ ದೇಶದ ಹಿಂದಿರುವ ಆರ್ಥಿಕ ಬಲವನ್ನು ಕಲ್ಪಿಸಿಕೊಂಡು 'ಹಾಗೆಯೇ ಆಗಲಿ ಸ್ವಾಮಿ' ಎಂದು ಕೆತ್ತುತ್ತಿದ್ದ ಸನ್ಯಾಸಿಯ ವಿಗ್ರಹವನ್ನು ಒಬ್ಬ ದೊಡ್ಡ ವ್ಯಾಪಾರಿಯ ವಿಗ್ರಹವನ್ನಾಗಿ ಮಾರ್ಪಾಟು ಮಾಡಲು ತೊಡಗಿದ.

ಆದರೆ ಸರಕಾರದಲ್ಲಿದ್ದ ಪ್ರಮುಖರು ಇದೆಲ್ಲ ಕೆಲಸಕ್ಕೆ ಬಾರದೆಂದು ಎರಡು ಮೂರು ಆಯೋಗಗಳನ್ನು, ನಾಲ್ಕೈದು ಸಮಿತಿಗಳನ್ನು ನೇಮಕ ಮಾಡಿ, ಅವುಗಳ ವರದಿಗಳನ್ನು ಒಟ್ಟಾಗಿಸಿ ಓದಿ, ಅವೆಲ್ಲವನ್ನು ನಿರಾಕರಿಸಿದ ನಂತರ "ಸ್ವಾತಂತ್ರ್ಯ ಪ್ರತಿಮೆಯು ಸರಕಾರದ ಬಗ್ಗೆ ಭಕ್ತಿ ವಿನಯಗಳನ್ನು ಕಲಿಸುವಂತೆ ಇರಬೇಕೇ ಹೊರತು ಅದು ಸನ್ಯಾಸಿಯಂತೆ ಇರತಕ್ಕುದಲ್ಲ. ಪ್ರಜೆಗಳಲ್ಲಿ ಸರಕಾರದ ಬಗ್ಗೆ ಭಯ, ಭಕ್ತಿ, ಶ್ರದ್ಧೆ, ಗೌರವಗಳನ್ನು ಉಂಟು ಮಾಡುವ ಸಶಸ್ತ್ರ ಯೋಧನ ವಿಗ್ರಹದಂತೆ ಇರಬೇಕೆಂದು ಸರಕಾರ ಭಾವಿಸುತ್ತದೆ. ನಿಜವಾದ ಪ್ರಜೆಗಳ ಶಾಂತಿಯನ್ನು ಪ್ರಜಾಪ್ರಭುತ್ವವನ್ನು ರಕ್ಷಿಸುವುದು ಸರಕಾರಿ ಸೈನ್ಯವೇ ಆಗಿದೆ. ಅದೂ ಅಲ್ಲದೆ ಜನರಲ್ಲಿ ಕೆಲವರು ಸದಾ ಹಸಿವೆಯೆಂದು, ಬಟ್ಟೆಯೆಂದು ಗಲಭೆಯುಂಟು ಮಾಡುತ್ತಲೋ, ಆರ್ಥಿಕ ಸಮಾನತೆಯೆಂದು ಸಲ್ಲದ ಪ್ರಚಾರ ಮಾಡುತ್ತಲೊ ಜನರ ಪ್ರಶಾಂತ ಜೀವನಕ್ಕೆ ಭಂಗ ತರುತ್ತಿರುವರು. ಅಂತಹವರಿಗೆ ಸ್ವತಂತ್ರ ಪ್ರಭುತ್ವದಲ್ಲಿ ಅವರ ಆಟ ನಡೆಯದೆಂದು ಎಚ್ಚರಿಕೆ ನೀಡುತ್ತ ಇರುವಂತೆ ಸ್ವಾತಂತ್ರ್ಯ ಪ್ರತಿಮೆಯು ಸಶಸ್ತ್ರ ಯೋಧನ ರೂಪದಲ್ಲಿರ ಬೇಕು" ಎಂದು ಬಹಿರಂಗ ಪ್ರಕಟಣೆಯೊಂದನ್ನು ಹೊರಡಿಸಿ ಸೈನಿಕನ ವಿಗ್ರಹವನ್ನು ರೂಪಿಸೆಂದು ಹುಕುಂ ಮಾಡಿದರು. 'ಹಾಗೆ ಆಗಲಿ' ಎಂದ ಶಿಲ್ಪಿ ತಾನೀಗ ಕೆತ್ತುತ್ತಿದ್ದ ವ್ಯಾಪಾರಿಯ ರೂಪವನ್ನು ಸಶಸ್ತ್ರ ಸೈನಿಕನ ರೂಪಕ್ಕೆ ತರತೊಡಗಿದ. ಸರಕಾರದ ಸಲಹೆಗೆ ಬಂಡವಾಳಶಾಹಿಗಳು ಹರ್ಷಗೊಂಡರು. ವ್ಯಾಪಾರಿಗಳು ಸ್ವಾಗತಿಸಿದರು. ಅತ್ತಲೂ ಮಾತಾಡಿ ಇತ್ತಲೂ ಮಾತನಾಡುವ ದೊಡ್ಡ ಮನುಷ್ಯರು ಅನುಮೋದಿಸಿದರು. ಪ್ರಜೆಗಳು ಮಾತ್ರ ಸರಕಾರದ ಧೋರಣೆ ಕಂಡು ಮೂಗಿನ ಮೇಲೆ ಬೆರಳಿಟ್ಟರು.

ಶಿಲ್ಪಿ ಈ ಎಲ್ಲದರ ನಡುವೆ ಅವಿರತವಾಗಿ ಶ್ರಮಿಸಿ ಸ್ವಾತಂತ್ರ್ಯ ಪ್ರತಿಮೆಯನ್ನು ಅಣಿಗೊಳಿಸಿದ. ಒಂದು ಸುದಿನ ಸ್ವಾತಂತ್ರ್ಯ ಪ್ರತಿಮೆಯನ್ನು ಪ್ರತಿಷ್ಠಾಪಿಸಲು ರಾಜಧಾನಿ ನಗರಕ್ಕೆ ತಂದರು. ಆಗ್ಗೇ ಸಿದ್ಧವಾಗಿದ್ದ ಶಿಲಾ ವೇದಿಕೆಯ ಮೇಲೆ ಸ್ವಾತಂತ್ರ್ಯ ಪ್ರತಿಮೆಯನ್ನು ಇಟ್ಟರು. ಸರಕಾರಿ ಅಧ್ಯಕ್ಷರು ಸ್ವಾತಂತ್ರ್ಯವನ್ನು ಕುರಿತು ಒಂದು ಮಹೋಪನ್ಯಾಸ ನೀಡಿದ ಮೇಲೆ ಸ್ವಾತಂತ್ರ್ಯ ಪ್ರತಿಮೆಗೆ ಹೊದೆಸಿದ್ದ ಮಖಮಲ್ ಬಟ್ಟೆಯನ್ನು ಸರಿಸಿದರು. ಸ್ವಾತಂತ್ರ್ಯ ಪ್ರತಿಮೆ ಆಧುನಿಕ ಆಯುಧಗಳೊಂದಿಗೆ ಭಯಂಕರ ದೆವ್ವದ ರೂಪದಲ್ಲಿ ಸಾಕ್ಷಾತ್ಕರಿಸಿತು.

ಅನುವಾದ : ಸ. ರಘುನಾಥ
ಬಾಲಾಂಜನೇಯ ಸ್ವಾಮಿ ಗುಡಿಯ ಪೂರ್ವ, ರಾಮಕೃಷ್ಣ ಬಡಾವಣೆ
ಶ್ರೀನಿವಾಸಪುರ-೫೬೩ ೧೩೫, ಕೋಲಾರ ಜಿಲ್ಲೆ

# ಗ್ರಾಮೀಣ ದಲಿತ ಒಂದು ಲಘು ವ್ಯಾಖ್ಯಾನ

ದಲಿತರನ್ನು ಮುಖ್ಯವಾಗಿ ನಾಗರಿಕ ಹಾಗೂ ಗ್ರಾಮೀಣ ಎಂಬ ಎರಡು ಪ್ರಕಾರಗಳಲ್ಲಿ ಗುರುತಿಸಬಹುದು. ಬದುಕಿನ ಸ್ವರೂಪಗಳಲ್ಲಿ ನಾಗರಿಕ ದಲಿತನಿಗೂ ಗ್ರಾಮೀಣ ದಲಿತನಿಗೂ ತುಂಬಾ ವ್ಯತ್ಯಾಸವಿದೆ. ಒಮ್ಮೆ ಬಾಬು ಜಗಜೀವನ ರಾಮ್ ಅವರಿಂದ ಅನಾವರಣಗೊಂಡ ವಿಗ್ರಹವೊಂದನ್ನು ಚೆನ್ನಾಗಿ ತೊಳೆದು ಶುದ್ಧೀಕರಿಸಲಾಯಿತಂತೆ! ರಾಜಕೀಯದ ಹಿರಿಯ ವ್ಯಕ್ತಿಯೂ ರಾಷ್ಟ್ರಮಟ್ಟದ ಖ್ಯಾತನಾಮರೂ ಆದಂಥ ಅವರ ಸ್ಥಿತಿಯೇ ಹಾಗಾಗಿರುವಾಗ ಸಾಮಾನ್ಯ ದಲಿತನ ಸಾಮಾಜಿಕ ಸ್ಥಾನ-ಮಾನ ಹೇಗಿರಬಹುದು? ಅದರಲ್ಲೂ ಗ್ರಾಮೀಣ ಅಥವಾ ಹಳ್ಳಿಗಾಡಿನ ದಲಿತನ ಸ್ಥಿತಿ ಗತಿಯನ್ನು ವಿವರಿಸುವುದು ಸಾಧ್ಯವೇ?

ಈ ದೇಶದಲ್ಲಿ ಬಡತನವೇ ಬೇರೆ, ದಲಿತೀಯತೆಯೇ ಬೇರೆ. ಬಡತನಕ್ಕಿಂತ 'ದಲಿತತನ' ಎಂಬುದು ಅತ್ಯಂತ ಹೀನಾಯವಾದುದು. ಬಡವರು ಎಲ್ಲಾ ಜಾತಿಯಲ್ಲೂ ಇದ್ದಾರೆ, ನಿಜ. ಆದರೆ ಬಡತನ ಎಂಬುದು ಖಂಡಿತ ಶಾಶ್ವತವಲ್ಲ. ಲಕ್ಷಾಂತರ ರೂಪಾಯಿಗಳ ಲಾಟರಿ ದಕ್ಕಿದರೂ ಸಾಕು ಬಡತನವೆಂಬುದು ರಾತ್ರೋರಾತ್ರಿ ಕಣ್ಮರೆಯಾಗಿ ಬಿಡುತ್ತದೆ. ಆದರೆ ದಲಿತತನ ಎಂಬುದು ಹಾಗಲ್ಲ! ದಲಿತನಿಗೆ ಕೋಟ್ಯಾಂತರ ರೂ.ಗಳ ಲಾಟರಿ ದೊರಕಿದರೂ ಬಡತನ ತೊಲಗಬಹುದೇ ವಿನಃ ದಲಿತತನ ಮಾತ್ರ ಎಂದೆಂದಿಗೂ ಮರೆಯಾಗುವುದಿಲ್ಲ. ಏಕೆಂದರೆ ದಲಿತತನದ ಇನ್ನೊಂದು ಮುಖವೇ ಹೀನ ಜಾತಿ! ದಲಿತ ಎಂತಹ ವಿದ್ಯಾವಂತ, ಸಾಹಿತಿ, ಕಲಾವಿದ, ರಾಜಕೀಯ ಮುತ್ಸದ್ದಿಯಾದರೂ ಜಾತಿಯಿಂದ ಹೀನನೇ! ಹೀಗಿರುವಾಗ ಗ್ರಾಮೀಣ ದಲಿತನ ಸ್ಥಿತಿಯನ್ನು ಯಥಾವತ್ತಾಗಿ ವಿವರಿಸಿದರೆ ಕೆಲವರ ದೃಷ್ಟಿಗೆ ಉತ್ಪ್ರೇಕ್ಷೆಯಂತೆ ಕಾಣಬಹುದು! ಈಗ ಅಸ್ಪೃಶ್ಯತೆಯ ಬಿಸಿ ಸ್ವಲ್ಪಮಟ್ಟಿಗೆ ಕಡಿಮೆಯಾಗಿದೆ. ಅಷ್ಟನ್ನೇ ಸಹಿಸದ ಜಾತಿವಾದಿಗಳು ''ಜಾತೀಯತೆ ಎಲ್ಲಿದೆ?'' ಎಂದು ಹುಬ್ಬೇರಿಸುವುದು ಸಹಜ.

ನಗರಗಳ ಸಾರ್ವಜನಿಕ ಸ್ಥಳಗಳಲ್ಲಿ ಅಸ್ಪೃಶ್ಯತೆಯ ಭೀಕರತೆ ಅಷ್ಟಾಗಿ ಕಂಡುಬಾರದಿರಬಹುದು. ಆದರೂ ದಲಿತನ ಜಾತಿ ತಿಳಿದರೆ ಕೆಲವು ಬಡಾವಣೆಗಳಲ್ಲಿ ಬಾಡಿಗೆಗೆ ಮನೆಯೂ ದೊರಕುವುದಿಲ್ಲ! ಸಾರ್ವಜನಿಕ ಕೊಳವೆಗಳಲ್ಲಿ ನೀರು ಪಡೆಯಲಾಗುವುದಿಲ್ಲ! ಆದರೆ ಇತ್ತೀಚಿನ ದಲಿತ ಸಂಘಟನೆಗಳ ಚಟುವಟಿಕೆಗಳ ನಿಮಿತ್ತ ನಗರದ ದಲಿತ ಒಂದಿಷ್ಟು ತಲೆ ಎತ್ತಿ, ಚಪ್ಪಲಿ ಮೆಟ್ಟಿ ನಡೆಯಬಹುದು. ಜಾತಿಗೆ ಸಂಬಂಧಿಸಿದಂತೆ ಸಂಕಷ್ಟಗಳೇನಾದರೂ ಎದುರಾದರೆ ಯಾವುದಾದರೊಂದು ಮಾಧ್ಯಮದ ಮೊರೆ ಹೋಗಬಹುದು. ಆದರೆ ಹಳ್ಳಿಗಾಡಿನ ದಲಿತನ ಸ್ಥಿತಿಯಂತೂ ನಿಜಕ್ಕೂ ಚಿಂತಾಜನಕ.

ಈ ಇಪ್ಪತ್ತೊಂದನೆಯ ಶತಮಾನದಲ್ಲೂ ಕೆಲವು ಹಳ್ಳಿಗಳಲ್ಲಿ ದಲಿತರು ಸವರ್ಣೀಯರ ದೇವಾಲಯಗಳನ್ನು ಪ್ರವೇಶಿಸುವಂತಿಲ್ಲ! ಕ್ಷೌರಿಕನ ಬಳಿಗೆ ಕಾಲು ಹಾಕುವಂತಿಲ್ಲ! ಸಾರ್ವಜನಿಕ ವಿಷಯಗಳಲ್ಲಿ ಮಾತು ಸೇರಿಸುವಂತಿಲ್ಲ! ಹೋಟೆಲು ಮನೆಗಳ ಹೊರಗೆ ಪ್ರತ್ಯೇಕ ಕಪ್ಪುಗಳು! ಇನ್ನೂ ಕೆಲವು ಕಡೆಗಳಲ್ಲಿ

> **ಸ್ವಾತಂತ್ರ್ಯಾನಂತರದಲ್ಲಿ ದಲಿತರಿಗಾಗಿ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಕೆಲವು ಸವಲತ್ತುಗಳನ್ನು ಕಲ್ಪಿಸಿದೆ. ಆದರೆ ಆ ಸವಲತ್ತುಗಳು ಯಾವುವು? ಅವುಗಳನ್ನು ಹೇಗೆ ಪಡೆದುಕೊಳ್ಳಬೇಕು? ಹೇಗೆ ಅರ್ಜಿ ಸಲ್ಲಿಸಬೇಕು? ಯಾವ ಕಛೇರಿಯಲ್ಲಿ ಯಾವ ಅಧಿಕಾರಿಯನ್ನು ಕಾಣಬೇಕು? ಎಂಬಂಥ ಪ್ರಾಥಮಿಕ ತಿಳುವಳಿಕೆಯೂ ಇಲ್ಲದ್ದರಿಂದ ಎಷ್ಟೋ ಅವಕಾಶಗಳು ಕೈತಪ್ಪಿ ಹೋಗುತ್ತವೆ!**

ಸವರ್ಣೀಯರ ಎದುರು ಚಪ್ಪಲಿ ಮೆಟ್ಟಿ ನಡೆಯುವಂತಿಲ್ಲ! ಪಂಚೆ ಇಳಿಬಿಟ್ಟುಕೊಳ್ಳುವಂತಿಲ್ಲ. ಈ ಚಪ್ಪಲಿ ಪಂಚೆಯ ವಿಷಯ ಊರ ಪ್ರಮುಖರಿಗೆ ನೀಡುವ ಗೌರವದ ಸಂಕೇತ ಎಂಬುದು ಕೆಲವರ ಅಂಬೋಣ.

ದಲಿತರ ಹಟ್ಟಿ-ಕೇರಿಗಳನ್ನು ಮೂಗು-ಬಾಯಿ ಮುಚ್ಚಿಕೊಂಡೇ ನೋಡಬೇಕು. ಒಂದನ್ನೊಂದು ಒತ್ತಿಕೊಂಡೋ, ಒಂದರಲ್ಲೊಂದು ಸಿಕ್ಕಿಕೊಂಡೋ ಪ್ರಾಣಿಗಳ ಗೂಡುಗಳಂತಿರುವ ಹುಲ್ಲು-ಗರಿಯ ಗುಡಿಸಲುಗಳು! ನಾಲ್ಕು ಗೋಡೆ, ಅವುಗಳ ಮೇಲೆ ಹೆಂಚುಗಳಿದ್ದರೆ ಅದೇ ಮಹಾಭಾಗ್ಯ! ಇವುಗಳ ಮಧ್ಯದ್ದು ಕಾಲುದಾರಿಯೋ ಕೊಚ್ಚೆ ಗುಂಡಿಯೋ ತಿಳಿಯುವುದಿಲ್ಲ. ಶಿಸ್ತು ಶುಚಿತ್ವ ಕಾಣದ ಮಕ್ಕಳು-ಮರಿಗಳು! ಇವುಗಳಿಗೆ ಪ್ರತಿಸ್ಪರ್ಧಿ ಅಥವಾ ಸಂಗಾತಿಗಳಂತಿರುವ ಕೋಳಿ-ನಾಯಿಗಳು! ಈ ಅವಸ್ಥೆಗೆ ಯಾರು ಹೊಣೆ? ಅವರಿಗೆ ಅವರೋ ಅಥವಾ ಸಾಮಾಜಿಕ ವ್ಯವಸ್ಥೆಯೋ? ಶ್ರಮಜೀವಿಗಳಾದ ಇವರಿಗೆ ಮೈತುಂಬ ಬಟ್ಟೆಯೆ! ಹೊಟ್ಟೆ ತುಂಬ ಆಹಾರವೇ! ಸೀಮಿತ ಪ್ರತಿಫಲಕ್ಕಾಗಿ ದಿನವಿಡೀ ಎಳೆಯರು ವೃದ್ಧರಾದಿಯಾಗಿ ಕುಟುಂಬದ ಎಲ್ಲರೂ ಪೀಕಬೇಕು. ಇದು ಹಳ್ಳಿಗಾಡು ದಲಿತರ ಯಥಾ ಚಿತ್ರದ ಒಂದು ತುಣುಕು ಮಾತ್ರ.

ಈ ಜನರಿಗೆ ಬಿಡುವಿನ ಸಮಯವೆಂಬುದೂ ಇರಲಾರದು. ಉಪಕಸುಬುಗಳಾದ ಹಗ್ಗ ಹೊಸೆಯುವುದು, ಚರ್ಮದ ವಸ್ತುಗಳನ್ನು ತಯಾರಿಸುವುದು, ಸವರ್ಣೀಯ ಜಮೀನುದಾರನ ಚಾಕರಿ ಮಾಡುವುದು ಮೊದಲಾದವುಗಳಲ್ಲೇ ಜೀವ ಸವೆಯುತ್ತದೆ. ಈ ಜೀವ ಸವೆತದ ಸ್ಥಿತಿ ಈಗ ಎಲ್ಲಾ ಹಳ್ಳಿಗಳಲ್ಲೂ ಕಂಡು ಬರುವುದಿಲ್ಲವಾದರೂ ಇದು ಬೇರೆ ಬೇರೆ ರೂಪಗಳಲ್ಲಿ ಇರುವುದನ್ನು ಅಲ್ಲಗಳೆಯುವಂತಿಲ್ಲ!

ಹಳ್ಳಿಗಾಡುಗಳ ಜಾತ್ರೆ - ಪರಿಷೆಗಳೆಂದರೆ ಸವರ್ಣೀಯರಿಗಂತೂ ಸಂಭ್ರಮವೋ ಸಂಭ್ರಮ! ಆದರೆ ದಲಿತರ ಪಾಲಿಗೆ ಆ ಭಾಗ್ಯ ಎಲ್ಲಿಯದು! ತಲೆತಲಾಂತರಗಳಿಂದ ಉಳಿದುಬಂದಿರುವ ಅನಿಷ್ಟ ಪದ್ಧತಿಗಳ ಕೊಸರು ಈಗಲೂ ಕಂಡುಬರುತ್ತಿವೆ. ಜಾತ್ರೆ-ಪರಿಷೆಗಳಲ್ಲಿ ಬಲಿಗಾಗಿ ಪ್ರಾಣಿಗಳನ್ನು

## ಎಸ್. ಆರ್. ಗುರುನಾಥ್

ಒದಗಿಸುವ ಸವರ್ಣೀಯರದೇ ಸರ್ವಾಡಳಿತ! ದಲಿತರು ಬಾಯಿ ಮುಚ್ಚಿಕೊಂಡು, ಕೈ ಬಿಚ್ಚಿ, ಊರ ಮುಂದಲ ಕಸ ಗುಡಿಸಬೇಕು; ಗುಡಿ ಗುಂಡಾರಗಳನ್ನು ಶುದ್ಧೀಕರಿಸಿ, ಸುಣ್ಣ ಕೆಮ್ಮಣ್ಣು ಬಳಿಯಬೇಕು; ತಳಿರು ತೋರಣ ಕಟ್ಟಬೇಕು. ನಂತರ ಹುರುಮೆ-ತಪ್ಪಡಿ ಬಡಿದು, ಪಂಜು, ಗ್ಯಾಸ್‌ಲೈಟು ಹಿಡಿಯುವುದು ತಪ್ಪುವುದಿಲ್ಲ. ಈ ಪದ್ಧತಿ ಎಂಥ ಶ್ರಮದಾಯಕ ಶಿಕ್ಷೆ ಎಂಬುದು ಅನುಭವಿಸಿದವರಿಗೆ ಮಾತ್ರ ಗೊತ್ತು! ಇದರೊಂದಿಗೆ ಸವರ್ಣೀಯರ ಮರ್ಜಿಯಿಂದಾಗಿ ಇಷ್ಟ ಇದ್ದರೂ ಇಲ್ಲದಿದ್ದರೂ ಪ್ರಾಣಿಗಳನ್ನು ದೇವರುಗಳಿಗೆ ಬಲಿ ಕೊಡಬೇಕು! ಹಳ್ಳಿಯ ಸುತ್ತಲೂ 'ಸರಗ' ಹಾಕಬೇಕು. ಈ ಬಗ್ಗೆ ಚಕಾರ ಎತ್ತುವಂತಿಲ್ಲ.

ನಗರದ ಹೊರವಲಯದ ದಲಿತರ ಕೇರಿಗಳು ಕ್ರಮೇಣ ನಗರ ಬೆಳೆದಂತೆ ದಲಿತ ಕೇರಿಗಳು ಮಧ್ಯಭಾಗದಲ್ಲಿ ಉಳಿದುಬಿಡುತ್ತವೆ! ಆದರೆ ಹಳ್ಳಿಗಳ ಸ್ಥಿತಿ ಹಾಗಲ್ಲ! ಶತಮಾನಗಳು ಉರುಳಿಹೋದರೂ ಬದಲಾವಣೆ-ಸುಧಾರಣೆಗಳ ಲಕ್ಷಣ ಕಂಡುಬರುವುದಿಲ್ಲ. ಆದುದರಿಂದ 'ಬಿಟ್ಟಿ' ಹಾಗೂ 'ಸರದಿ'ಗಳೆಂಬ ಭೂತದ ಭಯ ಅಳಿಯುವುದಿಲ್ಲ. ಹಳ್ಳಿಯ ಸಾರ್ವಜನಿಕರಿಗೆ ಸಂಬಂಧಿಸಿದ ಕೆಲಸ ಕಾರ್ಯಗಳಿಗೆ ದಲಿತರು ಸರದಿಯ ಪ್ರಕಾರ ತೊಡಗಬೇಕು – ಇದು 'ಸರದಿ'! ಇದಲ್ಲದೆ ಯಾವುದೇ ಸಮಯದಲ್ಲಿ ಯಾವನೇ ಸವರ್ಣೀಯ ಮುಖಂಡ, ಯಾವುದೇ ಸಾರ್ವಜನಿಕ ಕೆಲಸಕ್ಕೆ, ಯಾವನೇ ದಲಿತನನ್ನು ಕೈಮಾಡಿ ಕರೆಯಬಹುದು – ಇದು 'ಬಿಟ್ಟಿ'! ಈ 'ಬಿಟ್ಟಿ' 'ಸರದಿ'ಗಳು ನಗರಗಳಲ್ಲಿ ಕಂಡುಬರುವುದಿಲ್ಲ. ಇದು ಎಲ್ಲಾ ಹಳ್ಳಿಗಾಡುಗಳಲ್ಲಿಲ್ಲವಾದರೂ ಇದ್ದೂ ಇಲ್ಲದಂತೆ

ಈಗಲೂ ಅಲ್ಲಲ್ಲಿ ಅಡಗಿರಬಹುದು, ಯಾರಿಗೆ ಗೊತ್ತು? ಇದಕ್ಕೆಲ್ಲಾ ಕಾರಣ – ದಲಿತರ ಅನಕ್ಷರತೆ, ದಾರಿದ್ರ್ಯ, ಅಸಹಾಯ ಕತೆ, ಅಮಾಯಕತೆ, ಭಯ-ಭೀತಿ ಮೊದಲಾದವುಗಳು. ಆದ್ದರಿಂದ ಈ ದಲಿತರ ಪಾಲಿಗೆ ವೈಯಕ್ತಿಕ ಬದುಕಿಗೆ ಅರ್ಥವೇ ಇಲ್ಲ! ಕುಟುಂಬಕ್ಕೆ ಸಂಬಂಧಿಸಿದ ಎಂತಹ ದುಸ್ಥಿತಿಯಲ್ಲೂ ಜಮೀನುದಾರರ ಕೂಲಿ ಕೆಲಸಗಳಿಗೆ ಬಗ್ಗಲೇಬೇಕು. ಇದಕ್ಕೆಲ್ಲಾ ನಿಗದಿತ ಹಣ ದೊರಕುತ್ತದೆ, ನಿಜ. ಆದರೆ ಅದರ ಹಿನ್ನೆಲೆಯ ದರ್ಪ, ದೌರ್ಜನ್ಯ ಮೊದಲಾದವುಗಳದೇ ಒಂದು ಮುಖವಾದರೆ ಅಸ್ಪೃಶ್ಯತೆ ಎಂಬುದು ಇನ್ನೊಂದು ಭಯಾನಕ ಮುಖ! ಇದರಿಂದ ದಲಿತರ ಸರ್ವಶಕ್ತಿಗಳೂ ಉಡುಗುತ್ತವೆ! ಸ್ವಾಭಿಮಾನ ಆತ್ಮಗೌರವಗಳೂ ಹೇಳಹೆಸರಿಲ್ಲದೆ ಕಮರುತ್ತವೆ! ಹೀಗಾಗಿ ಇವರ ಗಂಟಲ ದನಿಯಲ್ಲಿ ಗಡಸುತನವೂ ದೈಹಿಕ ನಿಲುವಿನಲ್ಲಿ ಸ್ಥಿರತೆಯೂ ಇಲ್ಲವಾಗಿದೆ. ಇಂತಹ ಹಲವಾರು ಕಾರಣಗಳಿಂದ ಗ್ರಾಮೀಣ ಬದುಕೇ ಒಂದು ಅಸಹನೀಯತೆಯ ಪರಮಾವಧಿ!

ಅಸ್ಪೃಶ್ಯತೆಯು ತಲೆತಲಾಂತರಗಳಿಂದ ಬದಲಾವಣೆ – ಅರೆ ಕೊರೆ ಇಲ್ಲದೆ ಸ್ವಯಂಚಾಲಿತ ಯಂತ್ರದಂತೆ ಮುಂದುವರಿಯುತ್ತಲೇ ಬಂದಿದೆ. ಆದುದರಿಂದ ಇದು ದಲಿತರ ಬದುಕಿನಲ್ಲಿ ಒಂದು ಅವಿಭಾಜ್ಯ ಅಂಗವಾಗಿ ಹೊಂದಿಕೊಂಡುಬಿಟ್ಟಿದೆ! ಹಾಗೆಯೇ ಇದೆಲ್ಲಾ ಸಂಪ್ರದಾಯದ ಒಂದು ಅಂಶವೆಂದು ಬಗೆದಿರುವ ಅಮಾಯಕ ಗ್ರಾಮೀಣ ದಲಿತರು ಯಾವುದರ ಬಗ್ಗೆಯೂ ಹೆಚ್ಚು ತಲೆ ಕೆಡಿಸಿಕೊಳ್ಳುವುದಿಲ್ಲ, ಪ್ರಶ್ನೆ ಕೇಳುವುದಿಲ್ಲ. ಇವರ ಬಗ್ಗೆ ಏನಿದ್ದರೂ ಅಕ್ಷರಸ್ಥರು ಅಥವಾ ನಾಗರಿಕ ದಲಿತರು ಕಾರ್ಯಪ್ರವೃತ್ತರಾಗಬೇಕು, ಅಷ್ಟೆ. ಅಲ್ಪ ಪ್ರಮಾಣದ ಸಾಕ್ಷರತೆಯಿಂದಲೋ ಕಾನೂನು ಬೆಂಬಲ ದಿಂದಲೋ ಅಸ್ಪೃಶ್ಯತೆ ಎಂಬುದು ಇತ್ತೀಚೆಗೆ ಸ್ವಲ್ಪ ಬಾಲ ಮುದುರಿಕೊಂಡಿದೆಯಾದರೂ ಪೂರ್ಣ ಪ್ರಮಾಣದಲ್ಲಿ ನಾಶವಾಗಿಲ್ಲ. ಹಳ್ಳಿಗಾಡುಗಳ ಹಿಂದುಳಿದಿರುವಿಕೆ, ಸಂಪರ್ಕ ಮಾಧ್ಯಮಗಳ ಕೊರತೆ ಹಾಗೂ ಸಂಪ್ರದಾಯವಾದಿಗಳ ಸ್ವಾರ್ಥಗಳಿಂದಾಗಿ ಘಟಿಸಿದ ಯಾವ ದುರ್ಘಟನೆಯೂ ಬೇಗನೆ ನಗರಗಳ ಅಥವಾ ಸರಕಾರದ ಗಮನಕ್ಕೆ ಬರುವುದಿಲ್ಲ. ಹೀಗಾಗಿ ಗ್ರಾಮೀಣ ದಲಿತರ ಮೇಲಿನ ದೌರ್ಜನ್ಯ, ಹಲ್ಲೆ, ಅತ್ಯಾಚಾರ ಮೊದಲಾದ ಘಟನೆಗಳು ಸುದ್ದಿಯಾಗದೆ ಅಲ್ಲಲ್ಲೇ ಸದ್ದಡಗುತ್ತವೆ. ಹೇಗೋ ಎಂತೋ ಹಲವು ಪ್ರಕರಣಗಳಲ್ಲಿ ಒಂದೆರಡು ಮಾತ್ರ ಬೆಳಕಿಗೆ ಬರುತ್ತವಲ್ಲ, ಅದೇ ಹೆಚ್ಚು!

ಹಳ್ಳಿಗಾಡು ದಲಿತರ ಅಧೋಗತಿಗೆ ಅವರ ಅನಕ್ಷರತೆ, ದಾರಿದ್ರ್ಯ, ಅಮಾಯಕತೆ, ಅಸಹಾಯಕತೆ, ಸಂಪರ್ಕದ ಕೊರತೆ ಮೊದಲಾದವುಗಳೊಂದಿಗೆ ಮೌಢ್ಯ-ಕಂದಾಚಾರವೂ ಒಂದು ಮುಖ್ಯ ಕಾರಣ. ಹಳ್ಳಿಗಾಡುಗಳ ಮೂಲಭೂತ ವ್ಯವಸ್ಥೆಯಿಂದಾಗಿ ಅವರು ಮೌಢ್ಯವನ್ನು ಬಿಡುವುದಿಲ್ಲ; ಮೌಢ್ಯ ಅವರನ್ನು ಬಿಡುವುದಿಲ್ಲ. ಒಟ್ಟಿನಲ್ಲಿ ಜನಪದ ಸಂಸ್ಕೃತಿಯೇ ಅಷ್ಟು ಪ್ರಬಲವಾದುದೇನೋ! ಇದರಿಂದಾಗಿ ಪರಂಪರಾಗತ ಸಹನಾಶಕ್ತಿ, ಸಹಿಷ್ಣುತಾ ಮನೋಭಾವಗಳಿಂದ ಗ್ರಾಮೀಣ ದಲಿತರು ಜಾನಪದ ಸಂಸ್ಕೃತಿಯ ಹರಿಕಾರರಾಗಿದ್ದಾರೆ. ಸಮೃದ್ಧತೆಯ ನೇತಾರರಾಗಿದ್ದಾರೆ. ಹೀಗಾಗಿ ಮೇಲುವರ್ಗದವರ ಅಥವಾ ಗ್ರಾಮದೇವತೆಯ ಸಂತುಷ್ಟಿಗಾಗಿ ಕುರಿ-ಕೋಣಗಳ ತಲೆ ಕಡಿದು ಮೌಢ್ಯದ ಕ್ರೌರ್ಯಕ್ಕೆ ತಾವೇ ಬಲಿಯಾಗಿದ್ದಾರೆ.

ಸ್ವಾತಂತ್ರ್ಯಾನಂತರದಲ್ಲಿ ದಲಿತರಿಗಾಗಿ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಕೆಲವು ಸವಲತ್ತುಗಳನ್ನು ಕಲ್ಪಿಸಿವೆ. ಆದರೆ ಆ ಸವಲತ್ತುಗಳು ಯಾವುವು? ಅವುಗಳನ್ನು ಹೇಗೆ ಪಡೆದುಕೊಳ್ಳಬೇಕು? ಹೇಗೆ ಅರ್ಜಿ ಸಲ್ಲಿಸಬೇಕು? ಯಾವ ಕಛೇರಿಯಲ್ಲಿ ಯಾವ ಅಧಿಕಾರಿಯನ್ನು ಕಾಣಬೇಕು? ಎಂಬಂಥ ಪ್ರಾಥಮಿಕ ತಿಳುವಳಿಕೆಯೂ ಇಲ್ಲದ್ದರಿಂದ ಎಷ್ಟೋ ಅವಕಾಶಗಳು ಕೈತಪ್ಪಿ ಹೋಗುತ್ತವೆ!

ಆದರೂ ನಿರಂತರವಾಗಿ ಪತ್ರಿಕೆ, ರೇಡಿಯೋ, ಟಿವಿ ಮೊದಲಾದ ಮಾಧ್ಯಮಗಳಲ್ಲಿ ಸವಲತ್ತು-ಮೀಸಲಾತಿಯ ಬಗ್ಗೆ ಅಬ್ಬರದ ಪ್ರಚಾರಗಳಂತೂ ನಿರಂತರ! ಇದರಿಂದ ಕೆಲವರ ಕಣ್ಣುರಿಗೆ ಕಾರಣ ವಾಗುವುದರ ವಿನಃ ಬೇರೇನು ಪ್ರಯೋಜನ? ಅಷ್ಟೋ ಇಷ್ಟೋ ಅವಕಾಶ ದೊರಕುವುದಾದರೆ ಅದು ನಗರದ ಹಾಗೂ ವಿದ್ಯಾವಂತ ದಲಿತರಿಗೆ ಮಾತ್ರ! ಆದ್ದರಿಂದಲೇ ಗ್ರಾಮೀಣ ದಲಿತರ ಏಳಿಗೆ ಎಂಬುದು ಆಮೆ ನಡಿಗೆಗಿಂತಲೂ ನಿಧಾನ!

ಸರಕಾರದ ಸವಲತ್ತುಗಳನ್ನು ಸರಿಯಾದ ರೀತಿ ಯಲ್ಲಿ ಅನುಷ್ಠಾನಗೊಳಿಸಬೇಕಾದರೆ ಸಂಬಂಧಿಸಿದ ಅಧಿಕಾರಿಗಳಾದರೂ ದಲಿತರ ಗಮನ ಸೆಳೆಯುವ ಪ್ರಯತ್ನ ಮಾಡಬೇಕು. ಈ ಪ್ರಯತ್ನಗಳಲ್ಲಿ ಪ್ರಾಮಾಣಿಕತೆ - ಇಚ್ಛಾಶಕ್ತಿಗಳೂ ಇಲ್ಲವಾದರೆ ಏನು ಪ್ರಯೋಜನ? ಒಟ್ಟಾರೆ ಗ್ರಾಮೀಣ ದಲಿತರಿಗೆ ಸೂಕ್ತವಾದ ವಿವರ-ಸಹಕಾರಗಳ ಕೊರತೆಯೇ ಎಲ್ಲಾ ಸೋಲುಗಳಿಗೂ ಮೂಲಕಾರಣ ಎನ್ನಬಹುದು. ಹಳ್ಳಿ ಅಥವಾ ಗ್ರಾಮಗಳು ಹೆಸರಿಗೆ ತಕ್ಕಂತೆ ಹಳ್ಳಿಗಾಡುಗಳೇ! ಸಮಾಜ ಸುಧಾರಣೆಯ ಹಂತದಲ್ಲಿ ಗ್ರಾಮೀಣ ದಲಿತನಿಗೆ ಸೂಕ್ತವಾದ ಅಕ್ಷರ ಕಲಿಕೆಯ ಅವಕಾಶ, ಸರಿಯಾದ ಮಾಹಿತಿ, ಮಾರ್ಗದರ್ಶನ ದೊರಕುವವರೆಗೂ ಸರಕಾರಗಳ ಹಾಗೂ ಸಾಮಾಜಿಕ ಸಂಘಟನೆಗಳ ಪ್ರಯತ್ನ ಫಲಕಾರಿಯಾಗಲಾರವು. ಅಂದ ಹಾಗೆ ದೇಶದ ಅತ್ಯಂತ ಕೆಳಗಿನ ವ್ಯಕ್ತಿಯಾದ ಹಳ್ಳಿಗಾಡು ದಲಿತನ ಏಳಿಗೆಯಾಗುವವರೆಗೂ ಗ್ರಾಮಗಳ ಸುಧಾರಣೆಯಾಗುವುದಿಲ್ಲ; ಗ್ರಾಮಗಳ ಸುಧಾರಣೆಯಾಗುವವರೆಗೂ ದೇಶದ ಬೆಳವಣಿಗೆ ಸಾಧ್ಯವಿಲ್ಲ – ಅಲ್ಲವೆ?


ಎಸ್. ಆರ್. ಗುರುನಾಥ್
೨ನೇ ತಿರುವು, ದರ್ಜಿ ಕಾಲೊನಿ, ಗೋಪಾಲಪುರ ರಸ್ತೆ
ಚಿತ್ರದುರ್ಗ-೫೭೭೫೦೧


## ರಾಜಧಾನಿಯ ಗಾಳಿ

ದಿನದಿಂದ ದಿನಕೊಂದು ಥರಾ ದೆಹಲಿಯ ಗಾಳಿ
ಎಲ್ಲಿಂದಲೋ ಬಂದು ಎಲ್ಲಿಗೋ ಬೀಸುವುದು
ದಾರಿ ತಪ್ಪಿದ ಹಾಗೆ ನಿಂತಲ್ಲೆ ಸುತ್ತುವುದು
ರಾಮಲೀಲಾ ಮೈದಾನದೊಳಗೆಬ್ಬಿಸುತ ಧೂಳಿ!

ಮತ್ತೆ ಧೂಳಿಗೆ ತಾನೆ ಏಣಿಯಾಗುವ ಗಾಳಿ
ಮೇಲೆ ಬಾನಿನ ದಾರಿ ಹಿಡಿದು ಮೇಲೇರುವುದು
ಲೋಕದೃಷ್ಟಿಯನೆಲ್ಲ ತನ್ನೆಡೆಗೆ ಸೆಳೆಯುವುದು
ಸುಯ್ಯುತ್ತಿದ್ದರೂ ನೆಲದೆದೆಯು ಮೌನ ತಾಳಿ!

ದೂರದೂರಕೆ ಹರಿವ ರಾಜಧಾನಿಯ ಗಾಳಿ
ಇಳಿಯಲೊಲ್ಲದ್ದೇಕೊ ಒಳಗಿನವರಾಳಕ್ಕೆ!
ಹೊರಗೆ ಸಲ್ಲುವುದೆಲ್ಲ ಒಳಗೆ ಸಲ್ಲದ ಸರಕೆ?
ಮಾತು ಮಾತಿಗೆ ಇಲ್ಲಿ ಬಟ್ಟಲಲಿ ಬಿರುಗಾಳಿ!

ಅಲೆಅಲೆಗು ಹಬ್ಬುತಿರೆ ಒಬ್ಬರೊಬ್ಬರ ಹರಲಿ
ಕೇಳಬಹುದೇ ಕೊನೆಗೆ ಸಾಮಗಾನದ ಮುರಲಿ?


ಬಿ. ಎ. ಸನದಿ
೧-೩೦೩, ಗೋಕುಲ್ ಹೆವೆನ್
ಠಾಕೂರ್ ಕಾಂಪ್ಲೆಕ್ಸ್, ಕಂಡಿವ್ಲಿ, ಮುಂಬೈ-೪೦೦ ೧೦೧

# ಮನಸ್ಸು, ದೇಹ ಮತ್ತು ಬಯಕೆ

ಪತಿವ್ರತದ ಬಗ್ಗೆ ಮಾತಾಡುತ್ತಿದ್ದಾಗ ಅಹಲ್ಯೆಯ ವಿಚಾರ ಬಂತು. ತನ್ನ ಪತಿಯ ರೂಪ, ವೇಷದಲ್ಲಿದ್ದರೂ ಬಂದಿದ್ದು ಇಂದ್ರ ಎಂದು ಅಹಲ್ಯೆಗೆ ತಿಳಿದಿತ್ತು ಎಂದು ಹೇಳಿದರೆ, ಮಂಗಳಾ ಅಹಲ್ಯೆಯ ಪರವಾಗಿ ನಿಂತು ಅವಳಿಗೆ ತಿಳಿದಿರಲಿಲ್ಲ. ತಿಳಿದಿತ್ತು ಎಂದು ಹೇಗೆ ಹೇಳುತ್ತೀರಿ ? – ಕೇಳಿದಳು. ಹೆಣ್ಣೊಬ್ಬಳು ಗಂಡಿನ ಎದುರು ಹೆಣ್ಣಿನ ಪರ ನಿಲ್ಲುವುದು ಸ್ವಾಭಾವಿಕವಲ್ಲವೇ ?

ಆಗ ಸೀತಾ ಪ್ರಸಂಗವನ್ನೂ ಉದಾಹರಿಸಿದೆ. 'ನನ್ನೊಡನೆ ಲೈಂಗಿಕ ಆಟಕ್ಕೆ ಬಾ' ಎಂದು ರಾವಣ ಕರೆದ. ಕದ್ದೊಯ್ದ. ಆದರೆ ಸೀತೆಯದು ಅಚಲ ಮನಸ್ಸು. ರಾಮನಲ್ಲದೆ ಮತ್ತೊಬ್ಬನನ್ನು ಈ 'ಆಟ'ಕ್ಕೆ ಅವಳು ಬಯಸಿರಲಿಲ್ಲ. ರಾಮಾಯಣವೇ ಹಾಗೆ. ಲಕ್ಷ್ಮಣ, ಹನುಮಂತ, ಸೀತೆ, ಭರತ ಇವರದ್ದೆಲ್ಲ ಅಚಲ ಮನಸ್ಸುಗಳು. ಸ್ವತಃ ರಾಮನದ್ದೂ ಅಚಲ ಮನಸ್ಸು. ಅದೇ ಮಹಾಭಾರತದಲ್ಲಿ ಚಂಚಲ ಮನಸ್ಸುಗಳ ಪಾತ್ರವೇ ಅಧಿಕ.

ಇಲ್ಲಿ ಸೀತೆ ಅಚಲ ಮನಸ್ಸಿನವಳಾದ ಕಾರಣ ಅಗ್ನಿ ಪರೀಕ್ಷೆಯಲ್ಲೂ ಸುಡಲಿಲ್ಲ. ಆದರೆ ಅಹಲ್ಯೆ ಅಚಲ ಮನಸ್ಸಿನವಳಲ್ಲದ ಕಾರಣ ಋಷಿ ಮುನಿಯ ಶಾಪ ತಟ್ಟಿತು. ಕಲ್ಲಾದಳು. ಬಂದವನು ಗಂಡನೇ ಎಂದು ತಿಳಿದಿದ್ದರೆ..... ಅವಳಿಗೆ ಶಾಪವೆಲ್ಲಿ ತಟ್ಟುತ್ತಿತ್ತು ? ಅಥವಾ ಅಚಲ ಮನಸ್ಸಿನವಳೆದುರು ಕೃತ್ರಿಮ ಗಂಡ ಬಂದರೂ ಆಕೆಗೆ ಕೃತ್ರಿಮವನ್ನು ಗುರುತಿಸುವ ಶಕ್ತಿ ಇರುತ್ತಿತ್ತಲ್ಲವೇ ? ಅವಳಿಗೆ ಶಾಪ ತಾಗಿರುವುದೇ ಅವಳು ದೋಷಿ ಎಂದು ಹೇಳುವುದಿಲ್ಲವೇ ? – ಪ್ರಶ್ನಿಸಿದೆ. ಮಂಗಳಾ ನಿರುತ್ತರಳಾದಳು.

ರಾಮಾಯಣ, ಮಹಾಭಾರತ ಬೇರೆ ಬೇರೆ ಕೃತಿಗಳಾದರೂ ನಮ್ಮ ಮನದಲ್ಲಿ ಅವೆರಡೂ ಒಂದೇ ಕೃತಿಯ ಎರಡು ಅಧ್ಯಾಯಗಳಂತೆ ಹೊಯ್ದಾಟವನ್ನು ನಡೆಸುತ್ತಿರುತ್ತವೆ. ರಾಮನಲ್ಲಿ ಅಚಲ ಮನಸ್ಸಿನ ಸೀತೆ, ಸೀತೆಯಲ್ಲಿ ಅಚಲ ಮನಸ್ಸಿನ ರಾಮ, ಲಕ್ಷ್ಮಣ, ಭರತ, ಶತ್ರುಘ್ನರಲ್ಲೂ ಹೆಣ್ಣಿನ ವಿಚಾರಕ್ಕೆ ಹೊಯ್ದಾಟಗಳಿಲ್ಲ. ಆದರೆ ಮಹಾಭಾರತದಲ್ಲಿ ಕೌರವ ದುಶ್ಯಾಸನರನ್ನು ಬಿಡಿ. ನೀತಿವಂತರೆಂದು ಖ್ಯಾತರಾದ ಪಾಂಡವರ ವಿಚಾರವನ್ನೇ ನೋಡಿ. ಈ ಐವರಿಗೆ ಒಬ್ಬ ಹೆಂಡತಿ – ದ್ರೌಪದಿ. ಸರಿ. ಈ ಪಾಂಡವರಿಗೆ ದ್ರೌಪದಿಯೊಬ್ಬಳೇ ಹೆಂಡತಿಯಾ ? ಭೀಮನಿಗೆ ಹಿಡಿಂಬೆ. ಅರ್ಜುನನೋ ಮೂರು ಲೋಕದ ಗಂಡ ! ಬಹುಪತಿತ್ವ, ಬಹುಪತ್ನಿತ್ವ. ಇವರ ಸಂಸಾರಗಳೆಲ್ಲ ಹೇಗೆ ಸಾಗಿದವೋ ಕೃಷ್ಣನೇ ಬಲ್ಲ! ಸ್ವತಃ ಕೃಷ್ಣನ ಸಂಸಾರ ? ಹೆಂಡಿರೋ ಹದಿನಾರು ಸಾವಿರ ! ರಾಮನ ವ್ಯಕ್ತಿತ್ವ , ಕೃಷ್ಣನ ವ್ಯಕ್ತಿತ್ವ ಅಜಗಜಾಂತರ ! ಗಮನಿಸಿ. ಇಬ್ಬರ ಅವತಾರದ ಮೂಲ ಒಂದೇ. ಒಂದೇ ಮುಖದ ಎರಡು ರೂಪಗಳೇ ? ಇಷ್ಟಾದರೂ ಹೆಣ್ಣು ಗಂಡಿನ ಸಂಬಂಧಗಳಲ್ಲಿ ನೀತಿಯನ್ನು ಕಂಡುಕೊಳ್ಳಲು ಸಾಧ್ಯವೇ ? ಇಬ್ಬರಲ್ಲೂ ಮಧುರ ಸಂಬಂಧವೇ 'ನೀತಿ' ಇರಬಹುದೇ ?

ಅಹಲ್ಯೆಯ ಮನಸ್ಸಲ್ಲಿ ಹೊಯ್ದಾಟಗಳಿದ್ದಂತೆ, ದ್ರೌಪದಿಯ ಮನಸ್ಸಲ್ಲಿ ಹೊಯ್ದಾಟಗಳಿದ್ದಂತೆ (ದ್ರೌಪದಿಯ ಮನದಲ್ಲಿ ಐವರಲ್ಲದೇ ಕರ್ಣನಲ್ಲಿ ಒಲವಿತ್ತು ಎಂದು ಕೆಲವು ಕವಿಗಳು ಕಲ್ಪಿಸಿದ್ದಾರೆ) ಭೀಮ, ಅರ್ಜುನರಿಗೆ ಹೊಯ್ದಾಟಗಳಿದ್ದಂತೆ ಹೆಣ್ಣು ಗಂಡಿನ ನಡುವೆ ಹೊಯ್ದಾಟಗಳು ಯಾರನ್ನು ಬಿಟ್ಟಿಲ್ಲ ?

ಬೆಂಗಳೂರಿಗೆ ಹೊರಟಾಗ – ತಲುಪುವ ಸ್ಥಳವನ್ನು ಸುರಕ್ಷಿತವಾಗಿ ತಲುಪಬೇಕು ಅಂದುಕೊಂಡರೂ 'ಸುರಕ್ಷಿತವಾಗಿ' ಅನ್ನುವಲ್ಲೇ ಅಪಘಾತ ಆದರೆ.... ಎಂಬ ಕೆಡುಕನ್ನೂ ಅಥವಾ ಎಚ್ಚರವನ್ನೂ ಮತ್ತೊಂದು ಬದಿಯಿಂದ ಅದೇ ಮನಸ್ಸು ಹೇಳುತ್ತಿರುತ್ತದೆ ಅಲ್ಲವೇ ?



ಇದಕ್ಕೇ ಹೇಳಿದೆ. ರಾಮಾಯಣವೊಂದೇ ಇದ್ದಿದ್ದರೆ ನಮ್ಮ ಮಹಾಗ್ರಂಥ ಪೂರ್ಣವಾಗುತ್ತಿರಲಿಲ್ಲ. ರಾಮಾಯಣಕ್ಕೆ ತದ್ವಿರುದ್ಧ ಯೋಚನೆಗಳುಳ್ಳ ಮಹಾಭಾರತ ಎರಡೂ ಸೇರಿ ನಮಗೆ ಒಂದು ಮಹಾಗ್ರಂಥ.

ಬೈಬಲ್ಲಿನಲ್ಲಿ ಯೇಸು-ಜುದಾಸ ಇದ್ದಂತೆ !

ಸೀತೆ ಮತ್ತು ಅಹಲ್ಯೆ ಇಬ್ಬರೂ ಸೇರಿ ಒಂದು ಮನಸ್ಸಿದ್ದಂತೆ. ಸೀತೆಯಂತೆ ಮನಸ್ಸಿರಬೇಕು ನಿಜ. ಆದರೆ ಈ ಮನಸ್ಸನ್ನು ಹೊತ್ತ ದೇಹ ಇದೆಯಲ್ಲಾ ? ಈ ದೇಹದ ಬಯಕೆಗಳು ಮನಸ್ಸಿನಾಳಕ್ಕಿಳಿದು ಪೂರೈಸು ಅನ್ನುತ್ತದಾ ? ಅಥವಾ ಮನಸ್ಸಿನಾಳದಲ್ಲೇ ದೇಹದ ಬಯಕೆಗಳು ಹುಟ್ಟುತ್ತದಾ ?

ಬಂದಗದ್ದೆ ರಾಧಾಕೃಷ್ಣ
ಕೆಳದಿ - ೫೭೭೪೦೧, ಸಾಗರ, ಶಿವಮೊಗ್ಗ ಜಿಲ್ಲೆ

# ಭಾವಚಿತ್ರ



ದಿನವೂ ಸಂತೆ ನಡೆಸುವ ನಗರದಿಂದ ಆ ಊರಿಗೆ ಒಬ್ಬನೇ ಹೋಗುತ್ತಿದ್ದಾಗ ವಾರಕ್ಕೊಮ್ಮೆ ಅಲ್ಲಿ ಬುಧವಾರ ನಡೆವ ಸಂತೆ ನೋಡುವ ಅವಕಾಶ ದೊರಕಿತ್ತು. ಯಾರೂ ಹೆಸರು ಹಿಡಿದು ಕರೆಯದ, ವಿಳಾಸ ಕೇಳದ ಹಾಗೂ ಪ್ರಾಮುಖ್ಯವಾಗಿ ನೋಡದ ಪರಕೀಯತೆ ಒದಗಿ ಒಂದು ತರಹ ಅನಾಮತ್ ತಪ್ಪಿಸಿಕೊಂಡು ಬಂದಂತಹ ನಿರಾಳ ಅನುಭವ. ಹೀಗೆ ರಸ್ತೆ ಸುತ್ತುತ್ತಾ ಸಂತೆ ಬೀದಿಗೆ ಬಂದಾಗ ಅಲ್ಲಿ ಹಾಕಿದ್ದ ಪುಟ್ಟ ಡೇರೆಯೊಳಗೆ ಫೋಟೊ ತೆಗೆದು, ಆಗಲೇ ಕೊಡುವ ಅಂಗಡಿ ಇತ್ತು. ತರಾವರಿ ಬಣ್ಣದ ಸೀನರಿಗಳು, ಮರದ ಕುದುರೆ, ಮೋಟಾರು ಬೈಕು ಇದ್ದವು. ಬಣ್ಣ ಬಣ್ಣದ ದಿರಸುಗಳು ಪಕ್ಕದಲ್ಲಿ ಇತ್ತು. ಕೆಲವರು ಹಳೆಯ ಕಾಲದ ರಾಜರ ಡ್ರೆಸ್ಸನ್ನು ಹಾಕಿಕೊಂಡು ಕುದುರೆ ಮೇಲೆ ಕೂತು ಫೋಟೋ ತೆಗೆಸಿಕೊಳ್ಳುತ್ತಿದ್ದರೆ, ಇನ್ನು ಕೆಲವರು ಕೂಲಿಂಗ್ ಗ್ಲಾಸು, ತಲೆಗೆ ಹೆಲ್ಮೆಟ್ಟು ಹಾಕಿಕೊಂಡು ಬೈಕ್ ಮೇಲೆ ಹೊರಟಂತಹ ಫೋಟೋ ತೆಗೆಸಿಕೊಳ್ಳುತ್ತಿದ್ದರು. ಹಳ್ಳಿಯಿಂದ ಬಂದಿದ್ದ ಕೆಲವು ನವದಂಪತಿಗಳು ಸೀನರಿ ಮುಂದೆ ಕೈ ಕೈ ಹಿಡಿದು ನಿಂತು ಫೋಟೋ ತೆಗೆಸಿಕೊಳ್ಳುತ್ತಿದ್ದರು. ಕೆಲವರು ಸಿನಿಮಾ ನಟರ ಚಿತ್ರದ ಪಕ್ಕ ನಿಂತು ಫೋಟೋ ತೆಗೆಸಿಕೊಳ್ಳುತ್ತಿದ್ದರು. ಕುತೂಹಲದಿಂದ ಕಡ್ಲೆಕಾಯಿ ತಿನ್ನುತ್ತಾ ನೋಡುತ್ತಿದ್ದಾಗ ''ಸಾರ್. ನಿಮ್ಮದೊಂದು ರಾಜಾ ಫೋಟೋ ತೆಗೆಯಲ ? ನಿಮಗೆ ಚೆನ್ನಾಗಿ ಒಪ್ಪುತ್ತೆ'' ಎಂದ ಅಂಗಡಿಯವ. ಅಕ್ಕ-ಪಕ್ಕ ಗುರುತಿನವರ್ಯಾರೂ ಇಲ್ಲದ್ದು ಖಚಿತವಾಗಿರುವಾಗ ರಾಜರ ದಿರಿಸು ತೊಟ್ಟು ಕುದುರೆ ಮೇಲೆ ಕೂತು ಫೋಟೋ ತೆಗೆಸಿಕೊಳ್ಳಲು ನಾಚಿಕೆ ಪಡಬೇಕೆ !

ಇಂತಹದೊಂದು ಫೋಟೋವನ್ನು ಹೋಟೆಲ್‌ನ ಬಾಡಿಗೆ ಕೋಣೆಯಲ್ಲಿ ಒಬ್ಬನೇ ನೋಡಿಕೊಂಡು ಜೋಪಾನವಾಗಿ ಡೈರಿಯಲ್ಲಿ ಇಟ್ಟಾಗ ಮನಸ್ಸಿಗೊಂದು ಅವರ್ಣನೀಯ ಆನಂದ ! ಮತದಾರನೆಂದು ತೆಗೆಸಿದ ಫೋಟೋ, ರೇಷನ್ ಕಾರ್ಡಿಗಾಗಿ ಮತ್ತು ಡ್ರೈವಿಂಗ್ ಲೈಸೆನ್ಸ್‌ಗಾಗಿ ಕಂಪ್ಯೂಟರ್ ಮುಂದೆ ಕುಳಿತು ತೆಗೆಸಿಕೊಂಡ ಫೋಟೋಗಳಲ್ಲಿ ಯಾವುದೂ ಇಷ್ಟು ಚೆನ್ನಾಗಿಲ್ಲವೆನಿಸಿತು. ರಾಜಾ ಅಂದರೆ ಥೇಟ್ ರಾಜನೇ !

ಊರಿಗೆ ಬಂದು ಮನೆಯವರೆಲ್ಲ ಮೆಚ್ಚಬಹುದೆಂದು ಈ ರಾಜಾ ಫೋಟೋನ ತೋರಿಸಿದಾಗ, ಇದನ್ನು ಭಾರತದ ವಿವಿಧ ಪ್ರಾಂತ್ಯಗಳನ್ನಾಳಿದ ಅನೇಕ ರಾಜವಂಶರುಗಳಲ್ಲಿ ಯಾವುದೋ ರಾಜನದೆಂದು ಹೇಳಿ ಬೇರೆ ಬೇರೆ ಊರುಗಳಿಗೆ ಆಗಾಗ ಹೋಗುವವರಿಗೆ ಇಂತಹ ಫೋಟೋಗಳು ರಸ್ತೆ ಮಗ್ಗುಲಲ್ಲೇ ಪುಡಿಕಾಸಿಗೆ ಮಾರಾಟಕ್ಕೆ ಸಿಗುವುದು ಸಾಮಾನ್ಯವೆಂಬಂತೆ ಗಮನವಿಟ್ಟು ನೋಡಲೇ ಇಲ್ಲ. ಊಟಿ-ಮನಾಲಿ ಕಡೆ ಪ್ರವಾಸಕ್ಕೆ ಹೋಗಿದ್ದಾಗ ಕುದುರೆ ಮೇಲೆ ಇದೇ ತರಹ ಅವ ಕೊಟ್ಟ ದಿರಿಸು ತೊಟ್ಟು ಫೋಟೋ ತೆಗೆಸಿಕೊಂಡಿದ್ದನ್ನು ಮೆಚ್ಚಿದಂತೆ ಇದನ್ಯಾಕೆ ಮೆಚ್ಚಲಿಲ್ಲವೆಂದು ಕೇಳಿದ್ದಕ್ಕೆ ''ಎಷ್ಟು ದುಡ್ಡು ಕೊಟ್ಟಿರಿ ಈ ಫೋಟೋಗೆ'' ಎಂದು, ದುಂದುವೆಚ್ಚ ಆಗಿದೆ ಎಂದು ಲೆಕ್ಕ ತಪಾಸಣೆ ಆಯಿತು ! ಊಟಿ-ಮನಾಲಿಗಳ ಸಹಜ ದೃಶ್ಯದಲ್ಲಿ ಕುದುರೆ ಮೇಲೆ ಕೂತು ತೆಗೆಸಿಕೊಂಡ ಫೋಟೋ ಮತ್ತು ಈ ನಾಟಕದ ಸೀನರಿಯ ಮುಂದೆ ತೆಗೆಸಿಕೊಂಡ ಚಿತ್ರ ಒಂದೇ ಹೇಗೆ ಆಗುತ್ತೆ ಎಂದು ಗೇಲಿ ಮಾಡಿದ್ದೂ ಆಯಿತು.

''ಇದೆಲ್ಲ ಮಾಡುವ ಬದಲು, ಯಾವುದಾದರೂ ದೇವರ ಫೋಟೋ ಇರುವ ಕ್ಯಾಲೆಂಡರ್‌ನಾದರೂ ತರಬಾರದಾಗಿತ್ತೇ.... ಇತ್ತೀಚೆಗೆ ದೇವರ ಫೋಟೋ ಇರುವ ಕ್ಯಾಲೆಂಡರ್ ಸಿಗುವುದೇ ಇಲ್ಲ'' ಎಂದರು ಅಜ್ಜಿ.

ಅವತ್ತು ಬ್ಯಾಂಕಿಗೆ ಹೋದಾಗ ಹೊಸದಾಗಿ ಬಂದಿದ್ದ ಕ್ಲಾರ್ಕ್ ಒಬ್ಬರು ''ದಯವಿಟ್ಟು... ನಿಮ್ಮ ಇತ್ತೀಚಿನ ಭಾವಚಿತ್ರವನ್ನು ಪಾಸ್ ಬುಕ್ಕಿಗೆ ಅಂಟಿಸಿ ಸಾರ್... ವಿತ್‌ಡ್ರಾಯಲ್ ಸ್ಲಿಪ್‌ನಲ್ಲಿ ಹಣ ಡ್ರಾ ಮಾಡುವಾಗ ಈ ಪಾಸ್‌ಬುಕ್‌ನ ವ್ಯಕ್ತಿ ನೀವೇ ಅಂತಾ ಐಡೆಂಟಿಫೈ ಆಗುತ್ತೆ'' ಎಂದರು. ಇಷ್ಟು ದಿನ ಯಾರೂ ಕೇಳದಿದ್ದುದು ಇವರು ಕೇಳಿದರಲ್ಲ ಎಂದು ಕೋಪ ಮಾಡಿಕೊಂಡಿದ್ದಕ್ಕೆ ''ನಿಮ್ಮ ಒಳಿತಿಗಾಗಿಯೇ ನಾ ಹೇಳಿದ್ದು'' ಎಂದು ತಣ್ಣಗೆ ಹೇಳಿದಾಗ ಸರಿ ಅನ್ನಿಸಿತು. ಮನೆಗೆ ಬಂದು ಯಾವುದಾದರೂ ಹಳೆ ಭಾವಚಿತ್ರ ಇದೆಯೇ ಎಂದು ಹುಡುಕಾಡುತ್ತಿದ್ದಾಗ ''ಕುದುರೆ ಮೇಲೆ ಕೂತು ಫೋಟೋ ತೆಗೆಸಿಕೊಳ್ಳುವ ಬದಲು.... ನಿಮ್ಮ ನಿಜ ಫೋಟೋನೆ ತೆಗೆಸಿಕೊಂಡಿದ್ರೆ ಇವತ್ತು ಉಪಯೋಗಕ್ಕೆ ಬರುತ್ತಿತ್ತು. ಇತ್ತೀಚಿನ ಫೋಟೋ ಬೇಕು ಅಂದಿರುವಾಗ ಹಳೆ ಫೋಟೋ ಹುಡುಕಿ ಏನು ಪ್ರಯೋಜನ'' ಎಂಬ ಕೊಂಕು ನುಡಿ ಕೇಳಬೇಕಾಯ್ತು.

''ಹಳೇ ಬಡಾವಣೆ ಮಂಜುನಾಥ ಚೆನ್ನಾಗಿ ಫೋಟೋ ತೆಗೆಯುತ್ತಾನೆ. ಅಲ್ಲಿಗೆ ಹೋಗಿ'' ಎಂಬ ಸಲಹೆ ಬಂದು ಅಲ್ಲಿಗೆ ಹೋದಾಗ ಫೋಟೋ ಸ್ಟುಡಿಯೋದ ಗೋಡೆ ತುಂಬಾ ಬಣ್ಣ ಬಣ್ಣದ ಹಕ್ಕಿ, ಹಸಿರು ಕಾಡು, ಜಲಪಾತ, ನದಿ, ಸಮುದ್ರ ಹಾಗೂ ಚಲನಚಿತ್ರ ತಾರೆಯರು – ಆಟಗಾರರ ಚಿತ್ರಗಳನ್ನು ನೋಡುವವರಿಗೆ ಖುಷಿ ಆಗುವ ಹಾಗೆ ನೇತುಹಾಕಲಾಗಿತ್ತು. ''ಫೋಟೋ ತೆಗೆಯಬೇಕಾ ಸಾರ್'' ಎಂದ ಅಲ್ಲಿದ್ದ ಹುಡುಗನೊಬ್ಬ.

''ಮಂಜುನಾಥ ಇಲ್ವ....?''

''ಅವರು ವಿಡಿಯೋ ತೆಗೆಯುವುದಕ್ಕೆ ಛತ್ರಕ್ಕೆ ಹೋಗಿದ್ದಾರೆ...''

''ಎಷ್ಟು ಹೊತ್ತಿಗೆ ಬರುತ್ತಾರೆ....?''

**ಕೆ. ರಮೇಶ**

''ಗೊತ್ತಿಲ್ಲ.. ರಾತ್ರಿ ಬಂದರೂ ಬರಬಹುದು....''

''ನಾಳೆ ಸಿಗುತ್ತಾರಾ....?''

''ಸಿಗುತ್ತಾರೆ... ಏನಾಗ್ಬೇಕಾಗಿತ್ತು?''

''ಅವರೇ ಬೇಕಿತ್ತು'' ಎಂದು ಅಲ್ಲಿಂದ ಹೊರಟಾಗ ಹುಡುಗ ಕುತೂಹಲದಿಂದ ನೋಡುತ್ತಾ ಇದ್ದ.

ಈ ಮಂಜುನಾಥ ಬಹಳ ವರುಷದಿಂದ ಫೋಟೋ ಸ್ಟುಡಿಯೋ ಇಟ್ಟಿದ್ದಾನೆ. ಹಳೆಯ ಸ್ನೇಹಿತ. ನೌಕರಿ ಸಿಗುವ ಮೊದಲು ಎಷ್ಟೋ ಸಾರಿ ಇವನ ಸ್ಟುಡಿಯೋದಲ್ಲಿ ಕುಳಿತು ಕಾಲ ಕಳೆಯುವುದಿತ್ತು. ಆಗ ತನ್ನ ಸ್ಟುಡಿಯೋಗೆ ಫೋಟೋಗಾಗಿ ಬಂದವರಿಗೆ ಇವ ತೆಗೆದಿರುವ ಯಾರ್‍ಯಾರದೋ ಫೋಟೋಗಳ ಆಲ್ಬಂನ್ನು ನೋಡಲು ಕೊಡುತ್ತಿದ್ದುದನ್ನು ಕುತೂಹಲದಿಂದ ನೋಡುವುದಿತ್ತು. ಆ ಆಲ್ಬಂನಲ್ಲಿ ಬೇರೆ ಬೇರೆ ಊರಿಗೆ ಹೋಗಿ ತೆಗೆದಿದ್ದ ಪ್ರತಿಷ್ಠಿತ ವ್ಯಕ್ತಿಗಳ ವಿವಿಧ ಭಂಗಿಯ ಭಾವ ಚಿತ್ರಗಳಿರುತ್ತಿತ್ತು. ನೋಡುವವರು ಆಲ್ಬಂನ ಫೋಟೋಗಳನ್ನು ಮೆಚ್ಚಿ ತಲೆದೂಗಿದ್ದು ಕಂಡರೆ ಹುಮ್ಮಸ್ಸು ಬಂದಂತೆ ''ಗಾಂಧೀಜಿಗೆ ಚೆಂದ ಬಂದಿದ್ದು ಅವರ ಕಿವಿಯಿಂದ, ಇಂದಿರಾಗಾಂಧಿಗೆ ವರ್ಚಸ್ಸು ಬಂದಿದ್ದೇ ಅವರ ಮೂಗು ಹಾಗೂ ಮುಂದಲೆಯ ಬಿಳಿ ಕೂದಲಿನಿಂದ, ನೆಹರು ಅಂತ ಕಾಣುವುದೇ ಅವರ ದಿರಿಸಿನಿಂದ, ಚಾಪ್ಲಿನನು ಚೆಂದ ಕಾಣುತ್ತಾನೆ, ಎಂ.ಜಿ.ಆರ್. ಕನ್ನಡಕ ಹಾಕಿದ್ರೇನೆ ಲಕ್ಷಣ, ..ಐನ್‌ಸ್ಟೈನ್ ತಲೆ ಕೆದರಿಕೊಂಡೇ ಇರಬೇಕು, ದಾಡಿ ಬುದ್ಧಿಜೀವಿಯ ಗುರುತು...'' ಎಂದು ಹೀಗೆ ಇನ್ನೂ ಹೇಳುತ್ತಾ ತನ್ನದೇ ವಿಶ್ವವನ್ನು ತೆರೆಯುತ್ತಿದ್ದ. ಮಂಜುನಾಥ - ತುಂಬು ಕೆನ್ನೆಯವರಿಗೆ ಉಬ್ಬು ಹಲ್ಲೇ ಇರಬೇಕು, ಮೂಗು ಮೊಂಡಾದರೇನು, ಕಣ್ಣು ಚಿಕ್ಕದಾದರೇನು ಕನ್ನಡಕ ಗೌರವ ಕೊಡುತ್ತದೆ. ಕೋಲು ಮುಖದವರಿಗೆ ಮೂಗು ಮೊಂಡಾದರೆ ಲಕ್ಷಣ. ಉರುಟು ಮುಖ ಇರುವಾಗ ಪುಟ್ಟ ಬಾಯಿಯೇ ಚೆಂದ. ಅಗಲ ಕಣ್ಣಿನವರಿಗೆ ಮೀಸೆ ಇಲ್ಲದಿದ್ದರೂ ಪರವಾಗಿಲ್ಲ ಹಾಗೂ ವಿಶಾಲ ಕಿವಿಯವರಿಗೆ ಮುಖ ಹೇಗಿದ್ದರೂ ಆಗುತ್ತೆ ಎಂದು ಸಂದರ್ಭಕ್ಕೆ ತಕ್ಕಂತೆ ಏನೇನೋ ಮಾತಾಡುತ್ತಾ ಆತ್ಮವಿಶ್ವಾಸ ಮೂಡಿಸಿ – ಸ್ವಲ್ಪ ಮೇಲೆ ನೋಡಿ, ಒಂದು ಚಣ ನಗಿ, ಹಾಗೂ ಕಣ್ಣು ಮುಚ್ಚಬೇಡಿ ಎಂದು ತನಗಷ್ಟೇ ಆ ಗುಟ್ಟು ಗೊತ್ತಿರುವುದೆಂಬಂತೆ ಓರೆಯಾಗಿ ನಿಂತು ಫೋಟೋ ತೆಗೆಯುವ ವೈಖರಿ ಮನಸ್ಸಿನಲ್ಲಿ ಅಚ್ಚಳಿಯದೆ ಇದೆ.

''ಪೆನ್ಸಿಲ್‌ನಲ್ಲಿ ಚಿತ್ರ ಬಿಡಿಸಬಹುದು. ಪೆನ್ನು ಹಾಳೆ ಇದ್ರೆ ಕಥೆ-ಕವನ ಬರೆದುಬಿಡಬಹುದು. ಆದರೆ, ಫೋಟೋ ತೆಗೆಯೋದು ಅಷ್ಟು ಸುಲಭವಲ್ಲ ಮಾರಾಯ...'' ಎಂದು ಹಗೂರ ಮಾತಾಡಿ ನಕ್ಕು ಜೊತೆಲೇ ಬೈಟೂ ಕಾಫಿ ಕುಡಿಯುತ್ತಿದ್ದ ಇವ ಈಗಾಗಲೇ ಮನೆಯಲ್ಲಿ ನಡೆದಿರುವ ನಾಲ್ಕೈದು ಸಮಾರಂಭಕ್ಕೆ ಫೋಟೋಗ್ರಾಫರ್ ಆಗಿ ಬಂದದ್ದು ಚೆನ್ನಾಗಿ ಫೋಟೋ ತೆಗೆಯುತ್ತಾನೆಂಬ ಹೆಸರು ಮಾಡಿಬಿಟ್ಟಿದ್ದಾನೆ.

ನೌಕರಿ ಸೇರುವ ಮೊದಲು ಒಂದೆರಡು ಸಾರಿ ಭಾವಚಿತ್ರ ತೆಗೆಸಿಕೊಳ್ಳಲು ಹೋಗಿದ್ದಾಗ ಹಿಂದೆ ತೆಗೆದಿದ್ದ ಫೋಟೋನ ನೆಗೆಟಿವ್ ಕಳೆದು ಕೊಂಡಿದ್ದಕ್ಕೆ ಬೈದು ''ಕೂತ್ಕೊ'' ಎಂದು ಎಳೆದು ಕುರ್ಚಿಯಲ್ಲಿ ಕುಳ್ಳಿರಿಸಿ ಕಾಲರ್ ಸರಿ ಮಾಡಿ, ಅಂಗಿ ಜೇಬಿನಲ್ಲಿ ಉಬ್ಬಿಕೊಂಡಿದ್ದ ಪೇಪರನ್ನೆಲ್ಲ ತೆಗೆದು, ತಲೆಯನ್ನು ಒಮ್ಮೆ ಬಾಚಿ ಪುಸಕ್ಕನೆ ಫೋಟೋ ತೆಗೆದು ''ನೀನು ಹೆಣ್ಣಾಗಿ ಹುಟ್ಟಬೇಕಿತ್ತು'' ಎಂದಿದ್ದ. ''ಯಾಕೋ?'' ಎಂದು ಅವಮಾನಿತನಾದಂತೆ ಕೇಳಿದ್ದಕ್ಕೆ ''ಹುಡುಗಿಯರಿಗೆ ತುಟಿದಪ್ಪ ಇದ್ದರೂ ಮೀಸೇ ಇರಲ್ಲ, ಕಣ್ಣಿಗೆ ಕಾಡಿಗೆ ಹಾಕಿದರೆ ನೋಟ ಚೆಂದ ಕಾಣುತ್ತೆ. ಅಗಲ ಹಣೆಗೊಂದು ಪುಟ್ಟ ಬೊಟ್ಟು ಇಟ್ಟರೆ ಸಾಕು, ಮುಖದ ಕುಳಿಯೆಲ್ಲ ಮಾಯ ಆಗುತ್ತೆ. ಅದಕ್ಕೆ ಹುಡುಗಿಯರಿಗೆ ಬೇಗ ಕೆಲಸ ಸಿಗುವುದು'' ಎಂದು ಮಾರ್ಮಿಕವಾಗಿ ಮಾತಾಡಿದ್ದ. ಬೇಸರಪಟ್ಟು ಅವನನ್ನೇ ನೋಡಿದರೆ ''ಈ ಸಾರಿ ಖಂಡಿತಾ ನಿನಗೆ ಕೆಲಸ ಸಿಗುತ್ತೆ, ಹೆದರಬೇಡ'' ಎಂದು ಹೇಳುತ್ತಿದ್ದ.

ಹೀಗೆ ಅನ್ಯೋನ್ಯವಾಗಿಬಿಟ್ಟಿದ್ದ ಮಂಜುನಾಥನನ್ನು ಮತ್ತೆ ಮಾರನೆಯ ದಿನ ಭೇಟಿಯಾಗಲು ಫೋಟೋ ಅಂಗಡಿಗೆ ಹೋದಾಗ ಅದೇ ಹುಡುಗ,

''ಈಗ ತಾನೆ ಹೊರಟರು....'' ಎಂದ.

''ಬರೋದು ಯಾವಾಗ?''

''ಸಿನಿಮಾ ಶೂಟಿಂಗ್‌ಗೆ ಹೋಗಿದ್ದಾರೆ, ಯಾವಾಗ ಬರ್‍ತಾರೆ ಅಂತಾ ಹೇಳಲಿಕ್ಕಾಗಲ್ಲ. ಮೂರ್‍ನಾಲ್ಕು ದಿನ ಆಗಬಹುದು. ಏನಾದರೂ ಹೇಳ್ಬೇಕಾಗಿತ್ತಾ, ನನಗೆ ಹೇಳಿ, ಅವರು ಬಂದಾಗ ಹೇಳ್ತೀನಿ... ಇಲ್ಲದಿದ್ರೆ ಫೋನ್ ಮಾಡಿ'' ಅಂತಾ ಫೋನ್ ನಂಬರ್ ಇದ್ದ ಕಾರ್ಡನ್ನು ಕೊಟ್ಟ. ಏನು ಮಾಡುವುದೆಂದು ಅನುಮಾನಿಸುತ್ತಾ ನಿಂತಾಗ, ''ಅವರ ನೆಂಟರ ಸಾರ್... ಅವರ ಮನೆ ಅಡ್ರೆಸ್ ಕೊಡ್ತೀನಿ ಹೋಗಿ'' ಎಂದ ಹುಡುಗ. ನಿಜ ಹೇಳದಿದ್ದರೆ ಹುಡುಗ ಏನೇನೋ ತಿಳಿದುಕೊಳ್ಳುತ್ತಾನೆಂದು ''ಹಾಗೇನಿಲ್ಲ... ಫೋಟೋ ತೆಗೆಸಿಕೊಳ್ಳಬೇಕಿತ್ತು'' ಎಂದಿದ್ದಕ್ಕೆ, ''ಅಷ್ಟೇನಾ... ನಾ ತೆಗೆಯುತ್ತೀನಿ, ಬನ್ನಿ'' ಎಂದು ವಿಚಿತ್ರ ವ್ಯಕ್ತಿಯನ್ನು ನೋಡುವಂತೆ ಬೆರಗಾಗಿ ನೋಡತೊಡಗಿದ. ಕೇವಲ ಪಾಸ್‌ಪೋರ್ಟ್ ಸೈಜಿನ ಫೋಟೋ ತೆಗೆಸಿಕೊಳ್ಳಲು ಮಂಜುನಾಥನನ್ನು ಕಾಯುವುದು ಸರಿಯಲ್ಲವೆಂದು ಹುಡುಗನ ಕೈಯಲ್ಲಿದ್ದ ಕ್ಯಾಮರಾಕ್ಕೆ ಮುಖ ಕೊಟ್ಟು ಕೂತಿದ್ದಾಯ್ತು. ಮಾರನೆಯ ದಿನ ಫೋಟೋ ಸಹಿತ ಮನೆಗೆ ಬಂದಾಗ ಎಲ್ಲರೂ ಕುತೂಹಲದಿಂದ ನೋಡಿ ''ಮಂಜುನಾಥ ಇರಲಿಲ್ವ'' ಎಂದರು.

ಮಂಜುನಾಥ ಇರದಿದ್ದುದು ಈ ಫೋಟೋ ನೋಡಿ ಹೇಗೆ ಗೊತ್ತಾಯಿತೆಂದು ಬೆರಗಾಗಿ ನೋಡುತ್ತಿರುವಾಗ ಇದ್ದಕ್ಕಿದ್ದಂತೆ ಅದಾವುದೋ ಸಿನಿಮಾಗಳ ನೃತ್ಯದ ದೃಶ್ಯಗಳಲ್ಲಿ ಮಂಜುನಾಥ ಮಾಡಿದ್ದ ಫೋಟೋಗ್ರಾಫನ್ನು ಹೊಗಳುತ್ತಾ ಇತ್ತೀಚೆಗೆ ಮಂಜುನಾಥ ಸ್ಟುಡಿಯೋದಲ್ಲೇ ಇರಲ್ಲ, ಯಾರೋ ಹುಡುಗರು ಫೋಟೋ ತೆಗೆಯುತ್ತಾರೆ ಎಂದು ಹೇಳತೊಡಗಿದರು.

ಮಂಜುನಾಥ ಫೋಟೋ ತೆಗೆದಿದ್ದರೆ ಭಾವಚಿತ್ರ ಇನ್ನು ಹೇಗೆ ಇರುತ್ತಿತ್ತು ಎಂದು ಮನಸ್ಸೆಲ್ಲ ಗೊಂದಲವಾಯಿತು! ಮನೆಗೆ ಬಂದಿದ್ದ ತಂಗಿಯರ ಮಕ್ಕಳು ತಾವು ಸಂಗ್ರಹಿಸಿರುವ ಕ್ರಿಕೆಟ್ ಆಟಗಾರರ ಹಾಗೂ ಸಿನಿಮಾ ನಟರ ಫೋಟೋಗಳನ್ನು ಒಬ್ಬರಿಗೊಬ್ಬರು ತೋರಿಸುತ್ತಾ ಖುಷಿಪಡುತ್ತಿದ್ದರು.

ಮಾರನೆಯ ದಿನ ಟೇಬಲ್ ಮೇಲೆ ಇಟ್ಟಿದ್ದ ಭಾವಚಿತ್ರ ಹಾಗೂ ಅದರ ನೆಗೆಟಿವ್ ಕಾಣದಿದ್ದುದಕ್ಕೆ ಮಕ್ಕಳನ್ನು ಕೇಳಿದಾಗ ''ನಿನ್ನ ಫೋಟೋ ನಮಗ್ಯಾಕೆ ಬೇಕು ಮಾವ'' ಎಂದವು.

''ನಿಮ್ಮ ಫೋಟೋ ಮೇಲೆ ನಿಮಗೆ ನಿಗ ಇರಬೇಕು. ಬೆಳಿಗ್ಗೆ ಕಸ ಗುಡಿಸುವುದಕ್ಕೆ ಬಂದ ಗಂಗಮ್ಮ ಗುಡಿಸಿ ಡಬ್ಬಕ್ಕೆ ಹಾಕಿರಬೇಕು, ಹುಡುಕಿ'' ಎಂಬ ಮಾತು ಕೇಳಬೇಕಾಯಿತು.

ಡಬ್ಬದಲ್ಲಿದ್ದ ತ್ಯಾಜ್ಯ ವಸ್ತುಗಳ ಜೊತೆ ಫೋಟೋ ಹಾಗೂ ಅದರ ನೆಗೆಟಿವ್ ಇದ್ದ ಪೇಪರ್ ಕವರನ್ನು ಹುಡುಕಿ ತೆಗೆದಾಗ ''ಅದನ್ಯಾರು ತಗೋತಾರೊ'' ಎಂಬ ಸಮಾಧಾನಿಸುವ ಮಾತು ಕೇಳಿಬಂತು!

ಕೆ. ರಮೇಶ
ಸಂ. ೯, 'ಅನುಗ್ರಹ', ಅಪ್ಪಣ್ಣ ಬ್ಲಾಕ್, ೩ನೇ 'ಸಿ' ಮುಖ್ಯರಸ್ತೆ, ಎಚ್.ಎಂ.ಟಿ. ಲೇ ಔಟ್
ಆರ್.ಟಿ.ನಗರ, ಬೆಂಗಳೂರು-೩೨

**ಹ**ಬ್ಬ ಹರಿದಿನಗಳಲ್ಲಿ ನೀವು ಎಂದಾದರೂ ಬೆಂಗಳೂರಿನಿಂದ ತುಮಕೂರಿಗೆ ಕ.ರಾ.ರ.ಸಾ.ಸಂ.ಗೆ ಸೇರಿದ ಬಸ್ಸಿನಲ್ಲಿ ಪಯಣ ಮಾಡಿದ್ದಿದೆಯೇ ? ಪಯಣ ಮಾಡಿಲ್ಲವಾದರೆ ಖಂಡಿತವಾಗಿಯೂ ನೀವು ಅನೇಕಾನೇಕ ರೀತಿಯ ಮೋಜುಗಳಿಂದ, ಸಂಕಟಗಳಿಂದ, ಮುಜುಗರಗಳಿಂದ, ನೂತನ-ಅತಿನೂತನ ಅನುಭವಗಳಿಂದ ವಂಚಿತರಾಗಿರುವಿರೆಂದೇ ಅರ್ಥ.

ಮೊನ್ನೆ ಮೊನ್ನೆ, ಮಹರ್ನವಮಿ ದಿನ, ಅದೇ ಆಯುಧ ಪೂಜೆ ಮಾಡ್ತಾರಲ್ಲ ಆ ದಿನ ಹಬ್ಬ ಆದ್ದರಿಂದ ನೂಕು ನುಗ್ಗಲು ಇರಲ್ಲ ಎಂಬ ನಂಬಿಕೆಯಿಂದ ಕಾಂತಿ, ತನ್ನ ಇಬ್ಬರು ಮಕ್ಕಳೊಂದಿಗೆ ಬೆಂಗಳೂರಿನಿಂದ ತುಮಕೂರಿಗೆ ಹೊರಟಳು. ಆಕೆ ಯಾವುದೋ ಒಂದು ಸಮಾರಂಭದಲ್ಲಿ ಪಾಲ್ಗೊಳ್ಳಲು ಪುತ್ತೂರಿನಿಂದ ಬೆಂಗಳೂರಿಗೆ ಬಂದಿದ್ದಳು. ಹಾಗೆಯೇ ತಂಗಿಯನ್ನು ನೋಡಿ ತುಂಬಾ ಸಮಯವಾಗಿದ್ದರಿಂದ, ಅವಳೊಂದಿಗೆ ಎರಡು ದಿನಗಳನ್ನು ಕಳೆಯಲು ತುಮಕೂರಿಗೆ ಹೊರಟಿದ್ದಳು.

ಕರ್ನಾಟಕ ರಾಜ್ಯ ಸರ್ಕಾರದವರು ಇಷ್ಟ ಬಂದಂತೆ ನಡೆಸುತ್ತಿರುವ ಬಸ್ಸು ನಿಲ್ದಾಣದಲ್ಲಿ ಆಕೆ ತುಮಕೂರಿನ ಬಸ್ಸಿಗಾಗಿ ಹುಡುಕಾಟ ನಡೆಸಿದಳು. ಮೀನು ಮಾರು ಕಟ್ಟೆಯಲ್ಲಿ ಸಿಕ್ಕಿಬಿದ್ದ ಬೆಕ್ಕಿನ ಮರಿಯಂತಾಯಿತು ಅವಳ ಪರಿಸ್ಥಿತಿ. ಎಲ್ಲಿ ನೋಡಿದರೂ ಡುರ್.... ಡುರ್.... ಎಂದು ಮುನ್ನುಗ್ಗುವ ಕೆಂಪು ಬಸ್ಸು ಮತ್ತು ನೀಲಿ ಬಸ್ಸುಗಳ ನಿನಾದ. ಆದರೆ ಯಾವ ಬಸ್ಸೂ ಇವಳನ್ನು ಕೊಂಡೊಯ್ಯುವುದಿಲ್ಲವೆಂಬುದು ಮಾತ್ರ ನಿರ್ವಿವಾದ. ಚಿತ್ರದುರ್ಗ, ಶಿವಮೊಗ್ಗಗಳಿಗೆ ಹೋಗುವ ಬಸ್ಸುಗಳ ನಿರ್ವಾಹಕರು ''ಏಯ್ ತುಮ್ಕೂರು ಬಸ್ಸು ಅಲ್ಲಿದೆ, ಹೋಗ್ರಿ'' ಎಂದು ಝಾಡಿಸುತ್ತಾ ತಮ್ಮ ಬಸ್ಸನ್ನು ಏರಲು ಸುತರಾಂ ಬಿಡುತ್ತಿರಲಿಲ್ಲ.

ಫುಟ್‌ಬಾಲ್‌ನಂತೆ ಈಚೆಗೆ ನೆಗೆದ ಕಾಂತಿ ಕಾತುರದಿಂದ ಅತ್ತಿತ್ತ ನೋಡಿದಳು. ಆಗಷ್ಟೇ ತುಮಕೂರಿಗೆ ಹೊರಟ ಎರಡು ಮೂರು ವೇಗದೂತಗಳು ನಿಲ್ದಾಣಕ್ಕೆ ಆಗಮಿಸಿದವು. ಆದರೆ ಯಂತ್ರವನ್ನು ಸ್ಥಗಿತಗೊಳಿಸಲಿಲ್ಲ. ಬೀದಿನಾಯಿಗಳಂತೆ ಗುರ್‌ಗುಟ್ಟುತ್ತಲೇ ಅವುಗಳು ನಿಂತಾಗ, ಪ್ರಯಾಣಿಕರು ಚೀಲ, ಛತ್ರಿ, ಕರ್ಚೀಫು ಇತ್ಯಾದಿಗಳನ್ನು ಕಿಟಕಿಗಳಿಂದ ಒಳಗೆ ಎಸೆಯುತ್ತ ತಮ್ಮ ತಮ್ಮ ಸೀಟುಗಳನ್ನು ಕಾದಿರಿಸಿಕೊಳ್ಳತೊಡಗಿದರು. ಕಾಂತಿಯೂ ತನ್ನ ವ್ಯಾನಿಟಿ ಬ್ಯಾಗಿಗೆ ಕೈಹಾಕಿ, ಕೈಗೆ ಸಿಕ್ಕಿದ ಕರ್ಚೀಫು ಮತ್ತು ನೆಂಟರ ಮನೆಯಲ್ಲಿ ಕೊಟ್ಟಿದ್ದ ರವಿಕೆ ಖಣವನ್ನು ಬಸ್ಸಿನ ಒಂದು ಕಿಟಕಿಯ ಒಳಗೆ ಎಸೆದಳು.

ಕೆಲವು ಬುದ್ಧಿವಂತರು ಚಾಲಕನ ಮನವೊಲಿಸಿ ಅವನ ಬಾಗಿಲಿನಿಂದಲೇ ಒಳನುಗ್ಗಿ ಧನ್ಯರಾದರು. ಪ್ರಯಾಣಿಕರಿಗಾಗಿ ಇರಿಸಿದ್ದ ಏಕೈಕ ಬಾಗಿಲಿನಲ್ಲಿ ನುಗ್ಗಾಟ-ಗುದ್ದಾಟಗಳು ಜೋರಾಗಿ ನಡೆಯುತ್ತಿರಲು, ಕೆಲವರು ಬದಿಯ ಕಿಂಡಿಗಳೊಳಗೇ ಮಕ್ಕಳನ್ನು ತೂರಿಸುವ ಮೂಲಕ ಒಳಗಿನ ಜಾಗವನ್ನು ವಶಕ್ಕೆ ತೆಗೆದುಕೊಳ್ಳತೊಡಗಿದರು. ಹೇಗೋ ಒಳನುಗ್ಗಿದ ಧೀರರು ಸೀಟನ್ನು ಕಾದಿರಿಸಲು ಸ್ಥಾಪಿತವಾಗಿದ್ದ ತರಹಾವರಿ ವಸ್ತುಗಳನ್ನು ಕೆಳಕ್ಕೆ ತಳ್ಳಿ ಆಸೀನರಾದರು. ಹೆಚ್ಚು ಪ್ರಯಾಣ ಮಾಡಿ ಅಭ್ಯಾಸವಿಲ್ಲದ ಕಾಂತಿ ಇದನ್ನೆಲ್ಲ ದಿಗ್ಭ್ರಾಂತಿಯಿಂದ ವೀಕ್ಷಿಸತೊಡಗಿದಳು. ''ಟಿಕೆಟ್ ಕೌಂಟರ್‌ನಲ್ಲಿ ಟಿಕೆಟ್ ಕೊಟ್ಟು, ಟಿಕೆಟ್ ಇದ್ದವರನ್ನು ಮಾತ್ರ ಬಸ್ಸಿಗೆ ಹತ್ತಿಸಿದ್ದರೆ ಇವರ ಗಂಟೇನು ಹೋಗುತ್ತಿತ್ತು ?'' ಎಂದು ಮನದಲ್ಲೇ ಬಯ್ದುಕೊಂಡಳು. ಆಗ ಅಲ್ಲಿದ್ದವರಾರೋ ಒಬ್ಬರು, ''ನೀವು ನುಗ್ರಮ್ಮ, ಹೀಗೇ ನಿಂತಿದ್ರೆ ನಿಂತೇ ಇರಬೇಕು ಅಷ್ಟೇ !'' ಎನ್ನುತ್ತ ಮುನ್ನುಗ್ಗಿದ್ದರು.

ಇದರಿಂದ ಕಾಂತಿಯಲ್ಲಿ ಜೀವಸಂಚಾರವಾದಂತಾಯ್ತು. ಆಕೆ ಗಡಬಡಿಸಿ ನೋಡಿದಾಗ, ಮಗುವನ್ನೇ ಆಯುಧವನ್ನಾಗಿ ಬಳಸಿಕೊಂಡ ಲಲನೆಯೊಬ್ಬಳು ''ಕೈಯಲ್ಲಿ ಮಗು ಇರೋದು ಕಾಣ್ಸಲ್ವಾ ? ಯಾಕೆ ತಳ್ತೀರಾ ?'' ಎನ್ನುತ್ತಾ ಮಗುವನ್ನು ಎತ್ತಿ ಹಿಡಿದು, ಮಗುವಿನಿಂದಲೇ ಎಲ್ಲರನ್ನೂ ತಳ್ಳುತ್ತಾ ಬಸ್ಸನ್ನೇರುವುದು ಕಂಡಿತು. ಕೂಡಲೇ ತನ್ನ ಮಕ್ಕಳಿಗೂ ನುಗ್ಗುವಂತೆ ತಿಳಿಸಿ, ಕಾಂತಿ ಆ ಧೀರ ವನಿತೆಯ ಬೆನ್ನ ಹಿಂದೆಯೇ ಹೋಗಿ ಬಸ್ಸನ್ನು ಏರಿದಳು.

ಆದರೇನು ? ಅಲ್ಲಿ ಅವಳು ಹಾಕಿದ ರವಿಕೆಯ ಖಣವಾಗಲಿ, ಕರವಸ್ತ್ರವಾಗಲಿ ಕಾಣಲಿಲ್ಲ. ಆದ್ದರಿಂದ




ಅಲ್ಲಿಯೇ ಖಾಲಿ ಇದ್ದ ಜೋಡು ಸೀಟಿನಲ್ಲಿ ಆಸೀನಳಾದಳು. ಅಷ್ಟರಲ್ಲಿ ಆಕೆಯೊಂದಿಗೆ ನುಸುಳಿ ಬಂದಿದ್ದ ಸಣ್ಣ ಮಗ ಪುಟ್ಟ ಅವಳ ಪಕ್ಕದ ಸೀಟಲ್ಲಿ ಬಂದು ಕುಳಿತ. ಆದರೆ ದೊಡ್ಡ ಮಗ ಕಿಟ್ಟ, ಕಾಣೆ ! ಅವನ ಬಳಿ ದೊಡ್ಡದೊಂದು ಬ್ಯಾಗು ಬೇರೆ. ಪಾಪ ! ಈ ನುಗ್ಗಾಟದಲ್ಲಿ ಅವನಿಗೆ ಹತ್ತಲು ಆಗದಿದ್ದರೆ ? ಕಾಂತಿಗೆ ಎದೆ 'ಧಸಕ್' ಎಂದಿತು. ಮನದೊಳಗೇ ಸಕಲ ದೇವತೆಗಳಿಗೂ ವಂದಿಸುತ್ತ, ಆತ ಬೇಗನೆ ಮೇಲೇರಲಿ ಎಂದು ಪ್ರಾರ್ಥಿಸಿದಳು. ಆತಂಕ ತಡೆಯಲಾರದೆ ಕಿಟಕಿಯಿಂದ ಬಗ್ಗಿ ನೋಡಿದಳು. ಮಗ ಕಾಣಲಿಲ್ಲ. ಜನಸಾಗರ ಮಾತ್ರ ಕಂಡಿತು.

ಸರಿ, ತಾನು ಇಳಿದು ಮಕ್ಕಳೊಂದಿಗೆ ಸುಮ್ಮನೆ ನೆಂಟರ ಮನೆಗೇ ಹಿಂದಿರುಗಿ ಹೋಗಿಬಿಡಬೇಕು ಎಂದು ಆಲೋಚಿಸಿ ಏಳ ಹೊರಟಳು. ಕಾಲಿನ ಮೇಲಿದ್ದ ಸೂಟ್‌ಕೇಸ್ ಅಲ್ಲಾಡಲು ಬಿಡಲಿಲ್ಲ. ಬಸ್ಸು ಹೊರಟೇಬಿಟ್ಟಿತು. ಕಾಂತಿಯ ಕಂಗಳಿಂದ ಕಣ್ಣೀರ ಧಾರೆ ! ಗಲಭೆಯಲ್ಲಿ ಮಗನನ್ನು ಕಳೆದುಕೊಂಡ ನತದೃಷ್ಟೆ ತಾನಾಗಬೇಕೆ ?

ಪುಟ್ಟನೂ ಕಂಗಾಲಾಗಿ ''ಅಣ್ಣಾ... ಅಣ್ಣಾ....'' ಎಂದು ಕೂಗಿ ಅಳತೊಡಗಿದ. ಒಂದೆರಡು ನಿಮಿಷಗಳಲ್ಲೇ ''ಇಲ್ಲೇ ಇದ್ದೀನೋ, ಅಳಬೇಡ್ವೋ'' ಎಂಬ ಕಿಟ್ಟನ ದನಿ ಹಿಂದಿನಿಂದ ಕೇಳಿಬಂದಾಗ, ಏನೋ ದಿಗ್ವಿಜಯ ಸಾಧಿಸಿದಷ್ಟು ಆನಂದ !

ಹೊಟ್ಟೆ ತುಂಬಿಸಿಕೊಂಡು ಹೊರಟ ಬಸ್ಸಿನಲ್ಲಿ ನಾವೆಲ್ಲರೂ ಇದ್ದೇವಲ್ಲ ಎಂಬುದೊಂದೇ ಸಮಾಧಾನ. ಒಂಟಿ ಕಾಲಲ್ಲಿ ಬಕಪಕ್ಷಿಯಂತೆ ಒಡ್ಡೊಡ್ಡಾಗಿ ನಿಂತು, ಜನರ ಮಧ್ಯೆ ಚಪಾತಿಯಾಗಿದ್ದ ಕಿಟ್ಟನ ಕೈಯಿಂದ ದೊಡ್ಡ ಬ್ಯಾಗನ್ನು ಕಷ್ಟದಲ್ಲಿ ಸ್ವೀಕರಿಸಿ, ಪುಟ್ಟ ತೊಡೆಯ ಮೇಲೆ ಇಟ್ಟುಕೊಂಡ. ಇನ್ನು ತುಮಕೂರಿನವರೆಗೂ ಮಗ ನಿಂತೇ ಇರಬೇಕಲ್ಲ ಎಂಬ ಚಿಂತೆ ಕಾಂತಿಗೆ.

ಅಷ್ಟರಲ್ಲಿ ''ಎದ್ದೇಳ್ರಿ ಮೇಲ್ಕೆ'' ಎಂಬ ಸಿಡಿಲು ದನಿಯೊಂದು ಕಾಂತಿಯತ್ತ ತೂರಿಬಂತು.

ಬೆಚ್ಚಿ ಬಿದ್ದು ತಿರುಗಿ ನೋಡಿದ ಕಾಂತಿಯ ಕಣ್ಣಿಗೆ ಬಿದ್ದದ್ದು ಸನ್ ಟಿ.ವಿ.ಯ 'ಚಿತ್ತಿ' ಧಾರಾವಾಹಿಯ 'ಡೇನಿಯಲ್'ನನ್ನೇ ಹೋಲುವ ವ್ಯಕ್ತಿ. ಕೆಕ್ಕರಿಸಿ ಕಾಂತಿಯನ್ನೇ ದಿಟ್ಟಿಸುತ್ತಾ ಆತ ಪುನಃ ಅಬ್ಬರಿಸಿದ. ''ಎದ್ದೇಳ್ರೀ ಮೇಲ್ಕೆ, ನಾನಲ್ಲಿ ಕರ್ಚೀಫು ಹಾಕಿದ್ದೆ.'' ಸಿಕ್ಕ ಸೀಟನ್ನು ಅಷ್ಟು ಸಲೀಸಾಗಿ ಬಿಟ್ಟು ಕೊಡುವುದುಂಟೆ ? ಕಿರಿಕಿರಿಯಾದರೂ ಕಾಂತಿ ಶಾಂತಚಿತ್ತಳಾಗಿಯೇ ''ಇಲ್ಲಿ ಯಾವ ಕರ್ಚೀಫೂ ಇರಲಿಲ್ಲ'' ಎಂದುತ್ತರಿಸಿದಳು.

ಸತ್ಯವತಿ



''ನಾನೇ ಹಾಕಿದ್ದು, ನನ್ಗೇ ಹೇಳಿಕೊಡ್ತೀರಾ ? ಬಾಯಿ ಮುಚ್ಕೊಂಡು ಏಳ್ರಿ ಮೇಲೆ'' ಪುನಃ ಹಾರಿಬಿದ್ದ.

''ನಾನು ಕರ್ಚೀಫು, ಬ್ಲೌಸ್‌ಪೀಸ್ ಎಲ್ಲ ಹಾಕಿದ್ದೆ. ಅದೇ ಕಾಣ್ತಿಲ್ಲ. ಇನ್ನು ನಿಮ್ಮ ಕರ್ಚೀಫು ನಂಗೇನು ಗೊತ್ತು ?'' ಎಂದು ತನ್ನೆಲ್ಲ ಧೈರ್ಯವನ್ನು ಒಟ್ಟುಗೂಡಿಸಿ ಒದರಿದಳು ಕಾಂತಿ. ಇನ್ನು ಈ 'ಡೇನಿಯಲ್' ಇದು ತನ್ನ ಜಾಗವೆಂದು ಎಬ್ಬಿಸಿದರೆ ಏನಪ್ಪಾ ಗತಿ ಎಂದು ವಿಹ್ವಲಳಾದಳು.

ಒಂದರೆಘಳಿಗೆ ಮೌನ ತಾಳಿದ ಆತ ಪುನಃ ''ನನ್ಗೇ ದಬಾಯಿಸುತ್ತೀರೇನ್ರೀ, ಏಳ್ರೀ ಮೇಲ್ಕೇ'' ಎಂದು ಗುಡುಗಿದ.

ರಕ್ಷಕನಾಗಿ ತಂದೆಯೂ ಇಲ್ಲದ ಇಂಥಾ ಒಂದು ವಿಕಟ ಸಂದರ್ಭದಲ್ಲಿ ಒದಗಿಬಂದ ಘೋರ ಸಂಕಟದಿಂದ ಕಂಗಾಲಾದ ಪುಟ್ಟ, ತಾಯಿಯನ್ನು ಈ ಪಾಪಿಯ ಕೈಯಿಂದ ಪಾರುಗಾಣಿಸುವ ದಾರಿ ತಿಳಿಯದೆ 'ಹೋ' ಎಂದು ಅಳತೊಡಗಿದ.

ಮುಂದುಗಡೆ ಮೂರು ಸೀಟಿನ ಸಾಲಿನಲ್ಲಿ ಕುಳಿತಿದ್ದ ಆ ಡೇನಿಯಲ್‌ನ ಅಣ್ಣ, ಅಲ್ಲಿಂದಲೇ ಕಾಂತಿಯ ಕಡೆಗೆ ತಲೆಯನ್ನು ಹೊರಳಿಸಿ, ''ಬೇಜಾರು ಮಾಡ್ಕೋಬೇಡಿ ತಾಯಿ. ನನ್ ತಮ್ಮಂಗೆ ಮುಂಗೋಪ ಜಾಸ್ತಿ. ನಿಮ್ಮ ರವಿಕೆ ಖಣಾನೇ ಹೋಗಿದೆ ಅಂತೀರಿ; ಇನ್ನು ಇವನ ಕರ್ಚೀಫೇನು ಮಹಾ ?'' ಎಂದು ಸಮಾಧಾನಪಡಿಸಿದ.

''ಏಯ್, ಬ್ರದರ್, ನೀನು ಸುಮ್ಕಿರು. ಅದು ನನ್ ಕರ್ಚೀಫ್'' ಎಂದವನೇ ಪುನಃ ಕಾಂತಿಯತ್ತ ತಿರುಗಿದ ಡೇನಿಯಲ್ ಹಾರಾಡತೊಡಗಿದ. ''ನೀವು ಅದರ ಮೇಲೇ ಕೂತ್ಕೊಂಡು ಇಲ್ಲಾಂತ ರೋಫ್ ಹಾಕ್ತೀರಾ ? ಏಳ್ರೀ ಮೇಲ್ಕೆ, ಎಲ್ಲಾ ತಿಳಿಯುತ್ತೆ.''

ಈಗ ಪುಟ್ಟನಿಗೆ ತಡೆಯಲಾಗಲಿಲ್ಲ. ''ನಮ್ಮಮ್ಮ ನಿಮ್ ಕರ್ಚೀಫ್ ಮೇಲೇನೂ ಕೂತಿಲ್ಲ. ಅಲ್ಲಿ ಏನೂ ಇರಲೇ ಇಲ್ಲ'' ಎಂದು ದಬಾಯಿಸಿದ.

ಸಣ್ಣ ಹುಡುಗ ಎದುರಾಡುವುದನ್ನು ಸಹಿಸದ ಆತ ''ಬಾಯಿ ಮುಚ್ಕೊಂಡು ಬಿದ್ದಿರು. ಇಲ್ಲಾಂದ್ರೆ ಬಾಯಿಮೇಲೇ ಹಾಕ್ಬಿಡ್ತೀನಿ ನೋಡು'' ಎಂದು ಕೈ ಎತ್ತಿದ. ಹುಟ್ಟಿದಾಗಿನಿಂದ ಪೆಟ್ಟೆಂದರೇನೆಂದೇ ಅರಿಯದ ಪುಟ್ಟ, ಯಾವನೋ ಭಯೋತ್ಪಾದಕನ ಕೈಗೆ ಸಿಕ್ಕಿಬಿದ್ದಂತೆ ಗಾಬರಿಯಿಂದ ದೊಡ್ಡ ದೊಡ್ಡ ಕಣ್ಣು ಬಿಟ್ಟುಕೊಂಡು, ಇಡೀ ಬಸ್ಸಿಗೆ ಕೇಳುವಂತೆ ಜೋರಾಗಿ ರೋದಿಸತೊಡಗಿದ.

ಪುಟ್ಟ ಬಾಲಕನ ಕಂಗೆಟ್ಟ ಮುಖ ನೋಡಿ ಯಾಕೋ ಈ ಕೋಪಿಷ್ಟ ಡೇನಿಯಲ್ ಸ್ವಲ್ಪ ತಣ್ಣಗಾದ. ಪುಟ್ಟನ ತಲೆ ಸವರುತ್ತ ''ಇಲ್ ಕಣಪ್ಪ, ಸುಮ್ನಿರಪ್ಪ'' ಎಂದು ಸಂತೈಸತೊಡಗಿದ.

''ಕೂಗೋದು, ಆಮೇಲೆ ಸಮಾಧಾನ ಮಾಡೋದು. ಬಾಯ್ ಮಾಡದೇ ಸುಮ್ನಿರಕ್ಕೆ ಆಗಾಕಿಲ್ವ ನಿಂಗೆ ?'' ಅಣ್ಣ ತಮ್ಮನನ್ನು ತರಾಟೆಗೆ ತೊಗೊಂಡ.

''ಅಣ್ಣೋ, ನನ್ ಕರ್ಚೀಫ್ ಕಣಣ್ಣೋ'' ಎಂದು ಗೋಳಾಡಿದ ಆತ ಕೂಗಾಡುವುದನ್ನು ನಿಲ್ಲಿಸಿದ. ಆದರೆ ಅಪರಾಧಿಯನ್ನು ಇರಿದು ನೋಡುವಂತೆ ಕಾಂತಿಯನ್ನೇ ಬಿಟ್ಟೂ ಬಿಡದೆ ಕ್ರೂರವಾಗಿ ದಿಟ್ಟಿಸತೊಡಗಿದ.

ಈ ರೌಡಿ ದೃಷ್ಟಿಯಿಂದ ಇರುಸು ಮುರುಸುಗೊಂಡ ಆಕೆ ಕತ್ತು ಹೊರಳಿಸಿ ಕಿಟಕಿಯಿಂದ ಹೊರಗೆ ನೋಡುತ್ತಾ ಕುಳಿತುಬಿಟ್ಟಳು. ಆದರೆ ಹೀಗೆ ಗೊಂಬೆ ಹಾಗೆ ಎಷ್ಟು ಹೊತ್ತು ಒಂದೇ ಕಡೆ ನೋಡುತ್ತ ಕುಳಿತಿರುವುದು ? ಕತ್ತು ನೋವಾಗಿ ಇತ್ತ ತಿರುಗಿದರೆ ಸಾಕು ಆಕೆಗೆ ಕುತ್ತು! ''ಕಡೆಗೂ ನನ್ ಕರ್ಚೀಫ್ ಇಲ್ಲದ್ಹಾಗೆ ಮಾಡ್ಬಿಟ್ರಲ್ಲ'' ಎಂಬ ಮೂದಲಿಕೆ - ಅದೂ ಬಸ್ಸಿನಲ್ಲಿ ಇರುವವರಿಗೆಲ್ಲಾ ಕೇಳಿಸುವಂತೆ.

'ಚಿತ್ತಿ'ಯ ಡೇನಿಯಲ್‌ಗೆ ವೃಂದಳ ಗೀಳಾದರೆ, ಬಸ್ಸಿನ ಡೇನಿಯಲ್‌ಗೆ ಕರ್ಚೀಫ್‌ದೇ ಗೀಳು. ಇದೇನಪ್ಪಾ ಗೋಳು ? ಎಂದು ಹಲುಬಿದಳು ಕಾಂತಿ.

ಮೊದಮೊದಲು ಜಾಗಕ್ಕಾಗಿ ಆತ ಹಾಗೆ ಆಡುವನೆಂದು ಭಾವಿಸಿದ್ದ ಕಾಂತಿಗೆ, ಬರುಬರುತ್ತ ಆತ ಕೇವಲ ಕರ್ಚೀಫ್‌ಗಾಗಿ ಹೀಗೆ ತಕರಾರು ಮಾಡುತ್ತಿದ್ದಾನೆಂಬುದು ಅರಿವಿಗೆ ಬರತೊಡಗಿತು. ಮುಂದಿನ ಪ್ರಕರಣದಿಂದ ಅದು ಸ್ಪಷ್ಟವೂ ಆಯಿತು.

ಟಿಕೆಟ್ ನೀಡುತ್ತ ಬರುತ್ತಿದ್ದ ಕಂಡಕ್ಟರ್‌ನ ಬಳಿ ಅಲ್ಲಿಯೇ ಕುಳಿತಿದ್ದ ಕೆಲವರು ಮಳವಳ್ಳಿ ಹಾಗೂ ಬೆಳವಳ್ಳಿಗೆ ಟಿಕೆಟ್ ಕೇಳಿದಾಗ, ''ಊರಿನ್ ಹೆಸ್ರು ನೋಡ್ಕೊಂಡು ಹತ್ತಕ್ಕಾಗಲ್ವಾ ? ಇಳೀರಿ ಕೆಳಕ್ಕೆ. ಅಲ್ಗೋಗೋ ಬಸ್ಸು ಬೇರೇನೇ ಇದೆ. ಇದು ತುಮ್ಕೂರು ಬಸ್ಸು, ಇದಕ್ಕೆ ಯಾಕೆ ಹತ್ಕೊಂಡ್ರಿ ?'' ಎಂದು ವಟಗುಟ್ಟುತ್ತ ಕೆಲವರನ್ನು ಮಲ್ಲೇಶ್ವರಂ ಸ್ಟಾಪ್‌ನಲ್ಲಿ, ಇನ್ನು ಕೆಲವರನ್ನು ಯಶ್ವಂತಪುರದ ಸ್ಟಾಪ್‌ನಲ್ಲಿ ಇಳಿಸಿದ.

''ಇನ್ನೂ ಮಳವಳ್ಳಿ - ಬೆಳವಳ್ಳಿಗಳು ಇರಬೋದು. ಸರಿಯಾಗಿ ನೋಡ್ಕೋಳಪ್ಪ'' ಎಂದು ಪ್ರಯಾಣಿಕರಾರೋ ಸೂಚಿಸಿದರು.

''ಅದೂ ಸರೀನೇ. ಏಯ್ ಯಾರಾದ್ರೂ ಮಳವಳ್ಳಿ - ಬೆಳವಳ್ಳಿಗಳಿದ್ರೆ ಇಲ್ಲೇ ಇಳ್ಕೊಳ್ರೀ'' ಎಂದು ಕಂಡಕ್ಟರ ಕಿರುಚಿಕೊಂಡ. ಅವರನ್ನೆಲ್ಲಾ ಉದುರಿಸಿದ ಮೇಲೆ ಬಸ್ಸು ನಾಗಾಲೋಟದಿಂದ ಮುಂದಕ್ಕೆ ಸಾಗಿತು.

ಮಳವಳ್ಳಿ-ಬೆಳವಳ್ಳಿಗಳ ಸೀಟು ಖಾಲಿಯಾದರೂ, ಅದು ತನ್ನ ಸಮೀಪದಲ್ಲೇ ಇದ್ದರೂ, ಅಲ್ಲಿಗೆ ಹೋಗಿ ಕುಳಿತುಕೊಳ್ಳುವುದು ಬಿಟ್ಟು, ಭಂಡನಂತೆ ನಿಂತಲ್ಲೇ ನಿಂತಿದ್ದ ಡೇನಿಯಲ್. ಸಾಲದ್ದಕ್ಕೆ ಧರ್ಮವ್ಯಾಧನಂತೆ ಸುಡುದೃಷ್ಟಿಯನ್ನು ಬೇರೆ ಬೀರುತ್ತಿದ್ದ.

ಕಂಬದಂತೆ ಅಲ್ಲಿಯೇ ಸ್ಥಾಪಿತನಾಗಿ, ನೇತ್ರಗಳಿಂದ ಅಗ್ನಿಯನ್ನು ವರ್ಷಿಸುತ್ತಿರುವ ಈ ನಕ್ಷತ್ರಿಕನಿಂದ ಪಾರಾಗುವ ಬಗೆಯನ್ನರಿಯದೆ ಕಾಂತಿ 'ಕಿಟಕಿ ಕಾಮಾಕ್ಷಮ್ಮ'ನ ಪೋಸ್ ಕೊಡುತ್ತಾ ಕುಳಿತುಬಿಟ್ಟಳು.

ಆದರೆ ಅಂದು ಶನಿ ತನ್ನ ವಕ್ರದೃಷ್ಟಿಯನ್ನು ಆಕೆಯೆಡೆಗೇ ಬೀರುತ್ತಿದ್ದನೆಂದು ತೋರುತ್ತದೆ. ಇಲ್ಲದಿದ್ದರೆ ಆಗಲೇ ಅವಳ ಮುಂದಿನ ಸೀಟಿನಲ್ಲಿದ್ದವರಿಗೆ ವಾಂತಿ ಬರಬೇಕೆ ? ಅವರು 'ವ್ಯಾಕ್.... ವ್ಯಾಕ್....' ಎಂಬ ಅಪಾಯ ಸೂಚಕ ಶಬ್ದವನ್ನು ಮಾಡುತ್ತಾ ಕಿಟಕಿಯಲ್ಲಿ ತಲೆ ತೂರಿಸತೊಡಗಿದರು. ಮುಂಬರುವ ಅಪಾಯವನ್ನು ಮೊದಲೇ ಮನಗಂಡು ಕಿಟಕಿಯ ಗಾಜನ್ನು ಜಡಿದಳು ಕಾಂತಿ.

ಅವಳು ಮುಖ ತಿರುಗಿಸುವುದನ್ನೇ ಕಾಯುತ್ತಿದ್ದಂತೆ ಆತ ಪುನಃ ''ನನ್ ಕರ್ಚೀಫ್ ಇಲ್ದಂಗೆ ಮಾಡ್ಬಿಟ್ರಲ್ಲ'' ಎಂದು ದೂರಿದಾಗ ಕಾಂತಿಗೆ ತಡೆಯಲಾಗಲಿಲ್ಲ. ತನ್ನ ವ್ಯಾನಿಟಿ ಬ್ಯಾಗಿನಲ್ಲಿದ್ದ ಕಿಟ್ಟನ ಹೊಸಾ ಕರ್ಚೀಫೊಂದನ್ನು ತೆಗೆದು ಅವನಿಗೆ ತೋರಿಸಿದಳು.

''ನೋಡಿ ಇದು ಹೊಸಾ ಕರ್ಚೀಫು. ಇದನ್ನು ನೀವೇ ಇಟ್ಕೊಳ್ಳಿ. ನಿಮ್ ಕರ್ಚೀಫ್ ಯಾವುದೋ ನಂಗೆ ಗೊತ್ತಿಲ್ಲ. ನಂಗದು ಬೇಡವೇ ಬೇಡ. ನಾನೇ ನಿಮ್ ಕರ್ಚೀಫನ್ನು ಕಳೆದುಹಾಕಿದ್ದೇನೆಂದು ನಿಮಗನ್ನಿಸಿದ್ದರೆ ಇದನ್ನು ತೆಗೆದುಕೊಳ್ಳಿ'' ಎಂದು ಪಟಪಟನೆ ನುಡಿದಳು.

''ನಂಗದೆಲ್ಲಾ ಬೇಡ. ಅದು ನನ್ನ ಕರ್ಚೀಫಲ್ಲ''

*(೩೨ನೇ ಪುಟಕ್ಕೆ)*

# ಬಹುರಾಷ್ಟ್ರೀಯ ಕಂಪೆನಿಗಳಿಂದ ಅಪಾಯ

ಅಡ್ಡೂರು ಕೃಷ್ಣರಾವ್

**ನ**ಮ್ಮ ದೇಶದ ವಿಮಾನಯಾನ ಕಂಪೆನಿ ಏರ್-ಇಂಡಿಯಾದಲ್ಲಿ ಬಂಡವಾಳ ಹೂಡುವ ಬಗ್ಗೆ ನಡೆಯುತ್ತಿರುವ ಕಸರತ್ತುಗಳನ್ನು ಗಮನಿಸಿದ್ದೀರಾ ? ಭಾರತ ಸರಕಾರವು ವಿದೇಶಿ ಕಂಪೆನಿಗಳ ಬಂಡವಾಳ ಹೂಡಿಕೆಯನ್ನು ಕೈಚಾಚಿ ಸ್ವಾಗತಿಸುತ್ತಿರುವುದು ನಿಮಗೆ ತಿಳಿದೇ ಇದೆ. ಸರಕಾರದ ಧೋರಣೆಯ ಪ್ರಕಾರ, ವಿದೇಶೀ ಕಂಪೆನಿಗಳು ದೇಶೀಯ ಕಂಪೆನಿಗಳ ಜೊತೆಗೂಡಿ, ಸಹಭಾಗಿತ್ವ ಕಂಪೆನಿ ಸ್ಥಾಪಿಸಿ, ಏರ್-ಇಂಡಿಯಾಕ್ಕಾಗಿ ಬಿಡ್ ಮಾಡಿದ್ದೂ ನಿಮಗೆ ನೆನಪಿರಬೇಕು. ಈ ಬಿಡ್ಡಿಂಗ್ ಸ್ಪರ್ಧೆಯಲ್ಲಿ ಕೊನೆಯ ತನಕ ಉಳಿದದ್ದು ಟಾಟಾ ಮತ್ತು ಸಿಂಗಪೂರ್ ಏರ್‌ಲೈನ್ಸಿನ ಸಹಭಾಗಿತ್ವದ ಕಂಪೆನಿ. ಇತ್ತೀಚೆಗೆ, ಈ ಸಹಭಾಗಿತ್ವದಿಂದ ಸಿಂಗಪೂರ್ ಏರ್‌ಲೈನ್ಸ್ ಹಿಂದೆ ಸರಿದಿದೆ. ಯಾಕೆ ?

ಯಾಕೆಂದರೆ, ಏರ್ - ಇಂಡಿಯಾದ ಈಕ್ವಿಟಿಯಲ್ಲಿ ಕನಿಷ್ಠ ಶೇ. ೪೯ ಪಾಲು ನೀಡುವುದಾದರೆ ಮಾತ್ರ ಸಿಂಗಪೂರ್ ಏರ್‌ಲೈನ್ಸ್ ಅದರಲ್ಲಿ ಹಣ ಹೂಡಲು ಇಷ್ಟಪಡುತ್ತದೆ. ಅಂದರೆ, ಸಿಂಗಪೂರ್ ಏರ್‌ಲೈನ್ಸಿಗೆ ಏರ್ - ಇಂಡಿಯಾದ ಮೇಲೆ ನಿರ್ಣಾಯಕ ಹತೋಟಿ ಬೇಕಾಗಿದೆ. ಇಂತಹ ಇಚ್ಛೆ ನಮ್ಮ ದೇಶದ ನಾಗರಿಕ ವಿಮಾನಯಾನ ಧೋರಣೆಗೆ ವಿರುದ್ಧವಾಗಿದೆ. ಸಿಂಗಪೂರ್ ಏರ್‌ಲೈನ್ಸಿಗೆ ಇದು ಚೆನ್ನಾಗಿ ತಿಳಿದಿದೆ.




ಆದರೂ ಅದು ನಮ್ಮ ದೇಶದ ಧೋರಣೆಯಲ್ಲೇ ಬದಲಾವಣೆ ಬಯಸುತ್ತಿದೆ ! ವಿದೇಶಿ ಹೂಡಿಕೆದಾರ ಕಂಪೆನಿಗಳ ಮತ್ತು ಭಾರತದ ಸಹಭಾಗಿತ್ವ ಕಂಪೆನಿಗಳಲ್ಲಿನ ವಿದೇಶಿ ಸಹಭಾಗಿದಾರರ ವರ್ತನೆಯಲ್ಲಿ ಇತ್ತೀಚೆಗೆ ಕಂಡು ಬರುತ್ತಿರುವ ದರ್ಪವನ್ನು ಈ ಬಯಕೆ ತೋರಿಸಿಕೊಡುತ್ತಿದೆ.

ವಿದೇಶಿ ನೇರ ಬಂಡವಾಳ ಹೂಡಿಕೆಗಾಗಿ ಭಾರತವು ಬಾಗಿಲು ತೆರೆಯುತ್ತಾ ಹೋದಂತೆ ಇಂಥ ದರ್ಪ ಪ್ರಬಲವಾಗುತ್ತಿದೆ. ಹೆಚ್ಚೆಚ್ಚು ಕಂಪೆನಿಗಳು ನಮ್ಮ ದೇಶದೊಳಕ್ಕೆ ನುಗ್ಗುತ್ತಿರುವಂತೆ ಈ ದರ್ಪದ ಪ್ರದರ್ಶನ ಹೆಚ್ಚಾಗುತ್ತಿದೆ. ಇಂಥ ವರ್ತನೆಯ ಹಿಂದಿರುವ ಅವರ ಕರಾಳ ಯೋಚನೆ ಏನೆಂಬುದು ಕ್ರಮೇಣ ಸ್ಪಷ್ಟವಾಗುತ್ತಿದೆ: ವಿದೇಶೀ ಬಂಡವಾಳವಿಲ್ಲದೆ ಭಾರತ ಬದುಕಲಾರದು ಎಂದವರು ಭಾವಿಸುತ್ತಾರೆ.

ವಿದೇಶೀ ಹಣ ಹೂಡಿಕೆ ನಮ್ಮ ದೇಶಕ್ಕೆ ಬೇಕಾಗಿರಬಹುದು. ಆದರೆ ವಿದೇಶೀ ಕಂಪೆನಿಗಳ ಇಂಥ ಒತ್ತಡದ ತಂತ್ರಗಳಿಗೆ ಭಾರತ ಸರಕಾರ ಮಣಿಯಬೇಕೆ ?

**ವಿದೇಶೀ ಕಂಪೆನಿಗಳ ತಂತ್ರ**

ಭಾರತದ ಸಹಭಾಗಿತ್ವ ಕಂಪೆನಿಗಳಲ್ಲಿ ಏನಾಗುತ್ತಿದೆ ಎಂಬುದನ್ನು ಪರಿಶೀಲಿಸಿದರೆ, ವಿದೇಶೀ ಹಣಹೂಡಿಕೆಯ ಕ್ಷೇತ್ರದಲ್ಲಿ ಏನಾಗುತ್ತಿದೆ ಎಂಬುದು ಸ್ಪಷ್ಟವಾಗುತ್ತದೆ.

ಮೋದಿ ಜೆರಾಕ್ಸ್‌ನ ಪ್ರಕರಣ ಗಮನಿಸಿ. ೧೯೮೩ರಲ್ಲಿ ಸ್ಥಾಪಿತವಾದ ಈ ಸಹಭಾಗಿತ್ವ ಕಂಪೆನಿ ಭಾರಿ ಲಾಭದಾಯಕ ಹಾಗೂ ಯಶಸ್ವಿ ಕಂಪೆನಿಯಾಗಿ ಬೆಳೆದುಬಂತು. ಈ ಕಂಪೆನಿಯಿಂದ ಮೋದಿಗಳನ್ನು ಹೊರ ಕಳಿಸಿ, ಇದನ್ನು ತನ್ನದಾಗಿಸಿಕೊಳ್ಳಬೇಕೆಂದು ಅಮೆರಿಕದ ಬಹುರಾಷ್ಟ್ರೀಯ ಕಂಪೆನಿ ಜೆರಾಕ್ಸ್ ಕಾರ್ಪೊರೇಷನ್ ನಿರ್ಧರಿಸಿತು.

ಭಾರತದಲ್ಲಿ ಮೋದಿ ಜೆರಾಕ್ಸ್ ತನ್ನ ಕಾರ್ಯಾಚರಣೆ ಆರಂಭಿಸಿದಾಗ, ಈ ಸಹಭಾಗಿತ್ವ ಕಂಪೆನಿಯಲ್ಲಿ ಮೋದಿಗಳು ಮತ್ತು ಜೆರಾಕ್ಸ್ ಕಾರ್ಪೊರೇಷನ್ ಸಮಾನವಾಗಿ ಶೇ. ೪೦ ಈಕ್ವಿಟಿ ಪಾಲು ಹೊಂದಿದ್ದವು. ಭಾರತದ ಉದ್ದಗಲದಲ್ಲಿ ಮಾರಾಟ ಮತ್ತು ಸೇವಾಜಾಲವನ್ನು ಮೋದಿಗಳು ಒದಗಿಸಿದರು. ನಿಧಾನವಾಗಿ ಮೋದಿ ಜೆರಾಕ್ಸ್ ಎಂಬ ಹೆಸರು ಮಾರುಕಟ್ಟೆಯಲ್ಲಿ ಬೇರೂರಿತು.

ಕ್ರಮೇಣ ನಮ್ಮ ದೇಶದಲ್ಲಿ ನಿರ್ಬಂಧಗಳನ್ನು ಕಿತ್ತುಹಾಕಿದ್ದರಿಂದಾಗಿ ಇಲ್ಲಿನ ಮಾರುಕಟ್ಟೆಯ ವಾತಾವರಣವೇ ಬದಲಾಯಿತು. ಇದೀಗ ಜೆರಾಕ್ಸ್ ಕಾರ್ಪೊರೇಷನ್ನಿಗೆ ಭಾರತದಲ್ಲಿ ತನ್ನ ವ್ಯವಹಾರಕ್ಕೆ ಮೋದಿಗಳು ಅನಗತ್ಯವಾದರು. ಅದು ದೊಡ್ಡ ಗಂಟಿನ ಹಣ ತೆತ್ತು ಮೋದಿ ಜೆರಾಕ್ಸ್ ಕಂಪೆನಿಯಿಂದ ಮೋದಿಗಳನ್ನು ಹೊರಗೆ ಕಳಿಸಿತು.

ಹಲವಾರು ಸಹಭಾಗಿತ್ವ ಕಂಪೆನಿಗಳಲ್ಲಿ ವಿದೇಶೀ ಕಂಪೆನಿಗಳು ಇದೇ ತಂತ್ರ ಬಳಸಿದ್ದನ್ನು ನಾವು ಕಾಣಬಹುದು. ಇಂದು ಭಾರತದಲ್ಲಿ ವಾಹನಗಳ ಉತ್ಪಾದನಾ ಕೈಗಾರಿಕೆಯ ಮಾಲಿಕತ್ವ ಹೆಚ್ಚು ಕಡಿಮೆ ಪೂರ್ತಿಯಾಗಿ ಬಹುರಾಷ್ಟ್ರೀಯ ಕಂಪೆನಿಗಳ ಕೈಯಲ್ಲಿದೆ. ಈ ಎಲ್ಲ ಕಂಪೆನಿಗಳೂ ಯಾವುದಾದರೊಂದು ಭಾರತೀಯ ಕಂಪೆನಿಯ ಸಹಭಾಗಿಯಾಗಿಯೇ ನಮ್ಮ ಮಾರುಕಟ್ಟೆ ಪ್ರವೇಶಿಸಿದ್ದವು. ಆದರೆ ಈಗ ಏನಾಗಿದೆ ?

ಜನರಲ್ ಮೋಟಾರ್ಸ್ ಆಫ್ ಇಂಡಿಯಾದಿಂದ ಹಿಂದುಸ್ತಾನ್ ಮೋಟರ್ಸ್ (ಭಾರತೀಯ ಕಂಪೆನಿ)ನ ಬಿರ್ಲಾರು ಹೊರನಡೆಯಬೇಕಾಯಿತು. ಡಿಸಿಎಂ ಅನ್ನು ಹೊರ ಕಳಿಸುವ ಮೂಲಕ ಡಿಸಿಎಂ - ದೇವೂ ಕಂಪೆನಿಯನ್ನು ಕೊರಿಯದ ದೇವೂ ಕಂಪೆನಿ ತನ್ನದಾಗಿಸಿಕೊಂಡಿತು. ಹೀರೋ-ಹೋಂಡಾ ಸಹಭಾಗಿತ್ವ ಕಂಪೆನಿಯನ್ನು ಭಾರತದ ಹೀರೋ ಗ್ರೂಪ್, ಜಪಾನಿನ ಹೋಂಡಾ ಕಂಪೆನಿಗೆ ಬಿಟ್ಟುಕೊಡಬೇಕಾಯಿತು. ಮಹೀಂದ್ರ-ಫೋರ್ಡ್ ಸಹಭಾಗಿತ್ವ ಕಂಪೆನಿಯಲ್ಲೂ ಇದೇ ಕತೆ – ಇದನ್ನು ಮಹೀಂದ್ರ ಗ್ರೂಪ್ ಅಮೆರಿಕದ ಫೋರ್ಡ್ ಕಂಪೆನಿಗೆ ಒಪ್ಪಿಸಬೇಕಾಯಿತು.

ಈ ಬೆಳವಣಿಗೆಯಿಂದ ನೇರ ಪರಿಣಾಮ ಆಗಿರುವುದು ವಿಮಾ ಕ್ಷೇತ್ರದಲ್ಲಿ. ಇದರಲ್ಲಿ ವಿದೇಶೀ ನೇರ ಬಂಡವಾಳ ಹೂಡಿಕೆಗೆ ಭಾರತ ಸರಕಾರ ಅವಕಾಶ ನೀಡಿದೊಡನೆಯೇ ಭಾರತದ ಸಹಭಾಗಿತ್ವ ವಿಮಾ ಕಂಪೆನಿಗಳು ನೀರಿನ ಗುಳ್ಳೆಗಳಂತೆ ಒಡೆದುಹೋದವು. ಇದೀಗ ವಿದೇಶಿ ಸಹಭಾಗಿ ಕಂಪೆನಿಗಳು ತಮ್ಮದೇ ವಿಮಾ ಕಂಪೆನಿಗಳನ್ನು ಇಲ್ಲಿ ಸ್ಥಾಪಿಸುತ್ತಿವೆ.

ಇದರಿಂದಾಗಿ ಸಹಭಾಗಿತ್ವ ಕಂಪೆನಿಗಳ ಭಾರತೀಯ ಸಹಭಾಗಿಗಳು ಅನಿಶ್ಚಿತತೆಯಲ್ಲೇ ಕಾಲ ಕಳೆಯಬೇಕಾಗಿದೆ. ತಮ್ಮನ್ನು ಯಾವಾಗ ಒದ್ದು ಹೊರಹಾಕಲಾಗುವುದು ಎಂಬುದು ಅವರಿಗೇ ಗೊತ್ತಿಲ್ಲ.

**ವಿದೇಶಿ ಕಂಪೆನಿಗಳ ಒಕ್ಕೂಟದ ಕರಿನೆರಳು**

ಭಾರತದಲ್ಲಿ ತಮ್ಮ ಕಾರುಭಾರು ಬೆಳೆಸಲಿಕ್ಕಾಗಿ ಭಾರತ ಸರಕಾರದ ಮೇಲೆ ಧೋರಣೆಗಳ ಬದಲಾವಣೆಗಾಗಿ ಒತ್ತಡ ಹೇರಬೇಕಾದ ಅಗತ್ಯವನ್ನು ಮನಗಂಡಿರುವ ವಿದೇಶಿ ಕಂಪೆನಿಗಳು ರಾಜಾರೋಷವಾಗಿ ಸಂಘಟಿತವಾಗಲು ಪ್ರಾರಂಭಿಸಿವೆ.

ಇದಕ್ಕೆ ಇತ್ತೀಚೆಗಿನ ನಿದರ್ಶನ ''ಅಮೆರಿಕನ್ ಚೇಂಬರ್ ಆಫ್ ಕಾಮರ್ಸ್ ಇನ್ ಇಂಡಿಯಾ''ದ ಸ್ಥಾಪನೆ. ಇದರ ಪ್ರಥಮ ಸಾರ್ವಜನಿಕ ಕಾರ್ಯಕ್ರಮ ಏನು ಗೊತ್ತೆ? ವಿದೇಶಿ ನೇರ ಬಂಡವಾಳ ಆಕರ್ಷಿಸಲಿಕ್ಕಾಗಿ ಭಾರತ ಏನು ಮಾಡಬೇಕೆಂಬ ಬಗ್ಗೆ ಒಂದು ವರದಿಯ ಬಿಡುಗಡೆ (ಆಗಸ್ಟ್ ೨೦೦೧ರ ಮೊದಲ ವಾರದಲ್ಲಿ). ಭಾರತ ಸರಕಾರವು ತನ್ನ ಧೋರಣೆಗಳನ್ನು ವಿದೇಶೀ ಕಂಪೆನಿಗಳ ಅನುಕೂಲಕ್ಕೆ ತಕ್ಕಂತೆ ಬದಲಾಯಿಸಿದರೆ, ಪ್ರತಿ ವರುಷವೂ ಇಲ್ಲಿ ೨೦ ಬಿಲಿಯನ್ ಡಾಲರ್‌ಗಳ ವಿದೇಶಿ ನೇರ ಬಂಡವಾಳ ಹೂಡಿಕೆ ಸಾಧ್ಯ ಎಂಬುದು ಈ ಚೇಂಬರ್ ಒಡ್ಡಿದ ಆಮಿಷ. ಅದಕ್ಕಾಗಿ ನಮ್ಮ ಸರಕಾರಕ್ಕೆ ಚೇಂಬರಿನ ಉಪದೇಶ ಹೀಗಿದೆ : ವಿವಿಧ ಕ್ಷೇತ್ರಗಳಲ್ಲಿ ವಿದೇಶಿ ಬಂಡವಾಳ ಹೂಡಿಕೆಗೆ ವಿಧಿಸಿರುವ ಗರಿಷ್ಠ ಮಿತಿಯನ್ನು ಕಿತ್ತೊಗೆಯಬೇಕು ಮತ್ತು ಭಾರತದ ಸಾರ್ವಜನಿಕ ರಂಗದ ಉದ್ದಿಮೆ ಘಟಕಗಳಿಂದ ಸರಕಾರದ ಬಂಡವಾಳ ಕ್ಷಿಪ್ರವಾಗಿ ಹಿಂತೆಗೆಯುವಂತಾಗಲು ನಿಯಮಗಳನ್ನೇ ಬದಲಾಯಿಸಬೇಕು (ಅಂದರೆ ಇವನ್ನು ತಟ್ಟೆಯಲ್ಲಿಟ್ಟು ವಿದೇಶಿ ಕಂಪೆನಿಗಳಿಗೆ ಮಾರಬೇಕು ಎಂದರ್ಥ).

ಅಮೆರಿಕನ್ ಚೇಂಬರ್ ಆಫ್ ಕಾಮರ್ಸ್ ಇನ್

ಇಂಡಿಯಾ ಎಂತಹ ಸಂಸ್ಥೆ ಎಂಬ ಪ್ರಶ್ನೆ ಈಗ ಪ್ರಸ್ತುತ. ಇದು ಸುಮಾರು ೩೦೦ ಅಮೆರಿಕನ್ ಕಂಪೆನಿಗಳ ಒಕ್ಕೂಟ. ಭಾರತದ ಅಥವಾ ಇತರ ದೇಶಗಳ ಯಾವುದೇ ಕಂಪೆನಿ ಈ ಒಕ್ಕೂಟದ ಸದಸ್ಯ ಆಗುವಂತಿಲ್ಲ. ಮುಂಚೆ ಅಮೆರಿಕನ್ ಬಿಸಿನೆಸ್ ಕೌನ್ಸಿಲ್ (ಎಬಿಸಿ) ಎಂಬ ಹೆಸರಿನಿಂದ ಕಾರ್ಯಾಚರಣೆ ನಡೆಸುತ್ತಿದ್ದ ಇದು ಭಾರತದಲ್ಲಿರುವ ಅಮೆರಿಕನ್ ದೂತವಾಸದ ಕೂಸು ಎಂಬುದು ಸ್ಪಷ್ಟ. ಇದರ ಕಚೇರಿ ಇರುವುದೇ ದೆಹಲಿಯ ಅಮೆರಿಕನ್ ಸೆಂಟರಿನಲ್ಲಿ. ಈ ಒಕ್ಕೂಟದ ಹಿತರಕ್ಷಣೆ ಅಮೆರಿಕನ್ ಹಿತಾಸಕ್ತಿಗೆ ಎಷ್ಟು ಮುಖ್ಯ ಎಂಬುದನ್ನು ೨೦೦೦ನೇ ಇಸವಿಯ ಒಂದು ಘಟನೆಯಿಂದ ನಾವು ತಿಳಿದುಕೊಳ್ಳಬಹುದು. ಆಗಿನ ಅಧ್ಯಕ್ಷ ಕ್ಲಿಂಟನ್ ಭಾರತಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಅಮೆರಿಕನ್ ರಾಯಭಾರಿಯ ಮನೆಯಲ್ಲಿ ಏರ್ಪಡಿಸಲಾದ ಕ್ಲಿಂಟನ್ ಅವರೊಂದಿಗಿನ ವಿಶೇಷ ಉಪಾಹಾರಕ್ಕೆ ಈ ಒಕ್ಕೂಟದ ಅಧ್ಯಕ್ಷ ಮತ್ತು ಆಡಳಿತ ನಿರ್ದೇಶಕರನ್ನು ಆಮಂತ್ರಿಸಲಾಗಿತ್ತು.

ಇಂಥ ಬೆಳವಣಿಗೆಗಳಿಂದಾಗಿ ಅಮೆರಿಕನ್ ಚೇಂಬರ್ ಆಫ್ ಕಾಮರ್ಸ್ ಇನ್ ಇಂಡಿಯಾಕ್ಕೆ ತನ್ನ ವ್ಯಾಪಾರಿ ಹಿತಾಸಕ್ತಿ ರಕ್ಷಣೆಗಾಗಿ ಲಾಬಿ ನಡೆಸಲು ಸಾಧ್ಯವಾಗುತ್ತದೆ. ಆ ಮೂಲಕ ನಮ್ಮ ದೇಶದ ಧೋರಣೆಗಳ ಬದಲಾವಣೆ ಗಾಗಿ ಒತ್ತಡ ಹೇರಲಿಕ್ಕೂ ಅನುಕೂಲವಾಗುತ್ತದೆ.

**ಮುಂದೇನು ?**

ವಿದೇಶಿ ನೇರ ಬಂಡವಾಳದ ಆರ್ಥಿಕ ಪರಿಣಾಮ ಏನು ? ಭಾರತದಲ್ಲಿ ಕೈಗಾರಿಕಾ ಅಭಿವೃದ್ಧಿಗಾಗಿ ವಿದೇಶಿ ಮೂಲದಿಂದ ಸಾಲ ಪಡೆದರೆ ಅದಕ್ಕೆ ಶೇ. ೬ರಿಂದ ಶೇ. ೧೬ರ ತನಕ ವಾರ್ಷಿಕ ಬಡ್ಡಿ ನೀಡಬೇಕಾದೀತು. ಅದರ ಬದಲಾಗಿ, ಭಾರತದಲ್ಲಿ ವಿದೇಶಿ ನೇರ ಬಂಡವಾಳ ಹೂಡಿಕೆಗೆ ಅವಕಾಶ ನೀಡಿದರೆ, ಆ ಹೂಡಿಕೆದಾರ ಕಂಪೆನಿಗಳು ಇಲ್ಲಿನ ವ್ಯವಹಾರದಿಂದ ಗಳಿಸುವ ಶೇ. ೪೦ಕ್ಕೂ ಮಿಕ್ಕಿದ ಲಾಭವನ್ನೆಲ್ಲ ವಿದೇಶಗಳಿಗೆ ಒಯ್ಯಲು ಸಾಧ್ಯವಾಗುತ್ತದೆ. ಅಂದರೆ, ನಮ್ಮದೇ ಜನರ ಪಾವತಿಗಳಿಂದ ಹುಟ್ಟಿ ಬಂದ ಬೃಹತ್ ಲಾಭದ ಹಣ ಇಲ್ಲೇ ಉಳಿದು, ನಮ್ಮ ದೇಶದ ಪ್ರಗತಿಗೆ ಪೂರಕವಾಗುವ ಬದಲು ವಿದೇಶಗಳಿಗೆ ಹರಿದು ಹೋಗುತ್ತದೆ. ಇಂದು ಕೋಕಾಕೋಲಾ, ಪೆಪ್ಸಿ, ಕಾಲ್ಗೇಟ್, ಬೇಯರ್ಸ್ ಇತ್ಯಾದಿ ಕಂಪೆನಿಗಳು ಇಲ್ಲಿ ಗಳಿಸುತ್ತಿರುವ ಕೋಟಿಗಟ್ಟಲೆ ರೂಪಾಯಿ ಲಾಭದ ಹಣ ಹೀಗೇ ಹರಿದುಹೋಗುತ್ತಿದೆ.

ಇದಕ್ಕಿಂತಲೂ ಪ್ರಧಾನವಾದದ್ದು ನಮ್ಮ ದೇಶದ ಸಾರ್ವಭೌಮತ್ವದ ಪ್ರಶ್ನೆ. ದಿನ ಸರಿದಂತೆ ವಿದೇಶಿ ಹಾಗೂ ಬಹುರಾಷ್ಟ್ರೀಯ ಕಂಪೆನಿಗಳು ಇಲ್ಲಿ ತಮ್ಮ ವ್ಯವಹಾರ ಹೆಚ್ಚಿಸುತ್ತ ಪ್ರಬಲವಾಗುತ್ತವೆ. ಅವು ತಮ್ಮ ಪ್ರಭಾವವಲಯವನ್ನು ವಿಸ್ತರಿಸುತ್ತ ಸಾಗಿದಂತೆ ತಮ್ಮ ಲಾಭಕ್ಕಾಗಿ ನಮ್ಮ ಸರಕಾರದ ಮೇಲೆ ತೀವ್ರ ಒತ್ತಡ ಹೇರಲು ಮುಂದಾಗುತ್ತವೆ.

ಭಾರತ ಸರಕಾರ ಇಂಥ ಪರಿಸ್ಥಿತಿಯನ್ನು ಹೇಗೆ ಎದುರಿಸುತ್ತದೆ ಎಂಬುದು ಈಗಿನ ಪ್ರಶ್ನೆ. ಚೀನಾ ದೇಶ ಇಂಥ ಒತ್ತಡಗಳಿಗೆ ಮಣಿದಿಲ್ಲ. ಮಿಲಿಯಗಟ್ಟಲೆ ಡಾಲರ್ ವಿದೇಶಿ ನೇರ ಬಂಡವಾಳದ ಮಹಾಪೂರ ದೇಶದೊಳಕ್ಕೆ ಹರಿದುಬಂದ ಬಳಿಕವೂ ಚೀನಾದ ಸರಕಾರ ತನ್ನ ಧೋರಣೆಗಳ ಮೇಲಿನ ನಿಯಂತ್ರಣವನ್ನು ಸಾರ್ವಭೌಮತ್ವ ವನ್ನು ಕಟ್ಟುನಿಟ್ಟಾಗಿ ಉಳಿಸಿಕೊಂಡಿದೆ. ಬಹುರಾಷ್ಟ್ರೀಯ ಕಂಪೆನಿಗಳ ಬಂಡವಾಳವನ್ನು ಸ್ವೀಕರಿಸಿದರೂ ಅವುಗಳ ದರ್ಪವನ್ನು ನಿರಾಕರಿಸಲು ಸಾಧ್ಯ ಎಂಬುದನ್ನು ಚೀನಾ ಇತರ ದೇಶಗಳಿಗೆ ನಿಚ್ಚಳವಾಗಿ ತೋರಿಸಿಕೊಟ್ಟಿದೆ.

ವಿದೇಶಿ ನೇರ ಬಂಡವಾಳ ಹೂಡಿಕೆಗಾಗಿ ಬಾಗಿಲು ಗಳನ್ನು ತೆರೆದಿಟ್ಟಿರುವ ಭಾರತ ಸರಕಾರವೂ ತನ್ನ ಜನಪರ ಧೋರಣೆಗಳನ್ನು ಬದಲಾಯಿಸಬೇಕೆಂದು ಬಹುರಾಷ್ಟ್ರೀಯ ಕಂಪೆನಿಗಳು ಹೇರುವ ಒತ್ತಡವನ್ನು ಸಮರ್ಥವಾಗಿ ಎದುರಿಸಬೇಕಾಗಿದೆ – ನಮ್ಮ ದೇಶದ ನೂರು ಕೋಟಿ ಮಿಕ್ಕಿದ ಪ್ರಜೆಗಳ ಭವಿಷ್ಯ ಸುಭದ್ರವಾಗಿಸಲಿಕ್ಕಾಗಿ.

**ಅಡ್ಡೂರು ಕೃಷ್ಣರಾವ್**
ಮೆನೇಜರ್, ಕಾರ್ಪೊರೇಷನ್ ಬ್ಯಾಂಕ್, ಚಿಕ್ಕಮಗಳೂರು-೫೭೭೧೦೧

---

*(೩೦ನೇ ಪುಟದಿಂದ)*

ಆತ ನಿರಾಕರಿಸಿದ.

''ಹಾಗಾದರೆ ಕಳೆದುಹೋದ ಕರ್ಚೀಫಿನ ಬದಲಿಗೆ ಹೊಸಾ ಕರ್ಚೀಫ್ ತೆಗೆದುಕೊಳ್ಳಿ'' ಎಂದು ಒತ್ತಾಯಿಸುತ್ತಾ ಎರಡು ಹತ್ತರ ನೋಟುಗಳನ್ನು ಆತನಿಗೆ ನೀಡಿದಳು.

''ಅದೆಲ್ಲ ನಂಗೆ ಬೇಡ. ನಂಗೆ ನನ್ನ ಕರ್ಚೀಫೇ ಬೇಕು'' ಆತ ಮಕ್ಕಳಂತೆ ಹಟ ಹಿಡಿದ.

ಕಾಂತಿ ತಲೆಯ ಮೇಲೆ ಕೈಹೊತ್ತು ಕಣ್ಮುಚ್ಚಿ ಕುಳಿತಳು. ಕಣ್ಣು ಬಿಟ್ಟರೆ ಸಾಕು, ''ನನ್ ಕರ್ಚೀಫು'' ಎಂಬ ರಾಗ ಕಿವಿಗೆ ಬೀಳುತ್ತಿತ್ತು.

ಒಂದು ಕರವಸ್ತ್ರದ ಬಗ್ಗೆ ಇಷ್ಟು ಭಾವುಕನಾಗ ಬೇಕಾದರೆ, ಅದೇನು ಅವನ ಪ್ರೇಯಸಿ ಕೊಟ್ಟಿದ್ದೋ ಎಂದು ಕಾಂತಿಗೆ ಅನುಮಾನವಾಯ್ತು. ಆದರೆ ಆತನ ನಡೆವಳಿಕೆ ಮಕ್ಕಳಂತಿದ್ದು, ಇಂಥವನಿಗೆ ಪ್ರೇಮಗಾಳಿ ಸೋಂಕಿರಲಾರದು ಎಂಬ ಅಭಿಪ್ರಾಯ ಮೂಡಿ, ಅನುಮಾನ ಮುಂದುವರಿಯದಂತೆ ತಡೆಯುತ್ತಿತ್ತು. ಆ ಕರವಸ್ತ್ರದ ಹಿಂದಿನ ಕಥೆ ಏನೇ ಇರಲಿ, ಅದರಿಂದ ಉದ್ಭವಿಸಿದ ಕಾಂತಿಯ ಇಂದಿನ ಕಥೆ ಮಾತ್ರ ವಿಚಿತ್ರವಾಗಿತ್ತು.

ಹೀಗೆ ಮುಂದುವರಿದು ಕಡೆಗೂ ತುಮಕೂರು ಬಂದೇಬಿಟ್ಟಿತು. ಜನರೆಲ್ಲ ಇಳಿದ ಬಳಿಕ ನಿಧಾನವಾಗಿ ತನ್ನ ಭಾರವಾದ ಬ್ಯಾಗುಗಳೊಂದಿಗೆ ಇಳಿದರಾಯಿತೆಂದು ಕೊಂಡ ಕಾಂತಿ ಕುಳಿತೇ ಇದ್ದಳು. ಕಾಲುಗಳ ಮೇಲಿದ್ದ ಬ್ಯಾಗುಗಳಿಂದಾಗಿ ಅಲ್ಲಾಡಿಸುವಂತೆಯೂ ಇರಲಿಲ್ಲ. ಅಷ್ಟು ಇಕ್ಕಟ್ಟು ಅಲ್ಲಿ. ಆದರೆ ಆಕೆ ಕುಳಿತದ್ದು ಡೇನಿಯಲ್‌ನ ಅನುಮಾನಕ್ಕೆ ಮತ್ತಷ್ಟು ಪುಷ್ಟಿ ಕೊಟ್ಟಿತು.

''ಕಡೆಗೂ ನನ್ ಕರ್ಚೀಫು ಇಲ್ದಂಗೆ ಮಾಡ್ಬಿಟ್ರಿ'' ಎಂದ ಡೇನಿಯಲ್‌ನ ಸ್ವರದಲ್ಲಿ ಕರ್ಚೀಫ್ ಸಿಗದ ನಿರಾಸೆ ಹಾಗೂ ತನ್ನ ಪ್ರೀತಿಯ ಕರವಸ್ತ್ರವನ್ನು ಲಪಟಾಯಿಸಿದ ಕಾಂತಿಯ ಧೂರ್ತತನದ ಬಗ್ಗೆ ಅಸಹನೆ ಎರಡೂ ವ್ಯಕ್ತವಾದವು.

'ಏನನ್ನೂ ಕದಿಯದೆ ಕಳ್ಳಿ ಆದೆನಲ್ಲಾ! ಈ ಅಪಮಾನದಿಂದ ಎಂತು ಪಾರಾಗುವುದು ?' ಚಿಂತಿತಳಾದಳು ಕಾಂತಿ.

ಅಷ್ಟರಲ್ಲಿ ಅವನಣ್ಣ ಎದ್ದು ಬಂದವನು ತಮ್ಮನನ್ನು ಮುಂದಕ್ಕೆ ತಳ್ಳುತ್ತ ''ನಡಿಯೋ ಮುಂದೆ, ಬೇರೆ ಕರ್ಚೀಫು ತೊಗೊಂಡ್ರಾಯ್ತು'' ಎಂದು ಓಲೈಸಿದ. ಆದರೆ ಪೀಪೀ ಕಳೆದುಕೊಂಡ ಮಗುವಿನಂತೆ ಡೇನಿಯಲ್ ದುಃಖಾರ್ತ ಮುಖಭಾವವನ್ನು ಪ್ರದರ್ಶಿಸುತ್ತಾ ''ಬ್ರದರ್, ಅದು ನನ್ನ ಕರ್ಚೀಫು ಬ್ರದರ್'' ಎಂದು ಗೋಳಾಡುತ್ತಾ, ಹಿಂದಿರುಗಿ ನೋಡುತ್ತಾ, ಅಣ್ಣನಿಂದ ತಳ್ಳಿಸಿಕೊಳ್ಳುತ್ತಲೇ ಬಸ್ಸಿನಿಂದ ಕೆಳಗಿಳಿದ.

ಎಲ್ಲರಿಗಿಂತ ಕಡೆಯಲ್ಲಿ ಎದ್ದ ಕಾಂತಿಯ ಕಣ್ಣಿಗೆ ಎರಡು ಸೀಟುಗಳ ಮುಂದೆ ಒಂದೆರಡು ಕರ್ಚೀಫುಗಳು ಕಂಡುವು. ''ಇದರಲ್ಲಿ ಒಂದು ಅವನ ಕರ್ಚೀಫು ಇರಬಹುದು'' ಎಂದು ಉದ್ಗರಿಸಿದ ಕಾಂತಿಯತ್ತ ಮಂದ ಹಾಸ ಬೀರಿ ''ಇವೆಲ್ಲಾ ಯಾರದ್ದೋ ಏನೋ ! ನೀವು ಸುಮ್ನೆ ಹೋಗ್ರಮ್ಮ'' ಎಂದು ಅವತರಿಸಿದ ಕಂಡಕ್ಟರ್.

ಆದರೂ ಮನಸ್ಸು ತಡೆಯದೆ ಕೈಗೆ ಸಿಕ್ಕಿದ ಕರ್ಚೀಫುಗಳನ್ನೆತ್ತಿ ಇನ್ನೂ ಅದೇ ಕಿಟಕಿಯ ಕೆಳಗೆ ನಿಧಾನವಾಗಿ ತಳ್ಳಿಸಿಕೊಂಡು ಸಾಗುತ್ತಿದ್ದ ಡೇನಿಯಲ್ ಮೇಲೆ ಅವುಗಳನ್ನು ಬಿಸುಟಳು. ಪುಣ್ಯವಶಾತ್ ಅದರಲ್ಲಿ ಒಂದು ಆತನ ಕರವಸ್ತ್ರವೇ ಆಗಿದ್ದಿತು. ಅದನ್ನು ಹಿಡಿದುಕೊಂಡ ಅವನ ಮೊಗ ಮೊರದಷ್ಟು ಅಗಲವಾಗಿ, ಕಣ್ಣುಗಳು ಫಳಫಳಿಸಿದವು. ಮೇಲೆ ಕಿಟಕಿಯಲ್ಲಿ ಕಂಡ ಕಾಂತಿಯನ್ನು ಕುರಿತು ''ಥ್ಯಾಂಕ್ಯೂ ಸಿಸ್ಟರ್, ತುಂಬಾ ಥ್ಯಾಂಕ್ಸ್ !'' ಎಂದುಸುರಿದ ಡೇನಿಯಲ್.

ಕಡೆಗೂ ಈ ಕರ್ಚೀಫಾಯಣಕ್ಕೊಂದು ತೆರೆ ಬಿದ್ದು, ತಾನು ನಿರಪರಾಧಿಯಾಗಿ ಉಳಿಯುವಂತಾಗಿದ್ದರಿಂದ ಸಂತಸಗೊಂಡ ಕಾಂತಿ, ಲಗುಬಗೆಯಿಂದ ತಂಗಿಯ ಮನೆಗೆ ಮಕ್ಕಳೊಂದಿಗೆ ದೌಡಾಯಿಸಿದಳು – ಇನ್ನಾವ ಬಗೆಯ ಸಂಕಟಕ್ಕೂ ಸಿಲುಕಬಾರದೆಂದು !

**ಸತ್ಯಮತಿ**
w/o ಡಾ|| ಎಸ್. ಹರಿಕೃಷ್ಣನ್, ಸರ್ಜನ್ ಡೆಂಟಿಸ್ಟ್
ಸುರತ್ಕಲ್ -೫೭೪ ೧೫೮





# ಅಮ್ಮ ಮತ್ತು ಬೆಳ್ಳಮ್ಮ

ಜಯಾ ಯಾಜಿ ಶಿರಾಲಿ

ನಿತ್ಯದ ಸಂಸಾರದ ಜಂಜಾಟದಲ್ಲಿ ನನಗೆ ಇತ್ತೀಚೆಗೆ ಬೆಳ್ಳಮ್ಮನ ನೆನಪೇ ಹಾರಿಹೋಗಿತ್ತೇನೋ... ಕಳೆದ ಅಕ್ಟೋಬರ್ ರಜೆಯಲ್ಲಿ ಅಮ್ಮನಿದ್ದಲ್ಲಿ ಹೋದಾಗ ಟೈಂಪಾಸ್‌ಗೆ ಎಂದು ಹಳೆಯ ಬೀರುವಿನಲ್ಲಿದ್ದ ಹಳೆಯ ಕಪ್ಪು ಬಿಳುಪು ಫೋಟೋ ತುಂಬಿರುವ ಆಲ್ಬಂ ತೆಗೆದು ನೋಡುತ್ತಿರುವಂತೆ ನನ್ನ ತವರುಮನೆಯ ಮೊದಲ ಹಸು 'ಹಂಡಕ್ಕ'ನ ಫೋಟೋ ನೋಡಿದೊಡನೆ ಮನದಲ್ಲಿ ಹಿಂದಿನ ರೀಲು ಬಿಚ್ಚಿಕ್ಕೊಳ್ಳತೊಡಗಿತು.

ಅಮ್ಮನ ಹತ್ತಿರ ಇತ್ತೀಚೆಗೆ ಕೊಟ್ಟಿಗೆ ಕೆಲಸವಾಗುತ್ತಿರಲಿಲ್ಲ. ಅಪ್ಪಯ್ಯ ಇಲ್ಲವಾದ ನಂತರ ಅಮ್ಮ ಬಹಳ ಸೊರಗಿಬಿಟ್ಟಿದ್ದಳು. ಆದರೆ ಹಾಗಂತ ಮಕ್ಕಳಿದ್ದಲ್ಲಿ ಹೋಗಲೊಲ್ಲಳು. ಪೇಟೆಯಲ್ಲಿಯ ಬಾಗಿಲು ಹಾಕಿಕೊಂಡು ಸಾಗಿಸುವ ಜೈಲಿನ ಜೀವನ ಆಕೆಗೆ ಒಗ್ಗದು. ಮಕ್ಕಳಿಗೆ ಅವಳಿದ್ದಲ್ಲಿ ಬಂದು ಇರಲು ಆಗುತ್ತದೆಯೇ... ಊಹೂಂ.... ಬದುಕಲು ಕೈಹಿಡಿದ 'ಕೆಲಸ' ನಗರವನ್ನೇ ಬಂಧಿಸುತ್ತದೆ. ಹಾಗಾಗಿ ನಾವೆಲ್ಲ ಒಟ್ಟಿಗೆ ಸೇರಿದಾಗೆಲ್ಲ ಅಮ್ಮನ ಹತ್ತಿರ ಹೇಳುತ್ತಿರುತ್ತೇವೆ : ''ಅಮ್ಮ ಇನ್ನು ಕೊಟ್ಟಿಗೆ ಕೆಲಸವೆಲ್ಲ ಬೇಡ, ಬಿಟ್ಬಿಡು. ಎಲ್ಲ ಹಸು ಕರು ಯಾರಿಗಾದರೂ ಮಾರಿಬಿಡು ಅಥವಾ ಚೆನ್ನಾಗಿ ಸಾಕುವವರಿಗೆ ಪುಕ್ಕಟೆ ಕೊಟ್ಟುಬಿಡು. ಯಾಕೆ ಸುಮ್ಮನೆ ಈ ವಯಸ್ಸಲ್ಲಿ ಕಷ್ಟ ಪಡ್ತೀಯಾ...'' ಆಗೆಲ್ಲಾ ಅಮ್ಮ ಹೇಳುವುದು : ''ಅದೇನು ಬೇಕು ಅಂದ್ಕೂಡ್ಲೆ ಕಟ್ಕೊಳ್ಳಿಕ್ಕೆ, ಬೇಡ ಅಂದ್ಕೂಂಡ್ಲೆ ಬಿಡ್ಲಿಕ್ಕೆ ಸಂಸಾರ ಅಂತ ಮಾಡಿದ್ಯಾ... ನಿನ್ನಪ್ಪಯ್ಯ ಮಕ್ಕಳಿಗೆ ನೀರು ಬೆರೆಸಿದ ಹಾಲು ಬೇಡವೆಂತ ಅಪ್ಪಟ ಹಾಲು, ಗಟ್ಟಿ ಮೊಸರು, ಕೊಟ್ಟಿಗೆಯಲ್ಲಿ ಕರೆದ ನೊರೆನೊರೆ ಸಿಹಿ ಹಾಲು ಬೇಕೆಂದು ಅಲ್ವಾ ಹಸು ಕೊಂಡಿದ್ದು... ಮಾತಾಯಿ ಆ ಹಸು ನಮ್ಮನೆಗೆ ಬಂದು ಒಂದು ಕೊಟ್ಟಿಗೆ ಅಂತ ಮಾಡ್ತು....'' ಅಮ್ಮ ಹೇಳುತ್ತಾ ಹೇಳುತ್ತಾ... ''ಇಷ್ಟು ದಿನ ಯಾರು ನನ್ನ ಜೊತೆ ಇರಲಿ ಇಲ್ಲದಿರಲಿ... ಆ ಕೊಟ್ಟಿಗೆ ಬಳಗ ಮಾತ್ರ ನನ್ನ ಒಂಟಿ ಮಾಡಿದ್ದು ಇದ್ಯಾ ?'' ಎಂದು ನಮ್ಮನ್ನೇ ಕೇಳುವಳು. ನಿಜ, ಅಪ್ಪಯ್ಯಾ ಹುಟ್ಟಿದೂರು ಬಿಟ್ಟು ದೂರದ ಹಳ್ಳಿಗೆ ತನ್ನ ವೈದ್ಯ ವೃತ್ತಿಗಾಗಿ ಬಂದಾಗ ಹಾಲು ಮೊಸರಿನದೇ ಸಮಸ್ಯೆಯಾಗಿತ್ತು. ಹಳ್ಳಿಯಲ್ಲಿ ಬೇಕಷ್ಟು ಹಸುಗಳಿದ್ದರೂ ಹಳ್ಳಿಯ ಜನ ಹಾಲನ್ನು ಹಿಂಡಿ ಮಾರುವ ಪ್ರವೃತ್ತಿಯವರಾಗಿರಲಿಲ್ಲ. ಹಸು, ಎತ್ತುಗಳು ಏನಿದ್ದರೂ ಬೇಸಾಯಕ್ಕೆ ಗೊಬ್ಬರಕ್ಕೆ ಮಾತ್ರ. ಹಾಲನ್ನು ಮಾರಿದರೆ ಅದೊಂದು ಪಾಪದ ಕೆಲಸ ಅಂತ ಅವರು ನಂಬಿದ್ದರಂತೆ...

ಅಪ್ಪಯ್ಯ ಮಕ್ಕಳಿಗಾಗಿ ಹಾಲು ಕೇಳಿದಾಗ ಕೆಲವರು ಕೊಡಲು ಒಪ್ಪಿದರೂ ಆ ಹಾಲು ಅಪ್ಪಯ್ಯನ ಮನಸ್ಸಿಗೆ ಒಪ್ಪಿಗೆಯಾಗಲಿಲ್ಲ. ಕಾರಣ ಶುಚಿತ್ವದ ಕೊರತೆ. ಆಗ ಹಾಲು ಮೊಸರು ತುಪ್ಪಕ್ಕೆ ಅಂತ ಕೊಂಡ ಹಸು 'ಹಂಡಕ್ಕ' ಕಪ್ಪು ಮೈ ಪೂರ್ತಾ ಬಿಳಿಬಣ್ಣದ ಹಂಡ ಹಂಡ ಇರುವುದರಿಂದ ಇದಕ್ಕೆ ನಾವು 'ಹಂಡಕ್ಕ' ಎಂದು ಕರೆದಿದ್ದೆವು. ಹಣೆಯ ಮೇಲೆ ದಕ್ಷಿಣ ಭಾರತದ ನಕಾಶೆ ನೆನಪಿಸುವಂತೆ ಬಿಳಿಯ ಬಣ್ಣದಲ್ಲಿತ್ತು - ಚಿತ್ತಾರ. ಅಂದು ಅಪ್ಪಯ್ಯ ತನ್ನ ಕ್ಯಾಮರಾದಲ್ಲಿ ಹಂಡಕ್ಕ ಅದರ ಪುಟ್ಟ ಮಗಳು 'ಹುಬ್ಬಿ'ಯೊಂದಿಗೆ ಅಮ್ಮನನ್ನು ಮನೆಯ ದಣಪೆಯ ಹತ್ತಿರ ನಿಲ್ಲಿಸಿಕೊಂಡು ತೆಗೆದ ಫೋಟೋ ಇನ್ನೂ ಇದೆ. ಫೋಟೋದಲ್ಲಿಯ ಹಂಡಕ್ಕನ ಕಣ್ಣುಗಳಲ್ಲಿ ಇಂದಿಗೂ ಆ ಸೌಮ್ಯ ಸಾಧುತನ ಢಾಳಾಗಿ ಕಾಣುತ್ತಿತ್ತು.

ಸರಿ, ಹಂಡಕ್ಕ ಮನೆಗೆ ಬಂದ ದಿನದಿಂದ ಅಮ್ಮನಿಗೆ ಮನೆಯ ಗೂಟಕ್ಕೆ ಕಟ್ಟಿಟ್ಟಂತೆ ಆಯಿತು. ಕೊಟ್ಟಿಗೆಯಲ್ಲಿ ವರ್ಷಕ್ಕೊಂದರಂತೆ 'ಕರು' ಹುಟ್ಟುವ ಸಂಭ್ರಮ. ಹಂಡಕ್ಕ ನಾಲ್ಕನೇ ಕರು ಹಾಕುವಾಗ ಅದರ ಮೊದಲ ಮಗಳು 'ಹುಬ್ಬಿ'ಯೂ ತಿಂಗಳು ತುಂಬಿದ ಬಸುರಿ. ಮೈ ಪೂರ್ತಿ ಕಪ್ಪಾಗಿದ್ದು ಕಣ್ಣಿನ ಹುಬ್ಬಿನ ಬಳಿ ಬಿಳಿ ಬಣ್ಣದ 'ಗೀರು' ಎದ್ದು ತೋರುವಂತೆ ಇದ್ದಿದ್ದರಿಂದ ಅದಕ್ಕೆ 'ಹುಬ್ಬಿ'ಅಂತ ಹೆಸರಿಟ್ಟಿದ್ದು. ಅದರ ಮಗಳೂ ಅದರಂತಹದೇ – ಅದಕ್ಕೆ 'ಸಣ್ಣ ಹುಬ್ಬಿ.' ಹಂಡಕ್ಕ, ಸಣ್ಣಕ್ಕ, ಮಾದೇವಿ, ಕಾವೇರಿ, ಶ್ರೀದೇವಿ, ಭೂದೇವಿ... ಒಂದೆರಡು ಹೆಸರೇ...? ಆಗೆಲ್ಲಾ ಮಕ್ಕಳಾದ ನಮಗೆ ಕೊಟ್ಟಿಗೆಯಲ್ಲಿ ಕರು

ಹುಟ್ಟಿದೊಡನೆ ಹೆಸರು ಇಡುವುದರಲ್ಲೇ ಪೈಪೋಟಿ. ಗಂಗಮ್ಮ, ಗೌರಮ್ಮ, ಲಕ್ಷ್ಮಮ್ಮ.... ನಂತರ ಕರು ಹುಟ್ಟಿದ ವಾರದ ಹೆಸರ ಆಧಾರದ ಮೇಲೆ ಹೆಸರಿಡಲು ಪ್ರಾರಂಭ ಮಾಡಿದೆವು. ಕೆಲವೊಮ್ಮೆ ಬಣ್ಣದ ಮೇಲೂ ಹೆಸರಿಡುವ ಪದ್ಧತಿ ಇತ್ತು; ಕರಿಯಮ್ಮ, ಬೆಳ್ಳಮ್ಮ, ಕೆಂಪಿ, ಕೆಂಪಯ್ಯ ಇತ್ಯಾದಿ.

ಒಂದೇ ಹಸುವಿನ ಸಂತಾನ ಕೊಟ್ಟಿಗೆಯಲ್ಲಿ ಬೆಳೆದಂತೆ ಅವುಗಳ ಸಿಹಿ ಸಿಹಿ ನೊರೆ ಹಾಲನ್ನು ಕುಡಿದು ಅಮ್ಮನ ಐದು ಮಕ್ಕಳಾದ ನಾವೂ ಬೆಳೆದೆವು. ಪುಟ್ಟ ಕರುವಿನ 'ಅಂಬಾ' ಕೂಗು, ಅದರ ಕುತ್ತಿಗೆಗೆ ಅಣ್ಣ ಕಟ್ಟಿದ ಗೆಜ್ಜೆಯ 'ಗಿಲಿಗಿಲಿ' ನಾದ. ತಾಯಿಯ ಹಾಲು ಕುಡಿದ ನಂತರ ಬಾಗಿಲು ಹಾಕಿದ ಕೊಟ್ಟಿಗೆಯಲ್ಲೇ ಬಿಟ್ಟು ಬಂದಾಗ, ಹೇಗೋ ನುಸುಳಿ ಹೊರಬಂದು ಹಿತ್ತಲ ತುಂಬ ಕುಣಿದಾಡಿ ಹಿಡಿಯಲಾಗದೇ ಒದ್ದಾಡಿದ ಆ ದಿನಗಳು.... ನಿಜಕ್ಕೂ ಈಗ ಅವುಗಳೆಲ್ಲ ಕನಸೇನೋ ಅನ್ನಿಸುತ್ತಿದೆ. ಅಮ್ಮ ಹಿಂಡುವ 'ಜೀರ್', 'ಜೀರ್' ಸದ್ದಿನೊಂದಿಗೆ ಹಾಲು ಲೋಟಕ್ಕೆ ಬಿದ್ದು ನೊರೆ ನೊರೆಯಾಗಿ ತುಂಬಿದಾಗ ಅದನ್ನು ಅಲ್ಲೇ ಕೊಟ್ಟಿಗೆಯಲ್ಲೇ 'ಉಷ್ಣೋದಕ ಹಾಲು' ಕುಡಿದು ಬರುವಾಗ ಹಾಲಿನ ನೊರೆ ತುಟಿಯ ಮೇಲೆ ಅಂಟಿಕೊಂಡು 'ಬಿಳಿ ಮೀಸೆಯ ಅಜ್ಜ' ಅನ್ನಿಸಿಕೊಳ್ಳುತ್ತಿದ್ದೆವು.

ಈ ಹಸುಗಳ ಸಲುವಾಗಿ ಅಮ್ಮ ತವರಿಗೆ ಹೋಗುವುದೂ ಅಪರೂಪವಾಗಿತ್ತು. ಹೋದರೂ ಬೇಗ ಹಿಂತಿರುಗಬೇಕಾಗಿತ್ತು. ಹತ್ತಿರದ ನೆಂಟರಿಷ್ಟರ ಮನೆಯ ಮಂಗಳಕಾರ್ಯಗಳಿಗೂ 'ಕರೆಯೋ ದನ ಇದ್ದು', 'ತುಂಬಿದ ಗಬ್ಬದ ದನ ಇದ್ದು, ಹೇಗ್ಬರುವದು ಮಾರಾಯ' ಅಂತ ತಪ್ಪಿಸಿಕೊಂಡಿದ್ದು ಉಂಟು. ಅಮ್ಮನಿಗೆ ಕೊಟ್ಟಿಗೆಯೇ ಸರ್ವಸ್ವವಾಗಿತ್ತು. ಆ ದನಗಳಿಗೂ ಅಷ್ಟೇ. ಅಮ್ಮ ಬರುತ್ತಿದ್ದಾಳೆಂದು 'ಮೂಗು ವಾಸನೆ'ಯಿಂದಲೇ ಗ್ರಹಿಸಿ 'ಹುಂ', 'ಹುಂ' 'ಅಂಬಾ' ಎಂದು ಗುಟುರು ಹಾಕುತ್ತಿದ್ದವು. ಅಪ್ಪನಿಗೂ ಕೊಟ್ಟಿಗೆ ಎಂದರೆ ಮಕ್ಕಳಿರುವ ಇನ್ನೊಂದು ಮನೆಯಾಗಿತ್ತು. ರಾತ್ರಿ ಎಚ್ಚರವಾದಾಗೆಲ್ಲ ಕೊಟ್ಟಿಗೆಗೆ ಹೋಗಿ ಟಾರ್ಚ್ ಬೆಳಕು ಬೀರಿ ಎಲ್ಲರ ಸೌಖ್ಯ ವಿಚಾರಿಸಿ ಒಂದಿಷ್ಟು ಹುಲ್ಲು ಹಾಕಿಬರುತ್ತಿದ್ದ.

ಇವುಗಳಲ್ಲಿ ನನಗೆ ತೀರ ನೆನಪಾಗಿ ಆಗಾಗ ಕಾಡಿಸುವುದು 'ಬೆಳ್ಳಮ್ಮ.' ಅಚ್ಚ ಬೆಳದಿಂಗಳಿನ ಮೈ ಬಣ್ಣ. ಒಂದೇ ಒಂದು ಕರಿಯ ಕೂದಲಿಲ್ಲದ ಆ ಕರು ಹುಟ್ಟಿದಾಗ ಮನೆ ಮಂದಿ ಎಲ್ಲಾ ಸಂಭ್ರಮಪಟ್ಟಿದ್ದು ಎಷ್ಟು! ಆಕಳ ಕರುವೊಂದು ಅಷ್ಟು ಚೆಂದಾಗಿ ಇರುವುದನ್ನು ನಾನು ಅದೇ ಮೊದಲು ಅದೇ ಕೊನೆಯದು ನೋಡಿದ್ದು. ಬಾಯಿ, ಮೂಗಿನ ಹೊಳ್ಳೆ, ಕಣ್ಣಿನ ಸುತ್ತ ತಿಳಿ ಗುಲಾಬಿ ಬಣ್ಣ, ಹೊಳೆವ ಕಪ್ಪು ಕಂಗಳು, ಪಟಪಟ ಅಲುಗಾಡಿಸುವ ಪುಟ್ಟ ಪುಟ್ಟ ಕಿವಿ. ತುಂಬುಗೂದಲಿನ ಪುಟ್ಟ ಬಾಲ. ಮನೆಯೊಳಗೇ ಒಂದು 'ಮಗು' ಹುಟ್ಟಿದ ಸಂತೋಷ ನಮ್ಮದಾಗಿತ್ತು. ಅಮ್ಮನಿದ್ದಲ್ಲಿ ನಾವು 'ಈ ಕರು ದೊಡ್ಡದಾಗದೆ ಚಿಕ್ಕದಾಗೇ ಇದ್ದರೆ ಎಷ್ಟು ಚೆಂದವಾಗಿತ್ತು ಅಲ್ಲ?' ಕೇಳುತ್ತಿದ್ದೆವು. ಆಗ ಅಮ್ಮ 'ನೀವೂ ಹಿಂಗೇ ಇದ್ರೆ, ಅದೂ ಹಾಗೇ ಇರುತ್ತೆ' ಎಂದು ನಗುವಳು. 'ಬೆಳ್ಳಿ' ಅಂತ ಹೆಸರಿಟ್ಟ ಆ ಕರುವಿಗೆ ಅಣ್ಣ ಗೆಜ್ಜೆಸರದೊಂದಿಗೆ ಬಣ್ಣಬಣ್ಣದ ಮಣಿಸರವನ್ನು ಹಾಕಿದ್ದ. ನಿತ್ಯ ಶಾಲೆಯಿಂದ ಬಂದೊಡನೆ 'ಬೆಳ್ಳಿ'ಯ ಮುಖವನ್ನು ನಮ್ಮ ಎದೆಯಲ್ಲಿ ಬಚ್ಚಿಟ್ಟು ಅದರೊಂದಿಗೆ ಸಂವಾದ ಮಾಡುವುದು ನಮ್ಮ ದಿನಚರಿಯಾಗಿತ್ತು. ಸುಮಾರು ದೊಡ್ಡದಾಗುವ ತನಕವೂ ರಾತ್ರಿ ಅದರ ವಾಸ ಮನೆಯ ಜಗುಲಿಯ ಮೂಲೆಯಲ್ಲೇ ಆಗಿತ್ತು. ಬೆಳಿಗ್ಗೆ ಐದೂವರೆಗೇ ಎದ್ದು 'ಅಂಬಾ' ಎಂದು ನಮ್ಮನ್ನು ಎಬ್ಬಿಸಿಬಿಡುತ್ತಿತ್ತು. ಮುಖ ತೊಳೆದು ಬೆಳ್ಳಿಯ ಮೈನೇವರಿಸಿ ನಾವು ಓದಲು ಕೂರುತ್ತಿದ್ದೆವು.

ಬೆಳ್ಳಿ ದೊಡ್ಡದಾಗಿ ಕರು ಹಾಕಿದ ನಂತರ 'ಬೆಳ್ಳಮ್ಮ' ಆದಳು. ಮೂರನೇ ಕರು ಹುಟ್ಟಿದ ಆರು ತಿಂಗಳಿಗೆ ಮೇಯಲು ಬಿಟ್ಟ ಬೆಳ್ಳಮ್ಮ ಸಂಜೆ ಹಿಂತಿರುಗಲಿಲ್ಲ. ರಾತ್ರಿ ಲಾಟೀನು ಹಿಡಿದು ಆಳು ಹುಡುಗನೊಂದಿಗೆ ಅಮ್ಮ, ಅಪ್ಪಯ್ಯ, ಬೇಣದಲ್ಲಿ ಹುಡುಕಲು ಹೋದಾಗ ಬೇಲಿಯ ಪೊದೆಯ ಬಳಿ 'ಬೆಳ್ಳಮ್ಮ' 'ಅಂಬಾ' ಎಂದು ಬಿದ್ದಿತ್ತು. ಯಾರದೋ ಕಿಡಿಗೇಡಿಗಳ ಕಲ್ಲೇಟಿಗೆ ಬೆಳ್ಳಮ್ಮನ ಕಾಲು ಬಲಿಯಾಗಿತ್ತು. ನಾಲ್ಕೈದು ಗಂಡಾಳುಗಳನ್ನು ಒಟ್ಟು ಹಾಕಿ 'ಬೆಳ್ಳಮ್ಮ'ನನ್ನು ಕೊಟ್ಟಿಗೆಗೆ ತಂದುಹಾಕಲಾಯಿತು. ಕಾಲಿನ ಎಲುಬು ಮುರಿದಿತ್ತು. ಎದ್ದು ನಿಲ್ಲಲಾರದೆ ಪಾಪ ಅದು ಸಂಕಟಪಡುವುದನ್ನು ನೋಡಲಾಗುತ್ತಿರಲಿಲ್ಲ. ಕರು ಹಾಲು ಕುಡಿಯಲು ಬಂದಾಗ ಮಲಗಿದ್ದಲ್ಲಿಂದಲೇ ಕಾಲುಚಾಚಿ ಹಾಲು ಕುಡಿಸುವ ಬೆಳ್ಳಮ್ಮನ ಕಂಡಾಗ ನಮಗೆಲ್ಲ ಕರಳು ಕಿತ್ತುಬಂದಂತೆ ಆಗುತ್ತಿತ್ತು. ಪ್ರತಿದಿನ ಕಾಲಿನ ಗಾಯ ತೊಳೆದು ಬ್ಯಾಂಡೇಜ್ ಹಾಕಬೇಕಾಗಿತ್ತು. ಎರಡು ಮೂರು ದಿನಕ್ಕೊಮ್ಮೆ ಪಶುವೈದ್ಯರು ಬಂದು ನೋಡಿ ಹೋಗುತ್ತಿದ್ದರೂ, ನಿತ್ಯ ಗಾಯ ತೊಳೆದು ಬ್ಯಾಂಡೇಜ್ ಹಾಕುವ ಕೆಲಸಕ್ಕೆ ಆಸ್ಪತ್ರೆಯ ಹೆಲ್ಪರ್ ದಾಮೂ ಬರುತ್ತಿದ್ದ.

ಅಮ್ಮ ಕೊಟ್ಟಿಗೆಯನ್ನು ಎಷ್ಟು ಚೊಕ್ಕಟವಾಗಿಡುತ್ತಿದ್ದರೂ ಬ್ಯಾಂಡೇಜ್ ಹಾಕುವುದೆಂದರೆ ಅವನಿಗೆ ಕಿರಿಕಿರಿಯಾಗುತ್ತಿತ್ತು. ಬರುವಾಗಲೇ ಸಿಡಿಮಿಡಿಗುಟ್ಟುತ್ತ ಬರುತ್ತಿದ್ದ. ಆದರೆ ನಂತರ 'ಬೆಳ್ಳಮ್ಮ' ತನ್ನ ಸನ್ನಡತೆಯಿಂದ ಆತನನ್ನು ಎಷ್ಟು ಪರಿವರ್ತಿಸಿತ್ತೆಂದರೆ ಆತ ಬಂದೊಡನೆ ಮೊದಲು ಬೆಳ್ಳಮ್ಮನಿಗೆ ಕೈಮುಗಿದು ಕೆಲಸ ಶುರು ಮಾಡುತ್ತಿದ್ದ! ದಾಮೂ ಬಂದೊಡನೆ ತಾನಾಗಿಯೇ ಉದ್ದನೆ ಮಲಗಿ ನೋವಿನ ಕಾಲನ್ನು ಚಾಚಿ ಕುತ್ತಿಗೆಯನ್ನು ಹಿಂದಕ್ಕೆ ಒರಗಿಕೊಳ್ಳುತ್ತಿತ್ತು. ಅಂತ ನೋವಿನಲ್ಲೂ ಬೆಳ್ಳಮ್ಮ ಒಂಚೂರೂ ಅಲುಗಾಡದೆ, ಕೊಂಬಿನಲ್ಲಿ ಹಾಯದೆ, ಕಾಲಿನಲ್ಲಿ ಒದೆಯದೆ ಗಾಯ ತೊಳೆದು ಬ್ಯಾಂಡೇಜ್ ಹಾಕುವವರೆಗೂ ಮೌನವಾಗಿ ಸಹಕರಿಸುತ್ತಿತ್ತು. ಸಾಮಾನ್ಯವಾಗಿ ಇಂತ ಸ್ಥಿತಿಯಲ್ಲಿ ಎಲ್ಲ ದನಗಳೂ ಮಾಡುವ ಹಾರಾಟ ಕಂಡ ದಾಮೂಗೆ ಬೆಳ್ಳಮ್ಮನ ಈ ವರ್ತನೆ ಆಶ್ಚರ್ಯ ತರಿಸಿತ್ತು. ಎಲ್ಲರ ಮನಸ್ಸಿನ ಭಾವನೆಗಳನ್ನು ಅದು ಅರ್ಥಮಾಡಿಕೊಳ್ಳುತ್ತಿತ್ತು. ಅಮ್ಮನಂತೂ ಬೆಳ್ಳಮ್ಮನ ಸೇವೆ ಮಾಡುವಾಗೆಲ್ಲ ''ಹಿಂದಿನ ಜನ್ಮದಲ್ಲಿ ನನ್ನ ತಾಯಿಯಾಗಿತ್ತೇನೋ. ಈ ಜನ್ಮದಲ್ಲಿ ಸೇವೆ ಮಾಡಿಸಿಕೊಳ್ಳುತ್ತಿದೆ' ಎನ್ನುತ್ತಿದ್ದಳು. ಅಪ್ಪಯ್ಯನಾದರೂ ಅಷ್ಟೇ ಬೆಳ್ಳಮ್ಮನಿಗೆ ಯಾವುದಕ್ಕೂ ಕೊರತೆಯಾಗದಿದ್ದ ಹಾಗೆ ನೋಡಿಕೊಳ್ಳುತ್ತಿದ್ದ. 'ಬಯಲಿನಲ್ಲಿ ಬಿಟ್ಟಾಗ ಬೇಕಾಗಿದ್ದು ತಿಂದು ಹೊಟ್ಟೆ ತುಂಬಿಸಿಕೊಳ್ಳುವ ಪ್ರಾಣಿ ಪಾಪ. ಈಗ ನಾವು ಹಾಕಿದ್ದು ಅದಕ್ಕೆಲ್ಲಿ ಸಾಲುತ್ತೆ' ಎನ್ನುತ್ತ ಬೆಳ್ಳಮ್ಮನಿಗೆ ಪ್ರತ್ಯೇಕವಾಗಿ ಹಿಂಡಿ ತರುತ್ತಿದ್ದ.

ಅಮ್ಮ ಅಪ್ಪಯ್ಯನ ಆರೈಕೆಯಲ್ಲಿ ಮೈ ತುಂಬಿಕೊಂಡು ಸ್ವಲ್ಪ ಎದ್ದುನಿಂತು ತುಸುದೂರ ಓಡಾಡುವಷ್ಟು ಶಕ್ಯವಾದರೂ ಕೆಲದಿನಗಳಲ್ಲಿ ಮತ್ತೆ ನೋವಾದ ಕಾಲಿಗೇ ಪುನಃ ನೋವಾಯಿತು. ಕುಂಟುತ್ತ ಸಹ ತಿರುಗಾಡದಾಯಿತು. ಮುರಿದ ಎಲುವಿನ ಚೂರೊಂದು ಒಳಗಡೆಯೇ ಇದ್ದು ಗಾಯಕ್ಕೆ ಪುನಃ ಬ್ಯಾಂಡೇಜು ಹಾಕಬೇಕಾಯಿತು.

ಅಮ್ಮ ತನ್ನ ಮತ್ತು ಅದರ ಋಣಾನುಬಂಧ ಇರುವಷ್ಟು ದಿನ ಇರುತ್ತೆ... ಎನ್ನುತ್ತ ಬೆಳ್ಳಮ್ಮನ ಸೇವೆ ಮಾಡುತ್ತ... ಈ ಅವಧಿಯಲ್ಲಿ ಒಮ್ಮೆ ಸಹ ಊರಿಗೂ ಹೋಗದೆ ಬೆಳ್ಳಮ್ಮನ ಆರೋಗ್ಯಕ್ಕೆ ಗಮನ ಕೊಟ್ಟಿದ್ದಳು. ಬೆಳ್ಳಮ್ಮನ ಕೆಲಸವನ್ನು ಅಮ್ಮ ತಾನೇ ಮಾಡುವಳು. ಆಳಿನ ಹತ್ತಿರ ಮಾಡಿಸುತ್ತಿರಲಿಲ್ಲ. ಕೆಲಸದಲ್ಲಿ ಆಳುಗಳು ಕಾಳಜಿ ತೆಗೆದುಕೊಳ್ಳುವುದಿಲ್ಲವೆಂದಷ್ಟೇ ಅಲ್ಲ ಬೆಳ್ಳಮ್ಮನ ಮೇಲೆ ಆಳುಗಳಿಗೆ ತಾತ್ಸಾರ, ಕಿರಿಕಿರಿಯಾಗಬಾರದೆಂಬ ಉದ್ದೇಶ ಅಮ್ಮನದಾಗಿತ್ತು.

ಒಂದು ದಿನ ಅಮ್ಮನಿಗೆ ತೀರ ಜರೂರಾಗಿ ಊರಿಗೆ ಹೋಗಬೇಕಾಯಿತು. ಮರುದಿನ ಮನೆ ಜನರೆಲ್ಲ ಹೊರಡಬೇಕಾಗಿತ್ತು. ಅಗತ್ಯವಾದ ಕಾರ್ಯಕ್ರಮವಿತ್ತು. ಬೆಳ್ಳಮ್ಮನಿಗೆ ಏನು ಮಾಡುವುದು, ನಡುವಲ್ಲಿ ಎರಡೇ ದಿನ. ಎರಡು ದಿನವಾದರೂ ಆಳಿನ ಹತ್ತಿರ ಬೆಳ್ಳಮ್ಮನನ್ನು ಕೊಟ್ಟು ಹೋಗಲು ಅಮ್ಮನಿಗೆ ಮನಸಿಲ್ಲ. ಆದರೂ ಉಪಾಯವಿಲ್ಲದೆ ಅಮ್ಮ ಹೊರಡಲೇಬೇಕಾಯಿತು. ಹೊರಡುವ ಕ್ಷಣದಲ್ಲಿ ಅಮ್ಮ ಕೊಟ್ಟಿಗೆಗೆ ಒಂದು ಕಟ್ಟು ಹುಲ್ಲಿನೊಂದಿಗೆ ಹೋದಳು. ''ಬೆಳ್ಳಮ್ಮ ನಾನು ಬೇಗ ಬರ್ತೇ. ಸೋಮಕ್ಕಂಗೆ (ಕೆಲಸದ ಆಳಿನ ಹೆಸರು) ತ್ರಾಸ ಕೊಡ್ಬೇಡ'' ಎಂದು ಹೇಳಿ ಹುಲ್ಲು ಕೊಟ್ಟು ಮೈನೇವರಿಸಿ ಊರಿಗೆ ಹೊರಟಳು ಅಮ್ಮ. ಮರುದಿನ ಬೆಳಿಗ್ಗೆ ಅಪ್ಪಯ್ಯನೊಂದಿಗೆ ನಾವೆಲ್ಲ ಹೊರಡುವುದಿತ್ತು. ಬೆಳಿಗ್ಗೆ ಎಂದಿನಂತೆ ಅಪ್ಪಯ್ಯ ಕೊಟ್ಟಿಗೆಗೆ ಹೋದಾಗ ಕಂಡಿದ್ದು ಬೆಳ್ಳಮ್ಮ ಇಹಲೋಕ ಯಾತ್ರೆ ಮುಗಿಸಿತ್ತು. ಪಾಪ, ಅದಕ್ಕೆ ಊರಿಗೆ ಹೋಗುವ ನಮಗೆ ತಲೆಬಿಸಿ ಬೇಡವೆನ್ನಿಸಿತೋ..... ಎಷ್ಟು ದಿನದವರೆಗೆ ಇವರಿಗೆಲ್ಲ ತೊಂದರೆ ಕೊಡುವುದು ಅನ್ನಿಸಿತೋ.. ಅಮ್ಮನಿಲ್ಲದೆ ಒಂದು ದಿನದ ಅಗಲಿಕೆಯನ್ನೂ ತಾಳಿಕೊಳ್ಳಲಾಗಲಿಲ್ಲವೇ ? ದೇಹತ್ಯಾಗ ಮಾಡಿತೆ....? ದೇಹದಲ್ಲಿ ಒಂಚೂರು ಸೊರಗದ ಬೆಳ್ಳಮ್ಮ ಕಾಲುನೋವು ಬಿಟ್ಟರೆ ಮತ್ತೆ ಯಾವ ಕಾಯಿಲೆಯೂ ಇಲ್ಲದೆ ಸತ್ತ ಬೆಳ್ಳಮ್ಮನ ಸಾವು ನಮಗಿನ್ನೂ ನಿಗೂಢ. ಅಮ್ಮ ಬೆಳ್ಳಮ್ಮರಲ್ಲಿ ಎಂತಹ ಬಾಂಧವ್ಯ ಬೆಸೆದಿತ್ತು....'

**ಜಯಾ ಯಾಜಿ ಶಿರಾಲಿ**
೧೨೦, ಎಮ್.ಐ.ಜಿ., ಕೆ.ಎಚ್.ಬಿ. ಕಾಲೊನಿ
ಜ್ಯೋತಿನಗರ ಅಂಚೆ, ಚಿಕ್ಕಮಗಳೂರು-೨

# ಚಾಚಿದ ಮಣ್ಣಿನ ಕೈಗಳು



ಎರಡು ಸಂಜೆಗಳ ನಡುವಿನ ದೂರವು
ನಿನಗೊಂದು ರಾತ್ರಿಯಾದರೆ
ನನಗೆ ಮಾತ್ರ ಒಂದು ಹಗಲು !

ಚುಕ್ಕಿಗಳ ಸೀರೆಯ ಸುತ್ತುವೆ ನಾನು
ಕತ್ತಲ ಬುರಖಾ ತೆಗೆಯುವೆ ನೀನು !
ಬೆಳಕು ನೆರಳುಗಳ ಗಮನಾಗಮನಕೆ
ಒಂದೇ ನಿಳ್ದಾಣದಲಿ ಎದುರು ಬದುರು !

ಚಾಚಿಕೊಂಡು ಬರುವ
ನಮ್ಮೀ ಕೈಗಳ ನೋಡಿ
ತಟ್ಟನೆ ಹಿಡಿಯಲು ಬಯಸುವರೆಲ್ಲಾ !

ತೀರಾ ಹತ್ತಿರ ಬಂದಾಗ
ರೈಲಿನ ಹಳಿಗಳ ರೀತಿಯಲಿ
ಎದುರಾ ಬದುರು ಆ ಕಡೆ ಈ ಕಡೆ
ನೀನು ನಾನು !

ಸಂಜೆಯಿಂದ ಸಂಜೆಯವರೆಗೆ
ಎಲ್ಲಿಂದ ಎಲ್ಲಿಗೋ, ಸುದೀರ್ಘ ಪಯಣ !
ಬದುಕೊಂದು ಬಯಲಾದ ನನಗೆ
ಮೈಮುಚ್ಚಲಾಗದ ಚಿಂದಿಗಳ ಮೇಲೆ ಕೋಪ
ಕಣ್ಮುಚ್ಚಿ ನೋಡುವ ಸೂರ್ಯನ ಮೇಲೆ ಕೋಪ.

ಆ ಕಾಲದ ನನ್ನ ಕೆಂಪು ಮೈಯ ಬಗ್ಗೆ ತಿಳಿದವರಾರು ?
ಬಿರು ಬಿಸಿಲಿನಲ್ಲೂ ಹಾಲುಣಿಸಿದ ಅಮ್ಮನಲ್ಲದೇ
ಕಪ್ಪು ಇದ್ದಲು ಕೆಂಪಾಗಲೆಂದು ಸುಡುವ ಕುಲುಮೆ ಸಾಕ್ಷಿ.

ಮುರಿದಷ್ಟೂ ಚಿಗಿಯುವ ತವಕ
ಹೊತ್ತಷ್ಟೂ ಬೆಳೆಯುವ ಹೆಣಭಾರ
ಬಿಡಿಸಲಾಗದ ಬಿಸಿಯೂ ಬೆಳಕೇ !

ನಡು ಬಾಗಿದಷ್ಟು ಸುಲಭವಾಗಿ
ಹೊತ್ತು ಮುಳುಗುವುದಿಲ್ಲ.

ಹಗಲೆಲ್ಲಾ ಪ್ರಸವ ಬೇನೆಗಳ ನಿರೀಕ್ಷೆ
ರಾತ್ರಿಸಾನಿ ಬರುವ ಮೊದಲೇ
ಸುಖ ಪ್ರಯಾಣದಾರಂಭ.

ನನಗೆ ಸುಖವೆಂದರೆ
ಸುಟ್ಟ ಇದ್ದಲಿ ಮೇಲೆ ಕಾಸಿದ ನೀರು ಸುರಿದಂತೆ.

ಅಂತರಂಗವೆಲ್ಲಾ ಅಂತಃಪುರವಾದ ನಿನಗೆ
ಕಾವಲು ಕಾಯುವ ಗೋಡೆಗಳ ಮೇಲೆ ಕೋಪ
ನೆರಳೀವ ಸೂರಿನ ಮೇಲೂ ಕೋಪ.

ಅಪ್ಪನೆದೆಯ ಮೇಲೆ ಕುಣಿದ
ನಿನ್ನ ಪಾದಗಳ ಸ್ವೇಚ್ಛೆಯನು ಬಲ್ಲವರಾರು ?
ಕೈ ಕಾಲು ಚಾಚಿ ಆಯಾಸಗೊಂಡ ಅಮ್ಮನಲ್ಲದೇ
ಪಕ್ಷಿ ಹಾರಿತೆಂದು ಹೇಳಲು ಸುಸ್ತಾದ ರೆಕ್ಕೆಗಳೇ ಸಾಕ್ಷಿ :

ವಯಸಾದಂತೆಲ್ಲಾ ಘೋಷಾ
ಅವಯವಗಳು ತುಂಬಿಕೊಂಡಂತೆ ನಾಚಿಕೆ
ಎಲ್ಲಿ ಮುಟ್ಟಿದರೂ ಕತ್ತಲೇ ಕತ್ತಲು !

ಮೈ ಕೊಟ್ಟ ಕೂಡಲೇ
ಬೆಳಗಾಗುವುದಿಲ್ಲ.

ರಾತ್ರಿಯೆಲ್ಲಾ ಮನೆಗಳ್ಳರ ಸ್ವೀಕಾರ
ಹಗಲ ಪ್ರಿಯನು ಚುಂಬಿಸುವವರೆಗೆ ಗಾಡಿ ಚಲಿಸುವುದಿಲ್ಲ.

ನಿನಗೆ ಚಲನೆಯೆಂದರೆ
ಕೆನ್ನೆಯ ಮೇಲಿನ ಕಣ್ಣೀರು ತುಟಿಗಳ ಸೇರುವುದಲ್ಲವೆ ?

ನಾವು ಕೂಡಬೇಕಾದಲ್ಲಿ ಬೇರಾಗುತ್ತಿದ್ದೇವೆ
ದೂರವಾಗಬೇಕಾದಲ್ಲಿ ಕೂಡುತ್ತಿದ್ದೇವೆ.

ಒಂದು ಸಂಜೆಯ ಮೊದಲ ಮಾತು
ಮತ್ತೊಂದು ಸಂಜೆಯ ಕೊನೆಯ ಮಾತು
ನಡುವೆ ಎರಡು ವಿಷಾದಾರಂಭ ಕಾವ್ಯಗಳು.

'ಮುಟ್ಟೆನು' ಎನ್ನುತ್ತಲೇ ಅಪ್ಪಿಕೊಳ್ಳುತ್ತಾನೆ
ಅಪ್ಪಿಕೊಳ್ಳುತ್ತಲೇ 'ಮುಟ್ಟೆನು' ಎನ್ನುತ್ತಾನೆ.

ಒಬ್ಬನು ಓಡಿಸುವವನು
ಮತ್ತೊಬ್ಬನು ಕದ ಹಾಕುವವನು.

ನಾನೋ,
ಎದೆಯ ಮೇಲೂ, ಗುಡಿಸಲ ಮೇಲೂ ಮುಸುಗಿಲ್ಲದವಳು
ನಿನ್ನ ದೇಹದ ಮೇಲೆ ಅಲ್ಲ
ನಿನ್ನ ಮನೆಯಲ್ಲಾಗಲೀ
ನೆರಳ ಕಂಡರೆ ನನಗೆ ಮತ್ಸರ.

ನಾಲ್ಕು ಗೋಡೆಗಳು ಬೇಕಿಲ್ಲ
ಆದರೆ ಒಂದು ನೆರಳು ಬೇಕು.
ಮಾನ ಮುಚ್ಚಿಕೊಳ್ಳಲು ಅಂಗೈ ಅಗಲ ನೆರಳು ಸಾಕು.

ದ್ವಾರ ಬಂಧಗಳು ಬೇಕಿಲ್ಲ
ಒಂದು ದ್ವಾರ ಮಾತ್ರ ಬೇಕು
ತಲೆಯೆತ್ತಿ ಒಳಬಂದರೂ ತಗಲದ ದ್ವಾರ ಬೇಕು.

ಬೆನ್ನತ್ತಿ ಬರುವ ಹಗಲ ಕಾವಲು
ಬಾಗಿಲಿನಿಂದಲೇ ಬಾಲ ಮಡಚಬೇಕು.

ನೀನು
ಮೈ ಮುಚ್ಚಿದ ಬಟ್ಟೆಯ ಹಕ್ಕು ಇಲ್ಲದವಳು.
ಹಾಗೆಂದು ಸೀರೆಗಳ ಸುಡಬೇಡ.
ಬೆಳ್ಳನೆಯ ನಿನ್ನ ವಿತಂತು ವಸ್ತ್ರಗಳ ಮೇಲಣ
ಕಪ್ಪು ಚುಕ್ಕಿಗಳೂ ನಾನೇ !

ನಿನ್ನ ಗೋಡೆಗಳ ಕೆಡವು
ಆದರೆ, ಅಂಗೈಗಳು ಹುಷಾರು.
ಅವುಗಳ ಮೇಲೆ ನಿನ್ನ ಗೋರಂಟಿಯ ನೆರಳುಗಳಿವೆ.

ಬಾಗಿಲಗಳ ಒದ್ದು ಬಿಡು
ಪಾದಗಳ ಕಾಪಾಡಿಕೋ
ಕತ್ತಲ ಧೂಳಿನ ಜೊತೆಗೆ ನನ್ನ ಬೆಳ್ಳಿ ಬೆಳದಿಂಗಳಿನ ಗೆಜ್ಜೆಗಳಿವೆ.

ಎಲ್ಲಿಯವರೆಗೆ
ಈ ಎದುರು ಬದುರು ಪಯಣಗಳು ?

ನಾಜೂಕಾದ ಕನಸುಗಳಲ್ಲಿ
ನಾಲ್ಕು ಕೈಗಳು ಕಲೆಯಲೇ ಇಲ್ಲ.

ನನ್ನವರೆಗೆ ಬಂದರೆ
ಎಲ್ಲವನೂ ಬಿಟ್ಟು ಕನಸೊಂದ ಹೇಳುವೆ.
ಕೆಂಪು ಕೆಂಪಾದ ಎರಡು ಸಂಜೆಗಳ ದೂರವನು
ಹಣ್ಣು ಹಣ್ಣಾದ ಎರಡು ತುಟಿಗಳ ದೂರಕ್ಕೆ
ಸರಿಮಾಡಿದಂತೆ.
ಆಗ –
ಅಡ್ಡಡ್ಡ ಕಿರುನಗೆಯು ಅರಳಲೇಬೇಕು

ಮೂಲ ತೆಲುಗು : ಸತೀಶ್ ಚಂದರ್
ಅನುವಾದ : ಗುರುಮೂರ್ತಿ ಪೆಂಡಕೂರು
ಕಾರ್ಯದರ್ಶಿ, ಯುವಕರ ಸಂಘ, ರಾಮನಗರ
ಹಗರಿಬೊಮ್ಮನಹಳ್ಳಿ -೫೮೩ ೨೧೨, ಬಳ್ಳಾರಿ ಜಿಲ್ಲೆ

# ಸ್ವತಂತ್ರ ಮನೋಧರ್ಮದ ಜಾತ್ಯತೀತ ಇತಿಹಾಸಕಾರ ಡಾ|| ಎಸ್. ಗೋಪಾಲ್

ಡಾ|| ಎಚ್. ಎಸ್. ಗೋಪಾಲ ರಾವ್

ಸುಮಾರು ಎಪ್ಪತ್ತು ವರ್ಷಗಳ ಸಾರ್ಥಕ ಜೀವನ ನಡೆಸಿದ ಇತಿಹಾಸಕಾರ ಡಾ|| ಎಸ್. ಗೋಪಾಲ್ ಅವರ ದೈಹಿಕ ಬದುಕು ಇದೇ ವರ್ಷದ ಏಪ್ರಿಲ್ ೨೦ ರಂದು ಕೊನೆಗೊಂಡಾಗ ಭಾರತವು ಒಬ್ಬ ಗಣ್ಯ ಇತಿಹಾಸಕಾರನನ್ನು ಕಳೆದುಕೊಂಡಿತು. ಕೆಲವರಿಗಾದರೂ ಈ ಮಾತು ಉತ್ಪ್ರೇಕ್ಷೆ ಎನಿಸಬಹುದು. ಅಂತಹ ಅಭಿಪ್ರಾಯಗಳನ್ನು ಸಹಜ ಎಂದು ಸ್ವೀಕರಿಸಿದರೆ, ಭಿನ್ನಾಭಿಪ್ರಾಯಗಳ ನಡುವೆ ಸತ್ಯವನ್ನು ಸಮೀಪಿಸುವ ಕೆಲಸ ಸುಲಭವಾಗಬಹುದು. ಚರ್ಚೆ ನಡೆದ ನಂತರ ಎಸ್. ಗೋಪಾಲ್ ಅವರನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗಬಹುದು. ಭಿನ್ನಾಭಿಪ್ರಾಯ ಮತ್ತು ಅದನ್ನು ಅನುಸರಿಸಿ ನಡೆಯುವ ಚರ್ಚೆಯು ಯಾವ ವಿಷಯ ಅಥವಾ ವ್ಯಕ್ತಿಯ ಬಗೆಗಾಗಲೀ ಒಂದು ನಿಶ್ಚಿತ ಅಭಿಪ್ರಾಯವನ್ನು ರೂಪಿಸಲು ಅನುವು ಮಾಡಿ ಕೊಡಬೇಕು. ಇಲ್ಲವಾದರೆ ಭಿನ್ನಾಭಿಪ್ರಾಯಗಳಿಗಾಗಲೀ, ಚರ್ಚೆಗಳಿಗಾಗಲೀ ಅರ್ಥ ದೊರೆಯಲಾರದು. ನಮ್ಮ ಅಭಿಪ್ರಾಯವೇ ಸರಿ ಎಂದು ಮೊದಲೇ ಮೊಂಡು ನಿರ್ಧಾರ ಮಾಡಿದ್ದರೆ ಚರ್ಚೆಗೆ ಬೆಲೆ ದೊರೆಯಲಾರದು ಮತ್ತು ಅಂತಹ ಚರ್ಚೆಯು ಅರ್ಥಹೀನವಷ್ಟೇ ಅಲ್ಲದೆ, ನೆಮ್ಮದಿಯನ್ನು ಹಾಳುಮಾಡುವ ಜಗಳವೂ ಆಗಿಬಿಡಬಹುದು. ಯಾವುದೇ ಚರ್ಚೆಯು ಮನಸ್ಸುಗಳನ್ನು ಕೆಡಿಸಿ, ನೆಮ್ಮದಿ ಹಾಳುಮಾಡುವುದಾದರೆ ಅಂತಹ ಚರ್ಚೆಗೆ ನಾವು ಇನ್ನೂ ಸಿದ್ಧರಾಗಿಲ್ಲ ಅಥವಾ ಮುಕ್ತ ಚರ್ಚೆಗೆ ನಾವು ಅನರ್ಹರು ಎಂದೇ ತಿಳಿಯಬೇಕಾಗುತ್ತದೆ. ಮಾತು ಮಾತು ಮಥಿಸಿ ನಾದದ ನವನೀತ ಬರಬೇಕೇ ಹೊರತು ದ್ವೇಷದ ವಿಷ ಬರಬಾರದು. ದ್ವೇಷದಿಂದ ಈವರೆಗೆ ಏನನ್ನಾದರೂ ಒಳ್ಳೆಯದನ್ನು ಸಾಧಿಸಿದ್ದೇವೆ ಎಂದು ಇತಿಹಾಸವನ್ನು ಸರಿಯಾಗಿ ಬಲ್ಲ ಯಾರೂ ಹೇಳಲಾರರು. ತಮಗೆ ಮಾತ್ರ ಪ್ರಿಯವಾಗುವಂತೆ ಇತಿಹಾಸವಿರಬೇಕು ಮತ್ತು ಅದೇ ಸತ್ಯ ಹಾಗೂ ಸಮಗ್ರ ಎಂದು ಮೊಂಡು ವಾದ ಮಾಡುವವರ ಜೊತೆ ಯಾವುದೇ ರೀತಿಯ ಮುಕ್ತ ಚರ್ಚೆಯೂ ವ್ಯರ್ಥಾಲಾಪವಾಗುತ್ತದೆ. 'ನಾವು ಹಿಡಿದ ಮೊಲಕ್ಕೆ ಮೂರು ಕೊಂಬಿದೆ' ಎಂದು ಹಠ ಹಿಡಿಯುವವರ ಜೊತೆಗೆ ವಾದವು ಅರ್ಥಹೀನವಾಗುತ್ತದೆ. ಇತಿಹಾಸದ ವಿಷಯದಲ್ಲಂತೂ ಅತಾರ್ಕಿಕ ವಿಚಾರಗಳಿಗೆ ಅವಕಾಶ ದೊರೆಯಬಾರದು. ಹಾಗೇನಾದರೂ ಅರ್ಥಹೀನವಾದ ವಿವಾದಗಳಿಗೆ ಅವಕಾಶ ದೊರೆತರೆ ಇತಿಹಾಸದ ಅರ್ಥವನ್ನೇ ಬದಲಿಸಬೇಕಾಗುತ್ತದೆ. ಇತಿಹಾಸವು ಸತ್ಯವಾದ ಅಥವಾ ಸತ್ಯಕ್ಕೆ ಸಮೀಪವಾದ ಸಂಗತಿಗಳನ್ನಷ್ಟೇ ದಾಖಲಿಸಬೇಕಾಗುತ್ತದೆ. ನಮಗೆ ಅಪ್ರಿಯ ಎಂಬ ಕಾರಣದಿಂದ ಹಿಂದಿನ ಕಹಿಯಾದ ಎಷ್ಟೋ ವಿಷಯಗಳನ್ನು ದಾಖಲಿಸದಿದ್ದರೆ ಇತಿಹಾಸಕಾರನ ಕರ್ತವ್ಯದಲ್ಲಿ ಲೋಪ ಆಗುತ್ತದೆ ಮತ್ತು ಮುಂದಿನ ಜನತೆಗೆ ನಾವು ವಿರೂಪಗೊಂಡ ಅಥವಾ ಅತಿಯಾಗಿ ಅಲಂಕೃತಗೊಂಡ ಇತಿಹಾಸವನ್ನು ವರ್ಗಾಯಿಸ ಬೇಕಾಗುತ್ತದೆ. ಹಾಗೆ ಇತಿಹಾಸವನ್ನು ದಾಖಲಿಸಿದ ಇತಿಹಾಸಕಾರನನ್ನು ದೇವಸ್ಥಾನದ ಪುರಾಣದ ಭಟ್ಟ ಎಂದೋ, ಆಸ್ಥಾನದ ವಿದೂಷಕ ಎಂದೋ ಪರಿಗಣಿಸಬೇಕಾಗುತ್ತದೆ. ಇತಿಹಾಸಕಾರನಲ್ಲಿ ಅತ್ಯಂತ ಮುಖ್ಯವಾಗಿ ಇರಬೇಕಾದದ್ದು ನಿರ್ಮಮಕಾರ. ಸಿಹಿ, ಕಹಿ, ಖಾರ, ಸಪ್ಪೆ ಯಾವ ರುಚಿಯಾದರೂ ನೈಷ್ಠಿಕ ಸನ್ಯಾಸಿಯಂತೆ ನಿರ್ಭಾವುಕನಾಗಿ ತಿನ್ನಬೇಕಾದ್ದು ಇತಿಹಾಸಕಾರನ ಕರ್ತವ್ಯ. ಭಾವುಕ ಇತಿಹಾಸಕಾರ ಎಂತಹ ಕೆಟ್ಟ ಅಡಿಗೆ ಮಾಡಿದರೂ, ಅದು ಕೆಡುಕನ್ನೇ ಮಾಡುತ್ತದೆ. ಭಾರತೀಯ ಇತಿಹಾಸಕಾರರಲ್ಲಿ ಕೆಲವರಾದರೂ ನಿರ್ಭಾವುಕ ಇತಿಹಾಸಕಾರರಿದ್ದಾರೆ; ಅಂತಹವರಲ್ಲಿ ಡಾ|| ಎಸ್. ಗೋಪಾಲ್ ಕೂಡಾ ಒಬ್ಬರು. ಈಗ ಅವರು ದಿವಂಗತರ ಸಾಲಿನ ಪ್ರತಿಮಾ ಗೃಹದಲ್ಲಿ ಸೇರಿಹೋಗಿದ್ದಾರೆ. ಅವರ ಅಭಿಪ್ರಾಯಗಳನ್ನು ಸ್ವೀಕರಿಸುವ ಮತ್ತು ನಿರಾಕರಿಸುವ ಸ್ವಾತಂತ್ರ್ಯ ಎಲ್ಲರಿಗೂ ಇದೆ. ಅವರ ಅಭಿಪ್ರಾಯಗಳನ್ನು ತಿಳಿಯುವ ಸ್ವಾತಂತ್ರ್ಯವೂ ಇದೆ.

ಭಾರತದ ಉಪರಾಷ್ಟ್ರಪತಿಯಾಗಿ ಮತ್ತು ರಾಷ್ಟ್ರಪತಿಯಾಗಿ ಮಾತ್ರವಲ್ಲದೆ ಆ ಕಾಲದ ಶ್ರೇಷ್ಠ ತತ್ವಶಾಸ್ತ್ರ ಬೋಧಕ ಎಂದೇ ಪ್ರಸಿದ್ಧರಾದ ಡಾ|| ಎಸ್. ರಾಧಾಕೃಷ್ಣನ್ ಅವರ ಮಗನಾದರೂ ತಂದೆಯ ನೆರಳಿನಲ್ಲಿ ಹೆಸರು ಮಾಡಿಕೊಳ್ಳಲು ಇಚ್ಛಿಸದ ಡಾ|| ಎಸ್. ಗೋಪಾಲ್ ಸ್ವತಂತ್ರರಾಗಿ ತಮ್ಮ ವಿಚಾರಗಳನ್ನು ಪ್ರಸ್ತುತಪಡಿಸಿದರು.

ಜೀವನ ಚರಿತ್ರೆಯನ್ನು ಇತಿಹಾಸ ನಿರೂಪಣೆಯ ಮಾಧ್ಯಮವಾಗಿ ಮಾಡಿಕೊಂಡದ್ದು ಡಾ|| ಎಸ್. ಗೋಪಾಲ್ ಅವರ ವಿಶೇಷತೆ. ಸಾಮಾನ್ಯವಾಗಿ ಜೀವನ ಚರಿತ್ರೆಯು ವ್ಯಕ್ತಿ ಪ್ರಶಂಸೆಗೆ ಒತ್ತು ಕೊಡುತ್ತದೆ. ಆತ್ಮ ಚರಿತ್ರೆಯಲ್ಲಿ ಸತ್ಯ ಎಷ್ಟು ಎಂಬ ಪ್ರಶ್ನೆ ಎದುರಾದರೆ, ಜೀವನ ಚರಿತ್ರೆಯಲ್ಲಿ ಉತ್ಪ್ರೇಕ್ಷೆಗೆ ಸಾಕಷ್ಟು ಅವಕಾಶಗಳಿರುತ್ತವೆ. ಅಂತಹುದರಲ್ಲಿ ಡಾ|| ಎಸ್. ಗೋಪಾಲ್ ಜೀವನ ಚರಿತ್ರೆಯನ್ನೇ ಇತಿಹಾಸ ನಿರೂಪಣೆಯ ಮಾಧ್ಯಮವನ್ನಾಗಿ ಬಳಸಿಕೊಂಡು ಅದರಲ್ಲಿ ಸಾಫಲ್ಯ ಪಡೆದರು ಎಂದು ತಿಳಿಯಲಾಗಿದೆ. ಈ ಬಗ್ಗೆಯೂ ಭಿನ್ನಾಭಿಪ್ರಾಯಗಳು ಇರಬಹುದು. ಡಾ|| ಎಸ್. ಗೋಪಾಲ್ ಮೂರು ಸಂಪುಟಗಳಲ್ಲಿ ನೆಹರೂ ಅವರ ಜೀವನ ಚರಿತ್ರೆಯನ್ನು ಬರೆದಿದ್ದಾರೆ. ಅದರಲ್ಲಿ ನೆಹರೂ ಅವರ ಜೀವನ ಚರಿತ್ರೆಯ ಮೂಲಕ ಭಾರತದ ಸ್ವಾತಂತ್ರ್ಯ ಪೂರ್ವದ ಮತ್ತು ಸ್ವಾತಂತ್ರ್ಯಾನಂತರದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಗಂಭೀರ ವಿವೇಚನೆ ಇದೆ. ಡಾ|| ಎಸ್. ಗೋಪಾಲ್ ಅವರ ಅಭಿಮಾನಿಗಳ ಪ್ರಕಾರ



ಜವಹರಲಾಲ್ ನೆಹರೂ ಅವರನ್ನು ಕುರಿತು ಡಾ|| ಎಸ್. ಗೋಪಾಲ್ ಬರೆದಿರುವ ಜೀವನ ಚರಿತ್ರೆಯು ಒಂದು ಉತ್ತಮ ಸಂಗ್ರಹ ಯೋಗ್ಯ ಐತಿಹಾಸಿಕ ಕೃತಿ. ಅದರಿಂದ ಡಾ|| ಎಸ್. ಗೋಪಾಲ್ ಹೆಸರು ಗಳಿಸಿದರು, ಪ್ರಸಿದ್ಧಿ ಪಡೆದರು.

ಡಾ|| ಎಸ್. ಗೋಪಾಲ್ ತಮ್ಮ ತಂದೆಯನ್ನು ಕುರಿತಂತೆಯೂ ಜೀವನ ಚರಿತ್ರೆ ಬರೆದಿದ್ದಾರೆ. ಅದರ ಬಗ್ಗೆ ವಿಪುಲವಾದ ಚರ್ಚೆ ನಡೆದಿದೆ. ಮಗನಾಗಿ ತಂದೆಯನ್ನು ಚಿತ್ರಿಸದೆ, ಒಬ್ಬ ಇತಿಹಾಸಕಾರನಾಗಿ ಡಾ|| ಎಸ್. ಗೋಪಾಲ್, ಡಾ|| ಎಸ್. ರಾಧಾಕೃಷ್ಣನ್ ಅವರನ್ನು ಪರಿಚಯಿಸುವ ಕೆಲಸ ಮಾಡಿದ್ದಾರೆ. ಯಾವುದೇ ಮುಚ್ಚುಮರೆಯಿಲ್ಲದ ನಿರ್ಭೀತ ಮನೋಭಾವದ ಜೀವನ ಚರಿತ್ರೆ ಅದು ಎಂಬ ಅಭಿಪ್ರಾಯವಿದೆ. ತಮ್ಮ ತಂದೆಯ ಕೆಲವು ದೌರ್ಬಲ್ಯಗಳನ್ನು ಸಮೀಪದಿಂದ ಕಂಡು ತಿಳಿಯುವ ಅವಕಾಶಗಳು ಡಾ|| ಎಸ್. ಗೋಪಾಲ್ ಅವರಿಗೆ ಇದ್ದ ಕಾರಣದಿಂದ ಮತ್ತು ಅವರು ಒಬ್ಬ ಇತಿಹಾಸಕಾರ ರಾದ್ದರಿಂದ ಅವುಗಳನ್ನೆಲ್ಲ ಓದುಗರಿಗೆ ತಿಳಿಸಿದ್ದಾರೆ ಎಂದೇ ಅರ್ಥೈಸುವುದು ಸರಿ ಎನಿಸಬಹುದು.

ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಓದುತ್ತಿದ್ದಾಗಲೇ ಅವರು ಕಾರ್ನ್‌ವಾಲಿಸ್ ಮತ್ತು ಸ್ಥಿರವಾದ ನೆಲೆಯನ್ನು

ಕುರಿತು ಬರೆದ ಪ್ರಬಂಧವು ಬಹುಮಾನದ ಜೊತೆಗೆ ಮನ್ನಣೆಯನ್ನೂ ಪಡೆಯಿತು. ನಂತರ ಅವರು ರಿಪ್ಪನ್ ಮತ್ತು ಇರ್ವಿನ್ ಅವರ ವೈಸ್‌ರಾಯಿ ಅಧಿಕಾರದ ಅವಧಿಯ ಬಗೆಗೂ ಸಂಶೋಧನೆ ಮಾಡಿದರು. ಭಾರತದಲ್ಲಿ ಬ್ರಿಟಿಷ್ ರಾಜನೀತಿ ಮತ್ತು ರಾಷ್ಟ್ರೀಯತೆಯ ಹುಟ್ಟಿನ ಅಧ್ಯಯನಕ್ಕೆ ತಳಪಾಯ ಹಾಕಿಕೊಟ್ಟವರು ಡಾ॥ ಎಸ್. ಗೋಪಾಲ್ ಎಂದು ತಿಳಿಯಲಾಗಿದೆ. ಭಾರತದ ವೃತ್ತಿಪರ ಇತಿಹಾಸಕಾರರಲ್ಲಿ ಡಾ॥ ಎಸ್. ಗೋಪಾಲ್ ಮೊದಲ ಗುಂಪಿನವರು ಎಂದು ವಿ. ಎಸ್. ದತ್ತ ತಿಳಿಸುತ್ತಾರೆ. ವ್ಯಕ್ತಿ ಜೀವನದ ಮೂಲಕ ಸಮಾಜ ಮತ್ತು ಅದರ ಎಲ್ಲ ಮುಖಗಳನ್ನು ತಿಳಿಯುವ ಪ್ರಯತ್ನವನ್ನು ಮಾಡಿದವರಲ್ಲಿ ಡಾ॥ ಎಸ್. ಗೋಪಾಲ್ ಮುಖ್ಯರು. ವೃತ್ತಿಪರರಲ್ಲದ ಇತಿಹಾಸಕಾರರ ಬಗ್ಗೆ ಡಾ॥ ಎಸ್. ಗೋಪಾಲ್ ಅವರಿಗೆ ಒಲವಿರಲಿಲ್ಲ. ಕೇವಲ ವೃತ್ತಿಪರ ಇತಿಹಾಸಕಾರರು ಮಾತ್ರ ಇತಿಹಾಸವನ್ನು ಕುರಿತ ಸಂಶೋಧನೆ ಮತ್ತು ವ್ಯಾಖ್ಯಾನ ಮಾಡಬೇಕೆಂಬುದು ಡಾ॥ ಗೋಪಾಲ್ ಅವರ ಅಭಿಪ್ರಾಯವಾಗಿದ್ದಂತೆ ತೋರುತ್ತದೆ.

ನೆಹರೂ ಅವರ ಅಭಿಮಾನಿಯಾಗಿದ್ದ, ತಮ್ಮ ತಂದೆಯ ದೌರ್ಬಲ್ಯಗಳನ್ನು ಬಹಿರಂಗಗೊಳಿಸಲು ಸಂಕೋಚಪಡದ ಡಾ॥ ಎಸ್. ಗೋಪಾಲ್ ತಮ್ಮ ಬದುಕಿನ ಆರಂಭದ ದಿನಗಳಲ್ಲಿ ಉಲ್ಲಾಸದಿಂದ ಜನರ ಜೊತೆ ಬೆರೆಯುತ್ತಿದ್ದರು; ಆಗಲೂ ಅವರು ಬೇರೆಯವರ ಮಾತುಗಳನ್ನು ಕೇಳುವುದರಲ್ಲಿ ಆಸಕ್ತರಾಗಿರುತ್ತಿದ್ದರು. ಆದರೆ ತಮ್ಮ ಬದುಕಿನ ಕೊನೆಯ ದಿನಗಳಲ್ಲಿ ಅವರು ಹೆಚ್ಚು ಅಂತರ್ಮುಖಿಯಾದರು ಎಂದು ಅವರನ್ನು ಸಮೀಪದಿಂದ ಬಲ್ಲವರೆಲ್ಲರೂ ಹೇಳುತ್ತಾರೆ. ಅದಕ್ಕೆ ಅವರ ಅನಾರೋಗ್ಯವೇ ಬಹು ಮುಖ್ಯ ಕಾರಣ ಎಂದು ತಿಳಿಯಲಾಗಿದೆ. ಜನರ ಗುಂಪಿನಿಂದ ದೂರವಿರಲು ಪ್ರಯತ್ನಿಸುತ್ತಲೇ ಇದ್ದ ಅವರು ತಮಗೆ ಪ್ರಶಸ್ತಿಯ ಗೌರವಗಳು ಸಂದ ಸಂದರ್ಭದಲ್ಲೂ ಪ್ರಚಾರದಿಂದ ದೂರವಿರುತ್ತಿದ್ದರು. ಡಾ॥ ಎಸ್. ಗೋಪಾಲ್ ಅವರಿಗೆ ಪದ್ಮವಿಭೂಷಣ ಪ್ರಶಸ್ತಿಯ ಗೌರವ ದೊರೆತಾಗ, ಅವರು ಸಮಾರಂಭಕ್ಕೆ ಹೋಗಲು ಒಪ್ಪಿರಲಿಲ್ಲ ಎಂದು ತಿಳಿಯಲಾಗಿದೆ.

ಜವಹರಲಾಲ್ ನೆಹರೂ ವಿಶ್ವವಿದ್ಯಾಲಯದ ಇತಿಹಾಸ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದ ಡಾ॥ ಎಸ್. ಗೋಪಾಲ್ ಭಾರತದಲ್ಲಿ ಬ್ರಿಟಿಷ್ ಆಡಳಿತ ಕಾಲದ ಮಾತ್ರವಲ್ಲದೆ ಸ್ವತಂತ್ರ ಭಾರತದ ಇತಿಹಾಸದ ವಿಚಾರದಲ್ಲಿ ಹೆಚ್ಚು ಆಸಕ್ತಿ ವಹಿಸಿದ್ದರು. ಸಮಕಾಲೀನ ವಿಚಾರಗಳನ್ನು ಇತಿಹಾಸಕಾರನ ಕಣ್ಣುಗಳಲ್ಲಿ ಕಾಣುವ ಮತ್ತು ವಿಶ್ಲೇಷಿಸುವ ಮನೋಭಾವದ ಡಾ॥ ಎಸ್. ಗೋಪಾಲ್ ೧೯೪೮ರಲ್ಲಿ ಮಹಾತ್ಮಾ ಗಾಂಧೀಜಿಯವರ ಹತ್ಯೆಯನ್ನು ಕುರಿತಂತೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ, ಗಾಂಧೀಜಿಯವರು ಅಹಿಂಸೆಯನ್ನು ಒಂದು ಅಸ್ತ್ರವನ್ನಾಗಿಯೂ ಬಳಸಬಹುದೆಂದು ಭಾರತಕ್ಕೆ ಮಾತ್ರವಲ್ಲದೆ, ಇಡೀ ವಿಶ್ವಕ್ಕೆ ತಿಳಿಸಿದ ಹಿರಿಯ ಜೀವ ಎಂದು ಬಣ್ಣಿಸಿ, ಅಂತಹವರನ್ನು ಕೊಂದದ್ದು ಒಂದು ದುರಂತ ಎಂದು ವ್ಯಥೆ ಪಟ್ಟಿದ್ದಾರೆ. ಭಾರತವನ್ನು ಗಣರಾಜ್ಯವಾಗಿ ರಚಿಸಿದ್ದು ಒಂದು ಮಹತ್ವದ ವಿಚಾರ ಎಂದಿದ್ದಾರೆ. ೧೯೫೬ರಲ್ಲಿ ಸ್ಯೂಯಜ್ ವಿಚಾರದಲ್ಲಿ ನೆಹರೂ ಸ್ವೀಕರಿಸಿದ ಅಲಿಪ್ತ ಅಥವಾ ತಾಟಸ್ಥ್ಯ ನೀತಿಯನ್ನು ಡಾ॥ ಎಸ್. ಗೋಪಾಲ್ ಮೆಚ್ಚಿದ್ದಾರೆ. ೧೯೭೧ರಲ್ಲಿ ಪಾಕಿಸ್ತಾನದ ವಿಭಜನೆ ಮತ್ತು ಬಾಂಗ್ಲಾ ದೇಶದ ನಿರ್ಮಾಣದಲ್ಲಿ ಇಂದಿರಾ ಗಾಂಧಿ ಅವರ ಪಾತ್ರವನ್ನು ಮೆಚ್ಚುತ್ತಲೇ, ೧೯೭೫ರಲ್ಲಿ ಆಕೆ ಘೋಷಿಸಿದ ತುರ್ತು ಪರಿಸ್ಥಿತಿಯನ್ನು ಖಂಡಿಸಿದ್ದಾರೆ. ರಾಜೀವ್ ಗಾಂಧಿ, ಪಿ. ವಿ. ನರಸಿಂಹರಾವ್ ಅವರ ಆಳ್ವಿಕೆಯ ಅವಧಿಯಲ್ಲಿ ಅವರೇ ಭ್ರಷ್ಟಾಚಾರದ ಆಪಾದನೆಗೆ ಗುರಿಯಾದದ್ದನ್ನು ನೆನಪು ಮಾಡಿಕೊಳ್ಳುತ್ತಾ ಅವರ ನಂತರ ಕಾಂಗ್ರೆಸ್ ಪಕ್ಷವು ಅವನತಿಯ ಹಾದಿಯಲ್ಲಿ ನಡೆದಿದೆ ಎಂದು ಸೂಚಿಸಿದ್ದಾರೆ. ಜನತೆಯ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಪ್ರಯತ್ನಿಸಿದ ಡಾ॥ ಮನ ಮೋಹನ ಸಿಂಗ್ ಅವರ ಸೋಲನ್ನು ಗಂಭೀರವಾಗಿ ಪರಿಗಣಿಸಿ, ಅದು ಒಂದು ದೊಡ್ಡ ನಷ್ಟ ಎಂದು ತಿಳಿಸುತ್ತಾರೆ. ಕಾಂಗ್ರೆಸ್ ಪಕ್ಷದ ಅವನತಿಯು, ಹಿಂದೂ ಧರ್ಮವನ್ನು ಉಗ್ರವಾಗಿ ಪ್ರತಿಪಾದಿಸುವ ಭಾರತೀಯ ಜನತಾ ಪಕ್ಷದ ಪ್ರಾಬಲ್ಯಕ್ಕೆ ಕಾರಣವಾಗಿದೆ ಎಂಬುದು ಡಾ॥ ಎಸ್. ಗೋಪಾಲ್ ಅವರ ಅಭಿಪ್ರಾಯ. ಭಾರತ ಮತ್ತು ಪಾಕಿಸ್ತಾನಗಳೆರಡೂ ಅಣ್ವಸ್ತ್ರವನ್ನು ಹೊಂದಿರುವ ರಾಷ್ಟ್ರಗಳಾಗಿರುವುದರಿಂದ ಕಾಶ್ಮೀರದ ಸಮಸ್ಯೆಯು ಹೇಗೆ ಬಗೆಹರಿಯುತ್ತದೆ ಎಂಬ ಬಗ್ಗೆ ಡಾ॥ ಎಸ್. ಗೋಪಾಲ್ ಆತಂಕ ವ್ಯಕ್ತಪಡಿಸಿದ್ದಾರೆ.

ಇತಿಹಾಸವನ್ನು ಆಯಾ ಕಾಲದ ಒಂದು ಮಧ್ಯಂತರ ವರದಿ ಮಾತ್ರ ಎಂದು ಪರಿಗಣಿಸುವ ಡಾ॥ ಎಸ್. ಗೋಪಾಲ್, ಆ ವರದಿಯನ್ನು ಖಚಿತವಾದ ಹೊಸ ವಿಚಾರಗಳು ದೊರೆತಂತೆಲ್ಲಾ ಪರಿಷ್ಕರಿಸಲು ಅವಕಾಶವಿದೆ ಎಂದು ತಿಳಿಸುತ್ತಾರೆ. ಇತಿಹಾಸವು ನಿಂತ ನೀರಲ್ಲ; ಅದು ಚಲನಶೀಲ ಎಂಬುದು ಡಾ॥ ಎಸ್. ಗೋಪಾಲ್ ಅವರ ನಿಲುವು. ಇತಿಹಾಸವನ್ನು ಪ್ರವೃತ್ತಿಯಾಗಿ ಮಾತ್ರ ಸ್ವೀಕರಿಸಿದ ವ್ಯಕ್ತಿಗಳ ಅಭಿಪ್ರಾಯಗಳನ್ನು ಡಾ॥ ಎಸ್. ಗೋಪಾಲ್ ಪುರಸ್ಕರಿಸುತ್ತಿರಲಿಲ್ಲ. ಶಿಷ್ಯರನ್ನು ಸೃಷ್ಟಿಸದ ಡಾ॥ ಗೋಪಾಲ್ ಅವರಿಗೆ ಇದ್ದ ಸ್ನೇಹಿತರ ಸಂಖ್ಯೆ ಅಪಾರ. ಆ ಸ್ನೇಹಿತರೆಲ್ಲರೂ ವೃತ್ತಿಪರ ಇತಿಹಾಸಕಾರರು ಎಂಬುದನ್ನು ಮರೆಯುವಂತಿಲ್ಲ.

ಇತಿಹಾಸ ಮತ್ತು ಪುರಾಣಗಳ ನಡುವೆ ಇರುವುದು ಒಂದು ಸಣ್ಣಗೆರೆ ಎಂಬ ಅಭಿಪ್ರಾಯದ ಡಾ॥ ಎಸ್. ಗೋಪಾಲ್ ಕಳೆದ ಮೂವತ್ತು ವರ್ಷಗಳಿಂದ ಮಾತ್ರ ಇತಿಹಾಸವನ್ನು ವೈಜ್ಞಾನಿಕವಾಗಿ ಅಭ್ಯಾಸ ಮಾಡಲಾಗುತ್ತಿದೆ ಎಂದು ತಿಳಿದಿದ್ದರು. ಆದರೆ ಸ್ವತಂತ್ರ ದೇಶದಲ್ಲೂ ರಾಜಕಾರಣಿಗಳು ಇತಿಹಾಸವನ್ನು ತಮ್ಮ ರಾಜಕೀಯ ಧ್ಯೇಯ ಮತ್ತು ಸಿದ್ಧಾಂತಗಳ ಪ್ರತಿಪಾದನೆ ಮತ್ತು ಬಲವರ್ಧನೆಗೆ ಬಳಸಿಕೊಳ್ಳುತ್ತಿದ್ದಾರೆ ಎಂಬುದು ಅವರ ಆಪಾದನೆಯಾಗಿತ್ತು. ಇತಿಹಾಸವನ್ನು ಒಂದು ಶಿಸ್ತಾಗಿ ಪರಿಗಣಿಸಬೇಕಾದ್ದು ಅವಶ್ಯಕ ಎಂಬುದು ಅವರ ಅಭಿಪ್ರಾಯ. ಖಗೋಳ ಶಾಸ್ತ್ರದಿಂದ ಜ್ಯೋತಿಷ್ಯ ಶಾಸ್ತ್ರವು ಭಿನ್ನವಾಗಿರುವಂತೆ, ರಸಾಯನ ಶಾಸ್ತ್ರವು ರಸವಿದ್ಯೆಯಿಂದ ಭಿನ್ನವಾಗಿರುವಂತೆ ಇತಿಹಾಸವು ಪುರಾಣದಿಂದ ಭಿನ್ನ ಎಂಬುದು ಡಾ॥ ಎಸ್. ಗೋಪಾಲ್ ಅವರ ಅಭಿಪ್ರಾಯವಾಗಿತ್ತು. ರಾಜಕಾರಣಿಗಳಿಗೆ ಈ ವ್ಯತ್ಯಾಸ ಅರ್ಥವಾಗುವುದಿಲ್ಲ ಅಥವಾ ತಮ್ಮ ಅನುಕೂಲಕ್ಕೆ ಯಾವ ವಿಷಯವನ್ನಾದರೂ ಬಳಸಿಕೊಳ್ಳುವ ಹುನ್ನಾರ ಅವರದು ಎಂದು ಡಾ॥ ಗೋಪಾಲ್ ಅವರ ನಂಬಿಕೆ. ಜರ್ಮನಿಯ ಇತಿಹಾಸದಿಂದ ಜ್ಯೂಗಳನ್ನು ಹಿಟ್ಲರ್ ತೆಗೆಸಿದ. ಮುಸ್ಸೋಲಿನಿಯು ಇಟಲಿಯ ಇತಿಹಾಸವನ್ನು ಪರಿಷ್ಕರಿಸಲು ಆದೇಶಿಸಿದ್ದ. ಇವುಗಳನ್ನೆಲ್ಲ ಬಹಳ ಗಂಭೀರವಾಗಿ ಡಾ॥ ಗೋಪಾಲ್ ಗಮನಿಸಿದ್ದರು. ವಿದ್ವತ್ ಕ್ಷೇತ್ರಕ್ಕೆ ರಾಜಕಾರಣಿಗಳು ಪ್ರವೇಶಿಸಿದರೆ ಯಾವುದೇ ಶಾಸ್ತ್ರ ಕ್ಷೇತ್ರವೂ ರಾಜಕೀಯದಿಂದ ಬೇರೆ ಇರಲು ಸಾಧ್ಯವಿಲ್ಲ ಎಂಬ ಆತಂಕ ಡಾ॥ ಗೋಪಾಲ್ ಅವರಿಗಿತ್ತು. ವೃತ್ತಿಪರ ಇತಿಹಾಸಕಾರರಲ್ಲದವರು ಇತಿಹಾಸ ಕ್ಷೇತ್ರಕ್ಕೆ ಪ್ರವೇಶಿಸಿದರೆ ಏನು ಅನಾಹುತ ಆಗಬಹುದೋ ಅದೇ ರೀತಿಯ ಅನಾಹುತ ಇತಿಹಾಸ ಕ್ಷೇತ್ರವನ್ನು ರಾಜಕಾರಣಿಗಳು ಪ್ರವೇಶಿಸಿದರೂ ಆಗುತ್ತದೆ ಎಂಬ ಖಚಿತ ಅಭಿಪ್ರಾಯ ಡಾ॥ ಗೋಪಾಲ್ ಅವರದಾಗಿತ್ತು. ಅದರಲ್ಲೂ ಅಧಿಕಾರದಲ್ಲಿರುವ ರಾಜಕಾರಣಿಗಳು ಇತಿಹಾಸ ಕ್ಷೇತ್ರವನ್ನು ಪ್ರವೇಶಿಸಿದರಂತೂ, ಅದರ ಪರಿಣಾಮ ತುಂಬಾ ಘೋರವಾಗಿರುತ್ತದೆ ಎಂದು ಡಾ॥ ಗೋಪಾಲ್ ತಿಳಿದಿದ್ದರು.

ತನ್ನದು ನಾಗರಿಕ ಹಕ್ಕುಗಳನ್ನು ರಕ್ಷಿಸುವ ಗುರಿ ಎಂದು ಹೇಳುತ್ತಲೇ ಅಧಿಕಾರಕ್ಕೆ ಬಂದ ಜನತಾ ಸರ್ಕಾರವು, ತಾನು ಅಧಿಕಾರಕ್ಕೆ ಬಂದ ಹೊಸತರಲ್ಲೇ ಇತಿಹಾಸದ ಕೆಲವು ಪಠ್ಯ ಪುಸ್ತಕಗಳನ್ನು ಬಹಿಷ್ಕರಿಸಿತು. ಇಂತಹ ಬಹಿಷ್ಕಾರದ ಸಂದರ್ಭದಲ್ಲಿ ಸರ್ಕಾರವನ್ನು ಸಮರ್ಥಿಸಿದ ಕೆಲವು ಇತಿಹಾಸಕಾರರನ್ನು ಡಾ॥ ಗೋಪಾಲ್ ಪ್ರತಿಭಟಿಸಿದರು.

ಇತಿಹಾಸದ ನಿರೂಪಣೆ ಮಾಡುವಾಗ ಧರ್ಮವನ್ನು ಹೊರತುಪಡಿಸಲಾಗುವುದಿಲ್ಲ. ಆಯಾ ಸಂದರ್ಭಗಳಲ್ಲಿನ ಧಾರ್ಮಿಕ ವಿರಸ ಅಥವಾ ಸಮನ್ವಯಗಳನ್ನು ವಿವರಿಸುವುದು ಅವಶ್ಯಕ. ಆದರೆ ಅಂತಹ ಯಾವ ವಿವರಣೆಯೂ ಧಾರ್ಮಿಕ ವಿರಸಕ್ಕೆ ಕಾರಣವಾಗ ಬಾರದು. ನಡೆದ ಘಟನೆ ಅಹಿತಕರವಾಗಿತ್ತು ಎಂಬುದನ್ನು ಅರ್ಥ ಮಾಡಿಕೊಂಡು ಅಂತಹ ಘಟನೆಗಳು ಮತ್ತೆ ಸಂಭವಿಸದಂತೆ ಎಚ್ಚರ ವಹಿಸುವುದು ಅವಶ್ಯಕ. ಭಾರತೀಯ ಇತಿಹಾಸವನ್ನು ಯಾವುದೇ ಒಂದು ಧರ್ಮದ ಹಿನ್ನೆಲೆಯಲ್ಲಿ ಮಾತ್ರ ಅರ್ಥೈಸುವುದು ಸಮರ್ಪಕ ಆಗಲಾರದು.

ಇತಿಹಾಸವನ್ನು ಆಯಾ ಕಾಲದ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳಬೇಕೇ ಹೊರತು, ಇಂದಿನ ಸ್ಥಿತಿ-ಗತಿಗಳನ್ನು ಅಲ್ಲಿಗೆ ಅನ್ವಯಿಸುವುದು ಅಥವಾ ಅಂದಿನ ಸ್ಥಿತಿ-ಗತಿಗಳನ್ನು ಇಂದಿಗೆ ಅನ್ವಯಿಸುವುದು ಸರಿಯಲ್ಲ ಎಂಬುವುದು ಡಾ॥ ಗೋಪಾಲ್ ಅವರ ನಿಲುವು. ರಾಷ್ಟ್ರೀಯ ಚಳುವಳಿಯಿಂದ ಪ್ರೇರಣೆ ಪಡೆದ ಭಾರತೀಯ ಇತಿಹಾಸಕಾರರು, ಐರೋಪ್ಯ ಇತಿಹಾಸಕಾರರು ಭಾರತದ ಇತಿಹಾಸದ ಬಗ್ಗೆ ಮಾಡಿದ್ದ ವ್ಯಾಖ್ಯಾನವನ್ನು ತಿರಸ್ಕರಿಸಿದ್ದು ಸಮಂಜಸವಾಗಿತ್ತು; ಆದರೆ ಅದು ಧಾರ್ಮಿಕ ದುರಭಿಮಾನಕ್ಕೆ ಕಾರಣವಾದದ್ದು ಒಂದು ದುರಂತ ಎಂಬುದು ಡಾ॥ ಗೋಪಾಲ್ ಅವರ ಅಭಿಪ್ರಾಯ.

(ಮುಂದಿನ ಘಟಕ್ಕೆ)

# ಹಿಪ್ಪೆಯ ಮರದ ನೆನಪಿನಲ್ಲಿ

ನಮ್ಮ ವಾಸದ ಮನೆ ಐದು ದಶಕದ ಪೂರ್ವದಿಂದಲೂ ತೋಟದಲ್ಲಿದ್ದು ನಾವು ''ತೋಟದ ಮನೆ'' ಯವರೆಂದೇ ಊರವರ ಬಾಯಲ್ಲಿ. ನನ್ನ ಹುಟ್ಟಿದ ಮೊದಲಿಂದ ಮನೆಯ ಪೂರ್ವಕ್ಕಿದ್ದ ಹಿಪ್ಪೆಯ ಮರ ಈಗಿಲ್ಲ. ಕೇವಲ ನೆನಪು. ಹಂಪೆಯಂತೆ. ನನ್ನ ಬುದ್ಧಿ ಬಲ್ಲ ದಿನದಿಂದಲೂ ನೋಡಿದ್ದೇನೆ, ಆನಂದಿಸಿದ್ದೇನೆ, ಆಡಿದ್ದೇನೆ ನೆರಳಲ್ಲಿ, ಗುಂಡಿಯ ತೋಡಿ ಗೋಲಿಯನ್ನು ಕೊಂಬೆಗೆ ಹಗ್ಗ ಇಲ್ಲದೆ ಅಂಬಳ್ಳಿ ಬಿಗಿದು ಜೋಕಾಲಿಯನ್ನು ಜೀಕಿ ಖುಷಿಪಟ್ಟಿದ್ದೇನೆ. ಅದೆಷ್ಟು ಮದರಾಸು, ಮೈಸೂರು ಗುನ್ನ ಬಿದ್ದಿವೆಯೋ ಬುಗುರಿಗಳಿಗಿಲ್ಲಿ ಲೆಖ್ಖ ಸಿಗದು. ಈ ಮರ ನಮ್ಮಜ್ಜನ ಸೋದರನದ್ದೇ. ಹಾದಿ ಬದಿಯಲ್ಲಿತ್ತು. ಹೊಲದ ಮೂಲೆಯಲ್ಲಿ ರಾಜನಂತೆ ರಾರಾಜಿಸಿತ್ತು. ನೂರಾರು ಅಂಕುಡೊಂಕಿನ ಕೊಂಬೆರೆಂಬೆಗಳ ಕೊಡೆ ಬಿಚ್ಚಿ ಆಗಸದ ಕಡೆ ಮೊಗ ಮಾಡಿ ಬೆಳೆಯುತ್ತಿತ್ತು. ಆಗಿನ ನನ್ನಂತೆ. ಅದೆಷ್ಟು ಇರುಳ ಹಕ್ಕಿಗಳು ರಾತ್ರಿಯಿಡೀ ಕಿಚಪಿಚ ಮಾಡುತ್ತ ಹಣ್ಣುಗಳನ್ನು ತಿಂದು ಬೀಜಗಳನ್ನು ಉದುರಿಸಿಲ್ಲ! ಕೆಲವನ್ನು ಪಕ್ಕದ ತೆಂಗಿನ ಮರಗಳಡಿ ಬೀಳಿಸಿದ್ದುದು. ಈ ನೆನಪು ಸದಾ ಮನದಲ್ಲಿ ಹಚ್ಚ ಹಸುರಾಗಿದೆ. ಮಳೆ ಬಂದಾಗ ಆಸರೆಯ ಬಯಸಿ ಎಷ್ಟು ಜನ ಬಂದು ನಿಂತಿಲ್ಲ. ನಮ್ಮ ಮನೆಯ ಎತ್ತುಗಳಿಗೆ ಲಾಳ ಕಟ್ಟಿಸಿದ್ದು, ನಾನು ಮೊಳೆಯ ತುಂಡುಗಳನ್ನು ಹುಡುಕುತ್ತಿದ್ದುದ್ದು, ನೇಗಿಲು, ಕುಂಟೆ, ಈಚು, ಮೇಣೆಗಳನ್ನು ಬಡಗಿ ಕೆತ್ತಿದ್ದು ನುಣುಪಾದ ಚಕ್ಕೆಗಳನ್ನಾರಿಸಿ 'ಬುರ್' ಎನ್ನುತ್ತಾ ಬಗ್ಗಿ ನೂಕುತ್ತಾ ''ಯಾರ್‍ರೀ ಅರಸೀಕೆರೆ-ಹುಳಿಯಾರು'' ಎಂದು ಓಡಾಡಿದ್ದು. ನಮ್ಮೂರ ಹಟ್ಟಿಯ ''ಉಗ್ರಸೇನ''ನ, ಅಷ್ಟೇ ಏಕೆ ಊರವರ ಕುರಿ ಮೇಕೆಗಳು ಮರದ ಸುಗಂಧ ವಾಸನೆಯ ಹೂವುಗಳಿಗೆ ಅಷ್ಟೊಂದು ದೂರದಿಂದಲೇ ಓಡೋಡಿ ಬಂದು ಎಲೆ, ಚಿಗುರು, ಹೂ, ಕಾಯಿಗಳನ್ನು ದಿನವೂ ಹುಡುಕಿ ತಿನ್ನುತ್ತಿದ್ದ ದೃಶ್ಯ ಕಣ್ಣಿಗೆ ಕಟ್ಟಿದಂತಿದೆ. ಅವರೆಲ್ಲ ಕರೆದುಕೊಟ್ಟ ಹಾಲನ್ನು ನನ್ನ 'ಕುನ್ನ' ಮರಿಗೆ ಕುಡಿಸಿದ್ದು ಅವ್ವ ಮಾಡಿಕೊಟ್ಟ ತಂಗಡೆ ಹೂವಿನ ಟೀಯನ್ನು ಚಪ್ಪರಿಸಿದ್ದು. ನಮ್ಮ ಮನೆಗೆ ಬರುತ್ತಿದ್ದ ನೆಂಟರಿಷ್ಟರ ಅದೆಷ್ಟು ಗಾಡಿಗಳಿಗೆ ತಂಗುದಾಣವಾಗಿತ್ತು. ಎತ್ತುಗಳಿಗೆ ಆಸರೆಯ ನೀಡಿತ್ತು. ಮಣ್ಣು ಕಲ್ಲುಗಳನ್ನೇರುತ್ತಿದ್ದ ನಮ್ಮ ಕೀಲು ಗಾಡಿ ನಿತ್ಯ ಇಲ್ಲಿಯೇ ಠಿಕಾಣೆ. ದಾರಿಹೋಕ ಅದೆಷ್ಟು ಜನ ಮರದ ನೆರಳಲ್ಲಿ ಕುಳಿತು ತಾಂಬೂಲ ಮೆದ್ದಿಲ್ಲ, ದಣಿವಾರಿಸಿಕೊಂಡಿಲ್ಲ! ಬಾಯಾರಿದವರಿಗೆ ತುಂಬಿದ ಕುಂಭದೊಡನೆ ಅವ್ವನಾಣತಿ ಯಂತೆ ಚೆಂಬು ಕೊಟ್ಟಿಲ್ಲ. ನನ್ನ ಅತ್ತೆ, ಅಕ್ಕತಂಗಿಯರ ಮದುವೆಗಳಲ್ಲಿ ಬಿಡದಿಯ ಮನೆಯಾಗಿ ಜಮಖಾನೆ ಹಾಸಿಲ್ಲ. ಪೆಟ್ರೋಮ್ಯಾಕ್ಸ್ ಹಿಡಿದಿಲ್ಲ!

ಈಗ ಮರವಿಲ್ಲ. ಮರದೊಡೆಯ ಕಡಿಸೇಬಿಟ್ಟ. ದೊಪ್ಪೆಂದು ನೆಲಕ್ಕೆ ಉರುಳಿಬಿದ್ದ ದಿನ ಲೋಕದ ಹಸಿರೇ ಬಿದ್ದ, ಉಸಿರೇ ಹೋದ, ಯಾತನೆ ಮನಕ್ಕೆ. ಇದೀಗ ನಮ್ಮ ಮನೆಯ ಮುಂದೆ ನೆರಳು ಬೀಳುತ್ತಿಲ್ಲ. ಬಿದ್ದರೂ ಅದು ಆಚೀಚೆ ಇರುವ ತೆಂಗಿನ ಮರಗಳದ್ದು. ಈ ಮರದ ಪಕ್ಕಕ್ಕಿರುವ 'ಸೂಸಿಯ ಪಟ್ಟೆ'ಯಲ್ಲಿಯೇ ನಾನು ಮನೆಯಾಳು ತಂದುಕೊಟ್ಟಿದ್ದ ಮೊಲದ ಮರಿ ಮೇಯಿಸಿ ಸಾಕಿದ್ದು. ಚಿಗುರುಗರಿಕೆಗೆ ಮಂಕರಿ ಕವುಚಿ ಶಾಲೆಗೆ ಹೋಗುತ್ತಿದ್ದೆ. ಮರಿ ಕೆಲವು ದಿನವಿದ್ದು ಮತ್ತೊಂದು ದಿನ ಮಂಗಮಾಯವಾಗಿ ನಮ್ಮ ಮನೆಯ ಬೆಕ್ಕಿಗಾಹಾರವಾಗಿ ಈಗಲೂ ಮನ ಮುದುಡಿಹೋಗುತ್ತದೆ. ಹಿಪ್ಪೆಯ ಮರ ನಿಜಕ್ಕೂ ಮನೆಯಂದವನ್ನು ಹೆಚ್ಚಿಸಿ ಮೆರುಗು ನೀಡಿತ್ತು. ಕಡಿದ ದಿನ ಮನ ಮರಗಟ್ಟಿ ಹೋಗಿತ್ತು. ಅಂಥ ಮರ! ಮರವನ್ನು ಕಡಿಯುವುದುಂಟೆ? ಪ್ರಾಣವಾಯುವಿನ ಆಗರವಾದ ಮರವನ್ನು ಸುಲಭವಾಗಿ ಬೆಳೆಸಲಾದೀತೇ? ಶ್ರಮವೆಷ್ಟು ಪಡಬೇಕು? ಬೆವರೆಷ್ಟು ಸುರಿಸಬೇಕು! ಅದರ ರಕ್ಕಸ ನೆರಳು ನಮ್ಮ ಮನೆ ಮುಂದೆ ಈಗಿಲ್ಲ. ಬರಿ ಬೆಂಕಿ ಬಿಸಿಲಿನಾಟ. ಇರುಳ ಹಕ್ಕಿಗಳ ಸದ್ದುಗದ್ದಲವಿಲ್ಲ. ಹೂವಿನ ಕಡು ಸುಗಂಧ ವಾಸನೆಗೆ ನನ್ನಾಕೆಗೆ ತಲೆನೋವಿಲ್ಲ. ಅಂಗಡಿಯಿಂದ ಅನಾಸಿನ್ನನ್ನು ತರುವ ಅಗತ್ಯವಿಲ್ಲ. ಅದರ ಪಕ್ಕದಲ್ಲಿದ್ದ ನಮ್ಮ ತೋತಾಪುರಿ ಮಾವು ಸಿಕ್ಕಾಪಟ್ಟೆ ಕಾಯಿಬಿಟ್ಟು ಬಿರುಗಾಳಿ ಮಳೆಗೆ ಮುರಿದುಬಿದ್ದು ಹಿಪ್ಪೆಯ ಮರದ ಜೊತೆ ಇತಿಹಾಸ ಸೇರುವುದೇ?

ಹಿಪ್ಪೆಯ ಮರ ಚಿಗುರುವಾಗ ಬಿದ್ದ ಹಣ್ಣೆಲೆಗಳು ನಮ್ಮ ಸೂಸಿಯ ಪಟ್ಟೆಯಲ್ಲಿ ಬಿದ್ದ ಅಪ್ಪ ಹೇಳಿದಂತೆ ಕುರಂಬಾಳೆ ಕುಂಚಿಗೆಯಲ್ಲಿ ಗುಡಿಸಿ ತಿಪ್ಪೆಗೆ ಹಾಕಿದ್ದುಂಟು. ಮರದೊಡೆಯರೆಂದೂ ಆಕ್ಷೇಪಿಸಲಿಲ್ಲ! ನಿಜಕ್ಕೂ ದೊಡ್ಡತನ! ಈಗ ಕುರಿ ಮೇಕೆಗಳ ಸಪ್ಪಳವಿಲ್ಲ. ನನ್ನ 'ಕುನ್ನ' ಮರಿ ಸತ್ತು ದಶಕವೆರಡು ಸಂದಿವೆ. ಅದನ್ನು ಹೂತಿದ್ದ ನಿಂಬೆಮರ ಕಾಯಿಬಿಟ್ಟು ಬಂದವರಿಗೆ ಶರಬತ್ತು ಕೊಡುತ್ತಿದ್ದೇವೆ. ನನ್ನ ಮತ್ತು ಮರದ ನಡುವಿನ ಸಂಬಂಧಕ್ಕೆ ಬಿತ್ತು ಕೊಡಲಿಪೆಟ್ಟು, ಬುಡ ಶೇಷವಾಗುಳಿದಿದೆ. ಮಳೆ ಬಂದಾಗ ಉಬ್ಬುತ್ತಾ ಹತ್ತಾರು ನಾಯಿಕೊಡೆಗಳು ಹುಟ್ಟಿ ಬೆಳೆದು ನಾರುತ್ತ ಕೊಳೆಯುತ್ತ ಮಾಯವಾಗುತ್ತಿವೆ ವರ್ಷಕ್ಕೊಮ್ಮೆ. ಬಂದು ಹೋಗುತ್ತಿದ್ದ ದಾರಿಹೋಕರು ನಿಲ್ಲರೀಗ. ನೀರನ್ನು ಕೇಳುವವರಿಲ್ಲ. ಹಲ್ಲಿಟ್ಟು ಕುಂಕುಮದವರ ಸುಳಿವಿಲ್ಲ. ಗೆಣಸಿನ ಗಾಡಿ ಇಲ್ಲ. ಮಡಕೆಯ ಬಂಡಿ ಇಲ್ಲ. ಸುಣ್ಣ ಹೊತ್ತು ತರುತ್ತಿದ್ದ ಕತ್ತೆಗಳ ಕಿರುಚಾಟವಿಲ್ಲ. ಅಲ್ಲೆ ಸಾಬಿಯು ಬರನು. ಬಡಗಿಯ ಬಾಚಿ ಸದ್ದಿಲ್ಲ. ನೆಂಟರಿಷ್ಟರ ಬೈಕು, ಲೂನ, ಕಾರುಗಳು ಬಂದು ಹೋಗುತ್ತಿವೆ. ಮರವಿದ್ದಲ್ಲೇ ಮೇಲೆ ವಿದ್ಯುತ್ತಿನ ತಂತಿ ಎಳೆದಾಗಿದೆ. ಈಗ ಮನೆಯಲ್ಲಿ ಡಿಷ್ ಆಂಟೆನಾದ ಹಾಡಿನ ನಾದ. ಪ್ರೆಸ್ಟೀಜಿನ ಶಿಳ್ಳು, ಮಿಕ್ಸಿಯ ಗುರು ಗುರು ಸದ್ದು. ಈ ಹಿಪ್ಪೆ ಮಾವುಗಳಂತೆ ಲೋಕದಲ್ಲಿ ಇನ್ನೆಷ್ಟು ಮರಗಳು ಗತಕಾಲ ಸೇರಿವೆಯೋ ಬಲ್ಲವರಾರು?

ಬ. ಚನ್ನಬಸವಯ್ಯ
ದೊಡ್ಡಎಣ್ಣೇಗೆರೆ, ಚಿಕ್ಕನಾಯಕನಹಳ್ಳಿ ತಾಲ್ಲೂಕು
ತುಮಕೂರು ಜಿಲ್ಲೆ - ೫೭೨ ೧೧೯

*(ಹಿಂದಿನ ಪುಟದಿಂದ)*

ಇತಿಹಾಸವನ್ನು ರಾಜಕಾರಣಿಗಳು ದುರುಪಯೋಗ ಮಾಡಿಕೊಳ್ಳುವುದೇ ಹೆಚ್ಚು ಎಂಬ ವಿಚಾರವನ್ನು ಇಂದಿರಾ ಗಾಂಧಿ ಅವರ ಅಧಿಕಾರಾವಧಿಯಲ್ಲಿನ ಕಾಲಕೋಶದ ಪ್ರಸಂಗವನ್ನು ಉದಹರಿಸಿ ಸ್ಪಷ್ಟಪಡಿಸುವ ಡಾ॥ ಗೋಪಾಲ್, ಜನತಾ ಪಕ್ಷದ ಆಳ್ವಿಕೆಯ ಸಂದರ್ಭದಲ್ಲಿ ಮೂರು ಪಠ್ಯ ಪುಸ್ತಕಗಳನ್ನು ನಿಷೇಧಿಸಿದ ಕ್ರಮವನ್ನು ಪ್ರಶ್ನಿಸಿದ್ದಾರೆ.

ಔರಂಗಜೇಬನನ್ನು ಮತಾಂಧ ಎಂದು ಒಪ್ಪಿಕೊಳ್ಳದಿದ್ದರೆ ಇತಿಹಾಸಕ್ಕೆ ಅಪಚಾರ ಬಗೆದಂತೆ ಎಂಬ ಅಭಿಪ್ರಾಯದ ಡಾ॥ ಗೋಪಾಲ್, ಅವನು ಕೆಲವು ಬ್ರಾಹ್ಮಣರಿಗೆ ಮತ್ತು ದೇವಾಲಯಗಳಿಗೆ, ಯಾವುದೇ ಕಾರಣದಿಂದ ದಾನ ಕೊಟ್ಟಿದ್ದರೂ, ಅದನ್ನು ಅಲ್ಲಗಳೆಯಲಾಗದು ಎನ್ನುತ್ತಾರೆ. ಪಠ್ಯ ಪುಸ್ತಕಗಳು ಸತ್ಯವನ್ನು ಮರೆಮಾಚಬಾರದು. ತಮಗೆ ತಿಳಿದ ಸತ್ಯದ ಹಿನ್ನೆಲೆಯಲ್ಲಿ ಭವಿಷ್ಯವನ್ನು ರೂಪಿಸಿಕೊಳ್ಳಬೇಕಾದ್ದು ವರ್ತಮಾನ ಜನಾಂಗದ ಗುರಿ ಆಗಬೇಕು.

ಡಾ॥ ಎಸ್.ಗೋಪಾಲ್ ಅವರ ಅಭಿಪ್ರಾಯಗಳನ್ನು ಪ್ರಶ್ನಿಸಲು ಯಾರಿಗಾದರೂ ಅವಕಾಶಗಳಿವೆ. ಆದರೆ ಅವರ ಸಾಧನೆಯನ್ನು ಗೌಣವಾಗಿ ಕಾಣಲು ಸಾಧ್ಯವಿಲ್ಲ. ಯಾವುದೇ ಕೃತಿಯ ಗುಣ-ದೋಷಗಳ ಚರ್ಚೆ ವಿಮರ್ಶಕನ ಕರ್ತವ್ಯ. ಆ ಚರ್ಚೆಯು ದ್ವೇಶಕ್ಕೆ ಎಡೆ ಕೊಡಬಾರದು. ಏನೇ ಭಿನ್ನಾಭಿಪ್ರಾಯಗಳಿರಲಿ ಡಾ॥ ಎಸ್.ಗೋಪಾಲ್ ಭಾರತದ ಒಬ್ಬ ಪ್ರಮುಖ ಇತಿಹಾಸಕಾರರು ಎಂಬುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ.

ಡಾ. ಎಚ್. ಎಸ್. ಗೋಪಾಲರಾವ್
'ಸ್ವಸ್ತಿಶ್ರೀ ಸ್ಕಂದ', ಅರಸಿನ ಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨೧೨೩

# ಬೆಳಗಿನಲ್ಲೊಂದು ಜೋಡಿ ; ಸಂಜೆಯಲ್ಲೊಂದು ಜೋಡಿ



**ಜೂ**ನ್ ಮೊದಲ ವಾರದಲ್ಲಿ ಗುರು ಮತ್ತು ಶುಕ್ರಗಳು ಜೋಡಿಯಾಗಿ ಆಗಸದಲ್ಲಿಟ್ಟ ಕಣ್ಗಳಂತೆ ಕಂಗೊಳಿಸಿದ್ದವಲ್ಲವೇ ? ಇದನ್ನು ಕಂಡು ಆನಂದಿಸಿದವರ ಉದ್ಗಾರಗಳು ವೈವಿಧ್ಯಪೂರ್ಣವಾಗಿದ್ದವು. ''ಆಕಾಶದಲ್ಲೊಂದು ಟ್ರಕ್ ಬರುತ್ತಾ ಇದೆ'' ಎಂದು ಕೆಲವರು ಹೇಳಿದರೆ, ''ರಥೋತ್ಸವದ ಮುಂದೆ ಹಿಡಿದ ಪಂಜುಗಳಂತಿವೆ'' ಎಂದು ಮತ್ತೊಬ್ಬನ ಉದ್ಗಾರ. ಒಟ್ಟಿನಲ್ಲಿ ಈ ಅವಕಾಶ ಆವೆರಡೂ ಗ್ರಹಗಳನ್ನು ಗುರುತಿಸುವುದಕ್ಕೆ ಸಹಾಯವಾಯಿತು. ಅಷ್ಟೇ ಅಲ್ಲ; ದಿನೇದಿನೇ ಶುಕ್ರಗ್ರಹ ಹೇಗೆ ಸ್ಥಳ ಬದಲಾಯಿಸಿತು ಎಂದೂ ತಿಳಿಸಿಕೊಟ್ಟಿತು. ಈ ಕುರಿತು ಕಾಗದ ಬರೆದು, ದೂರವಾಣಿ ಮೂಲಕ ಹಾಗೂ ವೈಯಕ್ತಿಕವಾಗಿ ಚರ್ಚಿಸಿದವರ ಸಂಖ್ಯೆ ಅದೆಷ್ಟೋ ಲೆಕ್ಕ ಇಟ್ಟಿಲ್ಲ.

ಮೋಡಗಳ ಆರ್ಭಟ ಹೆಚ್ಚುತ್ತಿದ್ದಂತೆ ಆಕಾಶದತ್ತ ಗಮನ ಕಡಿಮೆಯಾಗುವುದು ಸಹಜ. ಆದರೂ ಹಾಗೊಮ್ಮೆ ಬಿಡುವು ಸಿಕ್ಕಿದಾಗ ಸಂಜೆಯಲ್ಲಿ ಕಾಣುವ ಒಂಟಿ ಗ್ರಹ ಶುಕ್ರ. ತೆಳ್ಳನೆಯ ಮೋಡದ ಮೂಲಕವೂ ಗುರುತಿಸಬಹುದಾದ ಪ್ರಕಾಶ ಇದರದ್ದು. ದಿಗಂತದ ಅಂಚಿನಲ್ಲಿ ಸಂಧ್ಯಾ ಪ್ರಕಾಶದಲ್ಲಿ ಅಡಗಿ ಹೋಗಿರುವ ಇನ್ನೊಂದು ಚುಕ್ಕೆ ಗುರುಗ್ರಹ. ಆಕಾಶ ಅನುವು ಮಾಡಿಕೊಟ್ಟಾಗ ಜುಲೈ ಮೊದಲ ವಾರದಲ್ಲಿ ಇದನ್ನು ಹುಡುಕುವ ಪ್ರಯತ್ನ ಮಾಡಿ. ಜುಲೈ ೧೯ಕ್ಕೆ ಸೂರ್ಯನೊಟ್ಟಿಗೇ ಉದಯಿಸಿ, ಕಂತುವ ಈ ಗ್ರಹ ಜುಲೈ ಎರಡನೆಯ ವಾರದಿಂದಲೇ ಕಾಣದಂತಾಗುತ್ತದೆ. ಜುಲೈ ಮೂರರಂದು ದುರ್ಬೀನಿನಿಂದ ಈ ಗ್ರಹವನ್ನು ಪತ್ತೆ ಮಾಡಿದಿರಾದರೆ ಅದರ ಪಕ್ಕದಲ್ಲೇ ಇನ್ನೊಂದು ಚುಕ್ಕೆಯೂ ಕಾಣುವುದು. ಅದು ಮಂಗಳ ಗ್ರಹ. ಗುರು ಮತ್ತು ಮಂಗಳಗಳ ನಡುವಿನಲ್ಲಿ ಒಂದು ಪೂರ್ಣಚಂದ್ರನನ್ನು ಇಡಬಹುದಾದಷ್ಟು ಅಂತರ ಇರುತ್ತದೆಯಷ್ಟೇ. ಆದ್ದರಿಂದ ಈ ಜೋಡಿಯನ್ನು ಕಂಡವರು ಜೂನ್ ತಿಂಗಳಿನಲ್ಲಿ ಕಂಡ ಗುರು, ಶುಕ್ರ ಜೋಡಿಯನ್ನು ನೆನಪು ಮಾಡಿಕೊಳ್ಳಬಹುದು. ಜುಲೈ ೨ ಅಥವಾ ೪ರಂದು ಕೂಡ ಇವು ಒಟ್ಟಾಗಿಯೇ ಕಾಣುವುವಾದರೂ ೩ರಂದು ಅವುಗಳ ನಡುವಿನ ಕೋನ ಕನಿಷ್ಠ-ಸುಮಾರು ಒಂದು ಡಿಗ್ರಿಯಷ್ಟು ಮಾತ್ರ. ಇದು ಸಂಜೆಯ ಜೋಡಿ.

ಏಪ್ರಿಲ್‌ನಲ್ಲಿ ಸಂಜೆಯಲ್ಲೇ ಬೆಳಗುತ್ತಿದ್ದ ಶನಿಗ್ರಹ ಈಗ ಬೆಳಗಿನಲ್ಲಿ ಕಾಣುತ್ತಿದೆಯಲ್ಲವೇ ? ಬೆಳಗಿನ ಜಾವ ಸೂರ್ಯೋದಯಕ್ಕೆ ಎರಡು ಗಂಟೆ ಮುಂಚೆ ಪೂರ್ವದಿಕ್ಕಿಗೆ ದೃಷ್ಟಿಹರಿಸಿ. ವೃಷಭ ರಾಶಿಯ V ಆಕಾರ; ಅದರಿಂದ ಸ್ವಲ್ಪ ಕೆಳಗೆ ಶನಿಗ್ರಹ. ಜುಲೈ ಎರಡರಂದು ಶನಿಗ್ರಹದ ಪಕ್ಕವೇ ಇನ್ನೊಂದು ಚುಕ್ಕೆಯೂ ಕಾಣುವುದು. ಮೂರು, ನಾಲ್ಕು ತಾರೀಖುಗಳಲ್ಲಿ ಗಮನಿಸಿದಿರಾದರೆ ಈ ಚುಕ್ಕೆ ಕ್ರಮೇಣ ಶನಿಯಿಂದ ದೂರ ಸರಿಯುವುದನ್ನು ಕಾಣಬಹುದು. ಈ ಬೆಳಗಿನ ಬಂಟ ಬುಧಗ್ರಹ. ಆದ್ದರಿಂದ ಆಕಾಶ ಸ್ವಲ್ಪವೇ ಬಿಡುವು ಕೊಟ್ಟರೂ ಜುಲೈ ೨, ೩, ೪ ಈ ತಾರೀಖುಗಳಲ್ಲಿ ಸಂಜೆಯ ಜೋಡಿ (ಗುರು ಮತ್ತು ಮಂಗಳ) ಮತ್ತು ಬೆಳಗಿನ ಜೋಡಿ (ಶನಿ ಮತ್ತು ಬುಧ) ಎರಡನ್ನೂ ಕಂಡು ಆನಂದಿಸಿ. ಅವುಗಳ ಚಲನೆಯ ಗುರುತು ಮಾಡಿಕೊಳ್ಳಿ.

> *'ಹೊಸತು' ಆರಂಭವಾದಾಗಲಿಂದಲೂ ನಭಾವಲೋಕನ ಪ್ರಕಟವಾಗುತ್ತಿದೆ. ಇದರ ರೂಪ ಮತ್ತು ನಿರೂಪಣೆಯನ್ನು ಬದಲಿಸುವ ಸಲಹೆಗಳು ಬಂದಿವೆ. ಈ ಬಗ್ಗೆ ನಿಮ್ಮ ಅನಿಸಿಕೆ ಏನು ? ಈ ಅಂಕಣವನ್ನು ಬಳಸುವುದರಲ್ಲಿ ಯಾವ ತೊಂದರೆ ಎದುರಾಗುತ್ತಿದೆ ? ಇದನ್ನು ದಯವಿಟ್ಟು ಬರೆದು ತಿಳಿಸಿ.*

**ಡಾ|| ಬಿ. ಎಸ್. ಶೈಲಜಾ**




> *ಈ ನಕ್ಷೆ ಜುಲೈ ೧೫ಕ್ಕೆ ಅನ್ವಯವಾಗುವುದಾದರೂ ತಿಂಗಳುದ್ದಕ್ಕೂ ಬಳಸಬಹುದು. ಚಂದ್ರ ಮತ್ತು ಶುಕ್ರಗ್ರಹದ ಸ್ಥಾನ ದಿನದಿನಕ್ಕೆ ವ್ಯತ್ಯಾಸವಾಗುತ್ತದೆ. ಆಕಾಶ ಶುಭ್ರವಿದ್ದರೆ ಲಘು ಸಪ್ತರ್ಷಿ ಮಂಡಲವನ್ನು ಗುರುತಿಸಲು ಅವಕಾಶವಿದೆ. ದಕ್ಷಿಣದ ಪುಂಜಗಳಲ್ಲಿ ಆಕಾಶಗಂಗೆಯ ಭಾಗ ಸ್ಫುಟವಾಗಿ ಕಾಣುತ್ತದೆ.*

ತಿಂಗಳ ಕೊನೆಯ ಹೊತ್ತಿಗೆ ಜೋಡಿಗಳೆಲ್ಲಾ ಮಾಯವಾಗುತ್ತವೆ. ದಿನೇ ದಿನೇ ದಿಗಂತದ ಅಂಚನ್ನು ಸಮೀಪಿಸುವ ಶುಕ್ರ ಸಂಜೆಯಲ್ಲಿ ಒಂಟಿ; ದಿನೇ ದಿನೇ ದಿಗಂತದಿಂದ ಮೇಲೆ ಮೇಲೆ ಏರುವ ಶನಿಗ್ರಹ ಬೆಳಗಿನಲ್ಲಿ ಒಂಟಿ ಹೀಗೆ ಇವೆರಡು ಮಾತ್ರ ಕಣದಲ್ಲಿ ಉಳಿಯುತ್ತವೆ.

ನಕ್ಷತ್ರಗಳ ವಿಲಾಸವನ್ನು ತಿಳಿಸಿಕೊಡುತ್ತಾ ಮುನ್ನಡೆಯುವ ಮಾರ್ಗದರ್ಶಿ ಚಂದ್ರ. ಇದು ತಿಂಗಳ ಮೊದಲ ವಾರ ಬೆಳಗಿನ ಜಾವ ಕಾಣುತ್ತದೆ. ೬ನೆಯ ತಾರೀಖು ಬೆಳಗಿನ ಜಾವ ಪೂರ್ವದಲ್ಲಿ ಕಾಣುವ ಬಾಲಚಂದ್ರನ ಕೆಳಗೆ ಕೆಂಪು ನಕ್ಷತ್ರ ರೋಹಿಣಿ. ಇನ್ನೂ ಕೆಳಕ್ಕೆ ದಿಗಂತಕ್ಕೆ ಸಮೀಪವಾಗಿ ಕಾಣುವ ಚುಕ್ಕೆ ಶನಿಗ್ರಹ. ಏಳನೆಯ ತಾರೀಖು ರೋಹಿಣಿಯ ಪಕ್ಕಕ್ಕೆ ಸರಿದಿರುವ ಚಂದ್ರ ಒಂಬತ್ತರಂದು ಶನಿಗ್ರಹವನ್ನು ಹಾದು ಮುನ್ನಡೆದಿರುತ್ತದೆ. ಹತ್ತರಂದು ಅಮಾವಾಸ್ಯೆ. (ವಾಸ್ತವವಾಗಿ ಅಪರಾಹ್ನದ ಮೂರುಗಂಟೆ ಐವತ್ತಾರು ನಿಮಿಷಕ್ಕೆ) ಇದಾದ ನಂತರ ೧೨ರಿಂದ ಬಾಲಚಂದ್ರ ಸಂಜೆಯ ಆಕಾಶದಲ್ಲಿ ಹಾಜರಾಗುತ್ತದೆ. ೧೩ರಂದು ಶುಕ್ರಗ್ರಹದ ಪಕ್ಕವೇ ಕಾಣುತ್ತದೆ. ಮುನ್ನಡೆದು ೧೭ರಂದು ಚಿತ್ರಾನಕ್ಷತ್ರದ ಪಕ್ಕ ಹಾದು ೨೧ರಂದು ವೃಶ್ಚಿಕ ರಾಶಿಯ ಜ್ಯೇಷ್ಠಾ ನಕ್ಷತ್ರದ ಸಮೀಪ ಕಾಣುತ್ತದೆ. ಇಪ್ಪತ್ತನಾಲ್ಕರಂದು ಹುಣ್ಣಿಮೆ. ಆ ದಿನ ಚಂದ್ರನಿಗೆ ಸ್ವಲ್ಪ ಉತ್ತರಕ್ಕೆ ಕಾಣುವ ನೀಲಿ ನಕ್ಷತ್ರವೇ ಶ್ರವಣ. ಅಕ್ವಿಲಾ (ಗರುಡ) ನಕ್ಷತ್ರ ಪುಂಜಕ್ಕೆ ಸೇರಿದೆ ಇದು. ಇದರ ಆಚೀಚೆ ಇನ್ನೂ ಎರಡು ಕ್ಷೀಣ ನಕ್ಷತ್ರಗಳು ಇವೆ. ಮೂರೂ ಒಂದು ಸಣ್ಣ ಸರಳರೇಖೆಯ ಮೇಲಿರುವಂತೆ ಕಾಣುತ್ತವೆ.

ಸಂಜೆಯ ಆಕಾಶದಲ್ಲಿ ಪ್ರಕಾಶಮಾನವಾಗಿ ಕಾಣುವ ನಕ್ಷತ್ರಗಳಿಗೆ ಕೊರತೆ ಎನ್ನುವಂತಿದೆ. ಪಶ್ಚಿಮ ದಿಗಂತದಂಚಿನಲ್ಲಿ ಸಿಂಹರಾಶಿ ಕಾಣುತ್ತದೆ. ೧೦-೧೧ ತಾರೀಖುಗಳಂದು ಶುಕ್ರಗ್ರಹದ ಪಕ್ಕವೇ ಕಾಣುವ ನೀಲಿ

ಚುಕ್ಕೆಯೇ ಮಘ ನಕ್ಷತ್ರ. ಇಲ್ಲಿಂದ ನೆತ್ತಿಯತ್ತ ದೃಷ್ಟಿ ಹಾಯಿಸಿ. ಇನ್ನೊಂದು ಕೆಂಪು ನಕ್ಷತ್ರ ಸ್ವಾತಿ. ಅದರ ದಕ್ಷಿಣಕ್ಕೆ ನೀಲಿ ನಕ್ಷತ್ರ ಚಿತ್ರಾ ಕಾಣುತ್ತದೆ. ಅದಾದ ಮೇಲೆ ಪುನಃ ಖಾಲಿ ಎನ್ನುವ ಅನುಭವ. ಮೋಡ ವಿದೆಯೋ ಏನೋ ಅದಕ್ಕೇ ಕಾಣುತ್ತಿಲ್ಲ ಎಂದೂ ಭಾಸವಾಗಬಹುದು. ಆದರೆ ಮೋಡಗಳಿಲ್ಲ ಎಂದು ಖಾತ್ರಿಯಾಗುವುದು ವೃಶ್ಚಿಕ ರಾಶಿಯನ್ನು ಕಂಡಾಗ. ಚೇಳಿನ ಬಾಲದ ಆಕಾರ ಸ್ಪಷ್ಟವಾಗಿ ಕಾಣುತ್ತದೆ. ಬಾಲದ ತುದಿಯಲ್ಲಿ ಬಿಳಿ ಮೋಡವಿರ ಬಹುದು ಎಂದು ಅನ್ನಿಸಬಹುದು. ಹಾಗಾದರೆ ಆಕಾಶ ಶುಭ್ರ ವಾಗಿದೆ ಎಂದರ್ಥ. ಈ ವಿಪರ್ಯಾಸವನ್ನು ಕಂಡು ಅನುಭವಿಸ ಬೇಕಷ್ಟೇ. ಏಕೆಂದರೆ ಚೇಳಿನ ಬಾಲದಲ್ಲಿ ಕಾಣುವ "ಮೋಡ" ಖಗೋಳಕ್ಕೆ ಸೇರಿದ್ದು. ಮಳೆ ಸುರಿಸುವ ಮೋಡಗಳು ಇಲ್ಲದಾಗ ಮಾತ್ರ ಕಾಣು ವಂತಹುದು. ವಾಸ್ತವವಾಗಿ ಅದು ನಮ್ಮ ಗ್ಯಾಲಕ್ಸಿ ಆಕಾಶಗಂಗೆಯ ಕೇಂದ್ರಭಾಗ. ಅಲ್ಲಿ ದಟ್ಟವಾಗಿ ಹರಡಿರುವ ನಕ್ಷತ್ರ ಗಳು, ಧೂಳು, ಅನಿಲ ಎಲ್ಲವೂ ಸೇರಿ ಈ ಬಗೆಯ ಮೋಡದ ಭ್ರಮೆ ಉಂಟು ಮಾಡುತ್ತವೆ. ದೂರ ದರ್ಶಕ ಅಥವಾ ದುರ್ಬೀನನ್ನು ಅತ್ತ ತಿರುಗಿಸಿದರೆ ಸಾಕು, ನಕ್ಷತ್ರ ಗುಚ್ಛಗಳು, ನೆಬ್ಯುಲಗಳ ದರ್ಶನ ಲಭ್ಯ.

ಭೂಮಿ ಸೂರ್ಯನನ್ನು ಸುತ್ತುವ ಕಕ್ಷೆ ದೀರ್ಘವೃತ್ತ ವಾಗಿರುವ ಕಾರಣ ಭೂಮಿಯ ದೂರ (ಸೂರ್ಯನಿಂದ) ವ್ಯತ್ಯಾಸವಾಗುತ್ತಿರುತ್ತದೆ. ೫ನೆಯ ತಾರೀಖಿನಂದು ಈ ದೂರ ಗರಿಷ್ಠ. ಉತ್ತರ ಗೋಳಾರ್ಧದಲ್ಲಿರುವ ನಮಗೆ ಈಗ ಬೇಸಿಗೆ. ಈಗ ದೂರವೂ ಕನಿಷ್ಠವಾಗಿದ್ದಿದ್ದರೆ ಅಸಹನೀಯವಾಗು ತ್ತಿತ್ತೋ ಏನೋ. ಇನ್ನು ೧೨,೦೦೦ ವರ್ಷಗಳ ನಂತರ ಹೀಗೆ ಬೇಸಿಗೆಯಲ್ಲಿ ದೂರವೂ ಕನಿಷ್ಠವಾಗುವ ಸಾಧ್ಯತೆ ಇದೆ. ಆದರೆ ಆಗ ಜನವರಿಯಲ್ಲಿ ಬೇಸಿಗೆ !

ಜುಲೈ ಆರಂಭವಾಗುತ್ತಿದ್ದಂತೆ ಉಲ್ಕೆಗಳ ಚಟುವಟಿಕೆಯೂ ಆರಂಭವಾಗುತ್ತದೆ. ಗಂಟೆಗೆ ೨೦ ಉಲ್ಕೆಗಳು ಬೀಳುವ ಅಕ್ವಾರಿಡ್ಸ್ ಎಂಬ ಉಲ್ಕಾವೃಷ್ಟಿ ಜುಲೈ ೨೮ರಂದು ಗರಿಷ್ಠ ಮುಟ್ಟುತ್ತದೆ. ಅಂದರೆ ಅದರ ಆಚೀಚಿನ ಎರಡು ಮೂರು ದಿನಗಳಲ್ಲಿಯೂ ಹೆಚ್ಚು (ಗಂಟೆಗೆ ಹತ್ತು-ಹದಿನೈದು) ಉಲ್ಕೆಗಳು ಕಾಣುವುವು. ಈ ಉಲ್ಕೆಗಳೆಲ್ಲವೂ ಕುಂಭರಾಶಿಯಿಂದ ಹೊರಟಂತೆ ಕಾಣುವುದರಿಂದ ಅಕ್ವಾರಿಡ್ಸ್ ಎಂಬ ಹೆಸರಿದೆ. (ಅಕ್ವೇರಿಯಸ್=ಕುಂಭ)

ಅಕ್ವಾರಿಡ್ಸ್‌ಗಳ ಸಂಖ್ಯೆ ಕಡಿಮೆಯಾಗುತ್ತಿದ್ದಂತೆ ಮತ್ತೊಂದು ಉಲ್ಕಾವೃಷ್ಟಿ ಆರಂಭವಾಗುತ್ತದೆ. ಇದು ಆಗಸ್ಟ್ ೧೨ರಂದು ಗರಿಷ್ಠ ಮುಟ್ಟುವ ವಿಖ್ಯಾತ ಪರ್ಸಿ ಯ್ಯಡ್ಸ್ ಉಲ್ಕಾವೃಷ್ಟಿ. ಈ ಉಲ್ಕೆಗಳು ಪರ್ಸಿಯಸ್ (ಅರ್ಜುನ) ನಕ್ಷತ್ರ ಪುಂಜದಿಂದ ಹೊರಟಂತೆ ಕಾಣುತ್ತವೆ. ಒಟ್ಟಿನಲ್ಲಿ ಜುಲೈ ಕೊನೆಯ ವಾರದಲ್ಲಿ (ಆಕಾಶ ಶುಭ್ರವಾಗಿದ್ದರೆ) ಬೆಳಗಿನ ಹೊತ್ತು "ಜಾಗಿಂಗ್" ಹೋಗುವವರಿಗೆ ಹತ್ತಿಪ್ಪತ್ತು ಉಲ್ಕೆಗಳು ಕಾಣುವುದಂತೂ ನಿಜ.


**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧


# ಅಮೆರಿಕಾ ಪದ್ಯಗಳು



ಅಮೆರಿಕಾ ಒಂದು ಮದ್ಯದ ಬಟ್ಟಲು
ಅದು ಅದ್ದುತ್ತದೆ
ನನ್ನ ನಿನ್ನ ಅವನ ಅವಳ
ಮೆದುಳನ್ನ, ತನ್ನ ಮಧುಪಾತ್ರೆಯಲ್ಲಿ
ನಾಜೂಕು ಹಿಡಿದು, ಮೆತ್ತಗೆ
ಉಳಿದದ್ದು
ಮಂಪರು-ಅಲೆತ-ತೂರಾಟ
ಎಲ್ಲ ಅಯೋಮಯ
ಮೆದುಳು ಕೊಳೆಯುತ್ತ, ಕಪ್ಪಾಗುತ್ತ
ಕೀವಾಗುತ್ತ, ನೋವ ಹುಣ್ಣಾಗುತ್ತ
ತಲೆ ಅಲ್ಲಾಡಿಸುತ್ತ...
ಕುಡಿಯುತ್ತೇನೆ
ಕಣ್ಣೀರನ್ನ.
ನನ್ನ ಕಣ್ಣೀರನ್ನ ನಾನೇ
ಮತ್ತೆ ಕುಡಿಯುತ್ತೇನೆ ಮತ್ತೆ
ಕೇಳುತ್ತೇನೆ.
ಇದೆಯೇ ಮುಲಾಮು ?
ನೋವು ಮರೆವ ಮುಲಾಮು ?
ಮೆದುಳು ಕೊಳೆತ ನಾಲಿಗೆ
ಎದ್ದೆದ್ದು ಬಿದ್ದು
ನನ್ನ ದನಿಯೇ ನನಗೆ ಒದ್ದು
ಕೊಳೆತ ತಲೆ ಹೊತ್ತ ನಾನು ಕೇಳುತ್ತೇನೆ
ಇದೆಯೇ ಮುಲಾಮು ?
ನೋವು ಮರೆವ ಮುಲಾಮು ?

೨

ಕೊಲ್ಲುವುದು ಅಮೆರಿಕಾದ ಜಾಯಮಾನವಲ್ಲ
ಅದು ನೇರ ಕೊಲ್ಲಿಸುವುದಿಲ್ಲ
ತೀರಾ ನಿಧಾನ...
ಚೂರು ಚೂರೇ....
ಪ್ರೀತಿಯ ವಿಷ ಉಣ್ಣಿಸುತ್ತದೆ
ಊಟ ಕಾಣದ ನನ್ನ ಜನ
ಮುಕ್ಕುತ್ತಾರೆ- ಗಬಗಬ
ಶ್ವೇತಭವನ ಶ್ವೇತಪತ್ರ ಹೊರಡಿಸುತ್ತದೆ
ತಿನ್ನುವ ಶೈಲಿ ಸರಿಯಿರಲಿಲ್ಲ, ಸತ್ತ
ಸರ್ಕಾರ ಫರ್ಮಾನು ಸ್ವೀಕರಿಸುತ್ತದೆ.

ಅಮೆರಿಕಾಕ್ಕೆ ದೇಹಗಳ ಮೇಲೆ ದ್ವೇಷವಿಲ್ಲ
ಅದರ ತಕರಾರಿರುವುದೆಲ್ಲ
ಮೆದುಳಿನ ಮೇಲೆ
ಗರ್ಭಕೋಶ, ಗರ್ಭನಾಳ, ಯೋನಿ
ಎಲ್ಲ ಎಲ್ಲ ಹಾಗೇ ಬಿಟ್ಟು
ಎರಡು ಟಿಬ್ಬಿಗಳಲ್ಲಿ ಸಂತಾನಹರಣ ಶಸ್ತ್ರಕ್ರಿಯೆ
ನಡೆಯುತ್ತದಲ್ಲ, ಹಾಗೆ.
ಸಲೀಸು
ಅಮೆರಿಕಾ ತಲೆ ನೇವರಿಸಿ
ಮಮತೆಯಿಂದ ಮೆದುಳಿನ ಪ್ರಜ್ಞಾತಂತುವನ್ನು
ತುಂಡರಿಸುತ್ತದೆ.
ಹಣ ಮತ್ತು ಧರ್ಮದ ಎರಡು ಗಂಟು ಹಾಕುತ್ತದೆ
-ಚರ್ಮದ್ದು.
ಅವು ಕರಗಿ ಜೀವಕೋಶಗಳಲ್ಲಿ ಬೆರೆಯುತ್ತದೆ
ಅಮೆರಿಕಾದ ಜೀವ ತಂತ್ರಜ್ಞಾನ ಪ್ರಯೋಗಾಲಯ
ಕಾದು ಕುಳಿತಿದೆ-ಪರೀಕ್ಷೆಗೆ
ಮೆದುಳಿಲ್ಲದವರ ಮಕ್ಕಳ ಮೆದುಳನ್ನ
ಪ್ರಯೋಗಕ್ಕೆ ಒಡ್ಡುತ್ತದೆ
ಮುಗುಳ್ನಕ್ಕು
ದೇಹ ಬೆಳೆಸಿ ಶಸ್ತಾಸ್ತ್ರಗಳ ಹೊರಿಸುತ್ತದೆ.

ಅಮೆರಿಕಾಕ್ಕೆ ಮನುಷ್ಯ ರಕ್ತದ ಮರುನಿರ್ಮಾಣ ಬೇಕಿದೆ.
ಅದು ಅಲ್ಲಲ್ಲಿ ರಕ್ತ ಚೆಲ್ಲಿಸಿ
ರಕ್ತದ ಗುಣ ತಿಳಿಯಲು ವಿಜ್ಞಾನಿಗಳಿಗೆ ಹೇಳಿದೆ.
ಬೇರೆ ಬೇರೆ ಶೀತೋಷ್ಣ
ಬೇರೆ ಬೇರೆ ಹವಾಮಾನ
ಬೇರೆ ಬೇರೆ ಧರ್ಮ-ಚರ್ಮಗಳ
ರಕ್ತ ಹೇಗಿದೆ ಎಂದು ತಿಳಿಯಬೇಕಿದೆ.
ಅಮೆರಿಕಾ ಪ್ರಯೋಗ ಮಾಡಿಸುತ್ತದೆ.
ದೊಡ್ಡ ಸತ್ಯವೊಂದರ ಶೋಧಕ್ಕೆ
ಸತ್ತ ಪ್ರಾಣಿಗಳು ಕಸದ ತೊಟ್ಟಿ ಸೇರುತ್ತವೆ.
ಅಮೆರಿಕಾ ದಯೆತೋರಿ
ಸಮಾಧಿ ಕಟ್ಟಿಸುತ್ತದೆ.


**ಡಾ|| ವಿನಯಾ**
**ಸರ್ಕಾರಿ ಪ್ರಥಮ ದರ್ಜೆ ಕಾಲೇಜು**
**ಸವಣೂರು, ಹಾವೇರಿ ಜಿ||**

# ಕೋಮು ಸೌಹಾರ್ದತೆಗೆ ಸಮರ್ಪಿತವಾದ ಬೀದಿ ನಾಟಕೋತ್ಸವ -೨೦೦೨

"ಇಂದು ವಿಶ್ವದ ಕಾರ್ಮಿಕರೆಲ್ಲಾ ಒಂದಾಗುತ್ತಿದ್ದಾರೆ. ನನ್ನ ರಕ್ತದಿಂದ ಚಿಕಾಗೋನ ಪಾಪ ತೊಳೆಯಲಿಕ್ಕಾದರೆ, ಬಿಳಿಯರು, ನೀಗ್ರೋಗಳು, ರೆಡ್ ಇಂಡಿಯನ್ನರು ಒಟ್ಟಾಗಿ ಸಂತೋಷದಿಂದ ಬಾಳುವುದಕ್ಕಾದರೆ, ನಾನೇಕೆ ನನ್ನ ರಕ್ತದ ಬಗ್ಗೆ ಜಿಪುಣನಾಗಬೇಕು" ಎಂದು ಧೀರೋದಾತ್ತ ಹೋರಾಟ ಮಾಡಿ ೧೮೮೬ರಲ್ಲಿ ಚಿಕಾಗೋದಲ್ಲಿ ನೇಣುಗಂಬಕ್ಕೆ ಮುತ್ತಿಟ್ಟ ಕಾರ್ಮಿಕ ವೀರ ಆಲ್ಬರ್ಟ್ ಪಾರ್ಸನ್‌ನ ಪಾತ್ರ ಮೆರೆದ "ಕೆಂಪು ಮೇ ದಿನ"ದೊಂದಿಗೆ ಮೇ ೨೪ರಂದು ಬೀದಿ ನಾಟಕೋತ್ಸವ ಬೆಂಗಳೂರಿನಲ್ಲಿ ಆರಂಭವಾಯಿತು. "ಯುವಜನ ಸಾಂಸ್ಕೃತಿಕ ವೇದಿಕೆ"ಯು ಈ ನಾಟಕ ನಡೆಸಿಕೊಟ್ಟಿತು. ಉದ್ಘಾಟನೆ ನಡೆಸಿಕೊಟ್ಟ ಶ್ರೀ ಪ್ರಕಾಶ್ ಬೆಳವಾಡಿ ಇಂದಿನ ಕೋಮು ವಿಷಜ್ವಾಲೆಗೆ ಕಾರಣವಾದ ಸಂಘ ಪರಿವಾರದ ಶಕ್ತಿಗಳನ್ನು ಖಂಡಿಸಿದರು. ಕೋಮು ಸೌಹಾರ್ದತೆಗೆ ಮುಡಿಪಾಗಿರುವ ನಾಟಕೋತ್ಸವ ಯಶಸ್ವಿಯಾಗಲಿ ಎಂಬುದು ಅವರ ಹಾರೈಕೆ. ಅಂದಿನ ಕಾರ್ಯಕ್ರಮದ ಮುಖ್ಯವಾದ ಮತ್ತೊಂದು ಭಾಗ ಶ್ರೀಮತಿ ವಸಂತಿರಾಜುರವರಿಂದ "ಘಜಲ್ ಗಾಯನ." ಕೋಮುವಾದವನ್ನು ತಿರಸ್ಕರಿಸುವ ಹಾಗೂ ಮಾನವೀಯತೆಯನ್ನು ಎತ್ತಿಹಿಡಿಯುವ ಗಾಯನ ಕಾರ್ಯಕ್ರಮ ಅತ್ಯುತ್ತಮವಾಗಿ ಮೂಡಿಬಂತು. ಅಂದಿನ ಎರಡನೆ ನಾಟಕ, ಅವೈಜ್ಞಾನಿಕ ಹಾಗೂ ಅಂಧ ಚಿಂತನೆಗಳನ್ನು ತುಂಬಲು ಸರ್ಕಾರವು ನಡೆಸುತ್ತಿರುವ ಪ್ರಯತ್ನವನ್ನು ಬಯಲುಪಡಿಸುವ **"ಕಾಲೇಜಿಗೆ ಹಿಡಿದ ಶನಿ."** ಜ್ಯೋತಿಷ್ಯ ಶಾಸ್ತ್ರ, ವಾಸ್ತು, ಕರ್ಮಕಾಂಡಗಳನ್ನು ಪಠ್ಯಕ್ರಮವಾಗಿ ಮಾಡಲು ಹೊರಟಿರುವ ಕೇಂದ್ರ ಸರ್ಕಾರದ ಕುತಂತ್ರವನ್ನು ಕಥಾವಸ್ತುವಾಗಿ ಪಡೆದಿದ್ದ ಈ ನಾಟಕವನ್ನು **"ಸೃಜನ, ಬೆಂಗಳೂರು"** ತಂಡ ಪ್ರದರ್ಶಿಸಿತು.




*'ಕೆಂಪು ಮೇ ದಿನ'ದ ಒಂದು ದೃಶ್ಯ*

ಎರಡನೆಯ ದಿನ ಮೂರು ನಾಟಕಗಳು ಪ್ರದರ್ಶಿತವಾದವು. ಮೊದಲನೆಯದಾಗಿ ಜಾನಪದ ಕಥಾ ತಿರುಳು ಇರುವ **"ಕೆರೆಗೆ ಹಾರ."** ಭಾಗೀರಥಿಯನ್ನು ಮೋಸದಿಂದ ಊರಗೌಡ ಕೆರೆಗೆ ಹಾರ ಮಾಡುವುದು ಹಾಗೂ ನಂತರ ಬರುವ ಅವಳ ಗಂಡ ಮಾಧವರಾಯ ದುಃಖಿತನಾಗಿ ಮರಣ ಹೊಂದುವುದು ಪ್ರೇಕ್ಷಕರನ್ನು ಸ್ಪಂದಿಸಿತು. **"ಸೃಜನ, ಬಳ್ಳಾರಿ"** ತಂಡವು ಐತಿಹಾಸಿಕ ಕಥಾವಸ್ತುವಿನ **"ಹಲಗಲಿ ಬೇಡರ ಹತಾರ ಲಡಾಯಿ"**ಯನ್ನು ಅಮೋಘವಾಗಿ ಅಭಿನಯಿಸಿದರು. ಬ್ರಿಟಿಷರಿಗೆ ಹತಾರ ಒಪ್ಪಿಸಿ, ಶರಣಾಗುವುದಿಲ್ಲವೆಂದು ಶಪಥ ಮಾಡಿ ವೀರೋಚಿತವಾಗಿ ಹೋರಾಟ ನಡೆಸಿ, ಮಡಿದ ವೀರ ಹಲಗಲಿ ಬೇಡರ ಕಥೆ ಮನಕಲಕುವಂತಿತ್ತು. ಸ್ಫೂರ್ತಿದಾಯಕವಾಗಿಯೂ ಇತ್ತು. ಕೊಂಚ ಕ್ಲಿಷ್ಟವಾದರೂ ಜನಸಾಮಾನ್ಯರಿಗೆ ಅರಿವಾಗುವಂತೆ ಮಾಡುವಲ್ಲಿ ಯಶಸ್ವಿಯಾದ "ಆವಿಷ್ಕಾರ" ತಂಡ ಸಾಮ್ರಾಜ್ಯಶಾಹಿ ದಬ್ಬಾಳಿಕೆ, ಲೂಟಿ, ಪಾಖಂಡಿತನವನ್ನು ಅಂದಿನ ಮೂರನೆಯ ನಾಟಕವಾಗಿ "ಆಕ್ಟೋಪಸ್"ನಲ್ಲಿ ರಂಗಾಸಕ್ತರ ಮುಂದಿಟ್ಟಿತು. ವಿಶ್ವದಾದ್ಯಂತ ಅಮೆರಿಕಾ ನೇತೃತ್ವದ ಸಾಮ್ರಾಜ್ಯಶಾಹಿ ಲೂಟಿಕೋರರ ದಂಡು ನಡೆಸುತ್ತಿರುವ ವರ್ಲ್ಡ್ ಬ್ಯಾಂಕ್ ಹಾಗೂ ಐಎಂಎಫ್‌ಗಳ ಆರ್ಥಿಕ ನೆರವು, ಸಹಾಯ, ಸಾಲಗಳ ಹೆಸರಿನ ಮಾರಣಹೋಮವನ್ನು ಚೆನ್ನಾಗಿ ಬಿಂಬಿಸಿತು.



*ಆವಿಷ್ಕಾರದ 'ಆಕ್ಟೋಪಸ್'ನ ದೃಶ್ಯ*

ಮೇ ೨೬ರಂದು ಪ್ರದರ್ಶಿತವಾದ ಮೂರು ನಾಟಕಗಳು ಬಹಳ ಗಹನವಾದ ಕೋಮು ಸೌಹಾರ್ದತೆಯ ತಿರುಳನ್ನು ಹೊಂದಿದ್ದವು. ಮೊದಲನೆಯದು "ಆವಿಷ್ಕಾರ"ದ, ಜೀವನವೆಲ್ಲಾ ಹೊಟ್ಟೆ-ಬಟ್ಟೆ ಕಟ್ಟಿ, ಹಜ್ ಯಾತ್ರೆಗಾಗಿ ಕೂಡಿಟ್ಟ ಹಣವನ್ನು ತನ್ನ ಪ್ರಾಣ ಸ್ನೇಹಿತ ಶಾಸ್ತ್ರಿಗಳ ಮಗಳ ಮದುವೆ ಖರ್ಚಿಗಾಗಿ ಕೊಟ್ಟು, ತೃಪ್ತಿಪಡುವ ಮೌಲ್ವಿ ಸಾಹೇಬರ ಕತೆಯಾದರೆ, ಎರಡನೆಯದು "ಎಐಡಿವೈಓ, ಗುಲ್ಬರ್ಗಾ" ತಂಡದವರಿಂದ ಬರಪೀಡಿತ ಸಮಯದಲ್ಲಿ ನೀರಿಗಾಗಿ ಹೋರಾಡಿ ಜನತೆ ಒಂದಾದ ಕತೆ. ಧರ್ಮದ ಹೆಸರಿನಲ್ಲಿ ಜನತೆಯನ್ನು ವಿಭಜಿಸುವ ವ್ಯವಸ್ಥೆಯ ವಿರುದ್ಧದ ಹೋರಾಟವನ್ನು ಅದು ಪ್ರತಿಬಿಂಬಿಸಿತು. ಅಂದು ಕಡೆಯ ನಾಟಕವಾಗಿ "ಚೇತನ" ತಂಡದಿಂದ "ಕೊಲೆ" ಪ್ರದರ್ಶಿತವಾಯಿತು.

❑ ಜಿ. ಶಶಿಕುಮಾರ್

# ಕೋಮುವಾದ ವಿರೋಧಿಸಿ

**ಸುದ್ದಿ ಚಿತ್ರ**



*ಕೋಮು ಸಾಮರಸ್ಯ ಸಮಾವೇಶ*



*ಕೋಮುವಾದ ವಿರೋಧಿಸಿ 'ಜನಮತ' ಸಭೆ*

ಕೋಮುವಾದ ವಿರೋಧಿ ಆಂದೋಲನ ಮತ್ತು ಇತರ ಸಂಘಟನೆಗಳು ಸೇರಿ ಜೂನ್ ೨ ರಂದು ಬೆಂಗಳೂರಿನಲ್ಲಿ ಕೋಮು ಸಾಮರಸ್ಯ ಸಮಾವೇಶ ನಡೆಸಿದವು. ಇದರಲ್ಲಿ ಹಲವು ಹಿರಿಯ ಕಿರಿಯ ಕಲಾವಿದರು ತಮ್ಮ ಚಿತ್ರಗಳನ್ನು ಪ್ರದರ್ಶಿಸಿ ಕೋಮು ಸಾಮರಸ್ಯಕ್ಕೆ ಬೆಂಬಲ ಸೂಚಿಸಿದರು.

ದ್ವೇಷ ಬಿತ್ತುವ ಯಾತ್ರೆಗಳ ವಿರುದ್ಧ ಪರಸ್ಪರ ಸ್ನೇಹ ಭಾವನೆಗೆ ಇಂಬು ಕೊಡುವ ಕೋಮು ಸೌಹಾರ್ದತೆ ಮತ್ತು ಸ್ವಾವಲಂಬನೆಗಾಗಿ 'ಸ್ನೇಹವಾಹಿನಿ ಜಾಥಾ' ಸಿಪಿಐ ನೇತೃತ್ವದಲ್ಲಿ ನಡೆಯಿತು. ಈ ಒಲವಿನ ಎಲ್ಲ ಪಕ್ಷಗಳು, ವರ್ಗಗಳ ಗೆಳೆಯರು ಈ ಜಾಥಾಗಳಲ್ಲಿ ಉತ್ಸಾಹದಿಂದ ಪಾಲ್ಗೊಂಡರು. ಶ್ರೀರಂಗಪಟ್ಟಣದಿಂದ ಮತ್ತು ಕಿತ್ತೂರಿನಿಂದ ಹೊರಟ ಜಾಥಾಗಳು ನಾಡಿನ ಅನೇಕ ಜಿಲ್ಲೆಗಳಲ್ಲಿ ಸಂಚರಿಸಿ ಬೆಂಗಳೂರಿನಲ್ಲಿ ಸಂಗಮಗೊಂಡವು.



*ಶ್ರೀರಂಗಪಟ್ಟಣದಲ್ಲಿ ಜಾಥಾ ಉದ್ಘಾಟನೆ*



*ಧಾರವಾಡದಲ್ಲಿ ಸ್ನೇಹವಾಹಿನಿ*

### ಮಲ್ಲೇಶ್ವರಂ ಘೋಷಣೆ – ಜೂನ್ 2, 2002

"ಕರ್ನಾಟಕದವರಾದ ನಾವು, ನಮ್ಮ ಪಾರಂಪರಿಕ ಕೋಮು ಸೌಹಾರ್ದವನ್ನು ಉಳಿಸಿ, ಬೆಳೆಸಿಕೊಂಡು ಹೋಗಲು ಕಂಕಣಬದ್ಧರಾಗಿದ್ದೇವೆ. ಕೋಮುವಾದದ ವಿಷಜ್ವಾಲೆ ನಮ್ಮ ನಾಡನ್ನು ಆವರಿಸದಂತೆ ತಡೆಗಟ್ಟ, ಕೋಮುವಾದಿಗಳ ಹುನ್ನಾರವನ್ನು ಬಯಲಿಗೆಳೆಯುತ್ತೇವೆ. ಮತಧರ್ಮದ ನಂಬಿಕೆಗಳನ್ನು ವೈಯಕ್ತಿಕ ಅಂತರಂಗದ ಪವಿತ್ರ ವಿಷಯವೆಂದು ಮಾನ್ಯ ಮಾಡುತ್ತಲೇ ಅವನ್ನು ಸಾಮಾಜಿಕ ಸಂಕ್ಷೋಭೆ ಉಂಟುಮಾಡಲು ಬಳಸುವುದಕ್ಕೆ ನಾವು ಸರ್ವಥಾ ಅವಕಾಶ ಕೊಡುವುದಿಲ್ಲ. ಭಾಷೆಯ, ಧರ್ಮದ, ಜನಾಂಗದ ಎಲ್ಲ ವೈವಿಧ್ಯತೆಗಳನ್ನು ಜನತೆಯ ಸಾಂಸ್ಕೃತಿಕ ಸಂಪತ್ತೆಂದು ಅರ್ಥೈಸುತ್ತಲೇ ಮಾನವೀಯತೆಯ ಏಕಸೂತ್ರದಲ್ಲಿ ನಾಡಿನ ಐಕ್ಯತೆಯನ್ನು ರಕ್ಷಿಸುತ್ತೇವೆ. ಇದರ ಸಾಧನೆಗೆ ಪ್ರಜಾಪ್ರಭುತ್ವ ಮಾರ್ಗವನ್ನೇ ಅವಲಂಬಿಸುತ್ತೇವೆ. ಅಗತ್ಯಬಿದ್ದರೆ ಎಲ್ಲ ತ್ಯಾಗಕ್ಕೂ ಸಿದ್ಧರಿದ್ದೇವೆ. ಹೀಗೆಂದು ಒಕ್ಕೊರಲಿನಿಂದ ಘೋಷಿಸುತ್ತೇವೆ".



*ಬಂಟ್ವಾಳದಲ್ಲಿ ಜಾಥಾಕ್ಕೆ ಸ್ವಾಗತ*



*ಬೆಂಗಳೂರಿನಲ್ಲಿ ಸ್ನೇಹವಾಹಿನಿ ಸಂಗಮ*

# ಭಾವನಾವಾದ, ಭೌತವಾದ ಮತ್ತು ಮತೀಯ ಮೂಲಭೂತವಾದ

ಇಂದು ನಾವು ಆಧುನಿಕ ಜಗತ್ತಿನಲ್ಲಿ, ನಾಗರಿಕ ಸಮಾಜದಲ್ಲಿ ಜೀವಿಸುತ್ತಿದ್ದೇವೆ. ಇಲ್ಲಿ ನಮಗೆ ಮುಖ್ಯವಾಗುವ ಪ್ರಶ್ನೆ ಸೃಷ್ಟಿಯ ಉಗಮದಿಂದಲೂ ಜೀವ ಜಗತ್ತನ್ನು ನಿಯಂತ್ರಿಸುತ್ತಿರುವ ಎರಡು ಬಹುಮುಖ್ಯ ಅಂಶಗಳಾದ ಬದುಕು ಮತ್ತು ಬದುಕುವ ವಿಧಾನ ಹೇಗಿತ್ತು, ಹೇಗಾಗಿದೆ ಮತ್ತು ಹೇಗಿದ್ದರೆ ಇಂದಿಗೆ ಸೂಕ್ತವಾದೀತು ಎಂಬುದು.

ನಾವು ತಿಳಿದುಕೊಂಡಿರುವ ನಾಗರಿಕತೆಯ ಬೆಳವಣಿಗೆಯಲ್ಲಿ ಮುಖ್ಯ ಪಾತ್ರ ವಹಿಸಿದ್ದವನು ಮನುಷ್ಯ. ಇತರ ಜೀವಿಗಳು ಆತನ ಬೆಳವಣಿಗೆಗೆ ಪೂರಕವಾದವು. ಈ ಹಂತದ ಬೆಳವಣಿಗೆಯ ನಿರ್ಧಾರಕ ಅಂಶಗಳು ಆರ್ಥಿಕ ವ್ಯವಸ್ಥೆ ಮತ್ತು ಸಂಸ್ಕೃತಿ. ಆರ್ಥಿಕತೆಯು ಬಾಹ್ಯ ಚಟುವಟಿಕೆಗಳನ್ನು ಆಧರಿಸಿದ್ದರೆ ಸಂಸ್ಕೃತಿಯು ಚಿಂತನೆಯನ್ನು ಆಧರಿಸಿದ್ದು, ಬಾಹ್ಯ ಚಟುವಟಿಕೆಗಳಿಗೆ ಒಂದು ಸ್ಪಷ್ಟ ರೂಪವನ್ನು ಕೊಡುತ್ತದೆ. ಈ ಎರಡೂ ಹಿನ್ನೆಲೆಗಳಲ್ಲಿ ಚರಿತ್ರೆಯುದ್ದಕ್ಕೂ ತಾತ್ವಿಕ ಸಂಘರ್ಷ ನಡೆಯುತ್ತಲೇ ಬಂದಿದೆ.

ಇತ್ತೀಚಿನ ರಾಜಕೀಯ ವಿಚಾರಧಾರೆ, ಭಾರತೀಯ ಚಿಂತನೆಯನ್ನು ಸ್ವಹಿತಾಸಕ್ತಿಗಾಗಿ ಬಳಸಿಕೊಳ್ಳತೊಡಗಿರುವುದನ್ನು ಗಮನಿಸುವಾಗ ಇಂದಿನ ಆದ್ಯತೆಯ ಬಗ್ಗೆ ಯೋಚಿಸಬೇಕಾಗುತ್ತದೆ. ಹೀಗೆ ಸ್ವ-ಹಿತಾಸಕ್ತಿಗಾಗಿ ಉಪಯೋಗಿಸಿಕೊಳ್ಳಲಾಗುವ ಚಿಂತನೆ ವೈದಿಕ ಸಂಸ್ಕೃತಿಯ ಯಥಾವತ್ ಹೇರಿಕೆಯ ಪ್ರಯತ್ನವಾಗಿದೆಯೇ ಹೊರತು ಸಮಗ್ರ ಭಾರತೀಯ ಚಿಂತನೆಯಾಗಿಲ್ಲ ಎಂಬುದು ಗಮನಾರ್ಹ ಸಂಗತಿ.

ವೈದಿಕ ಸಂಸ್ಕೃತಿ ಬೆಳೆದದ್ದು ರಾಜಪ್ರಭುತ್ವದ ಆಶ್ರಯದಲ್ಲಿ ಎನ್ನುವುದು ಎಲ್ಲರಿಗೂ ತಿಳಿದ ವಿಚಾರ. ಅದಕ್ಕೂ ಮೊದಲು ಪ್ರಾಚೀನ ಗಣರಾಜ್ಯಗಳಲ್ಲಿ ಒಂದು ಭಿನ್ನ ಸಂಸ್ಕೃತಿ ರೂಪುಗೊಂಡಿತ್ತಾದರೂ ಇಂದು ಅದು ಗೌಣವಾಗಿದೆ. ಆ ಗಣರಾಜ್ಯಗಳಲ್ಲಿ ದಾಸರುಗಳನ್ನು ಹೊರತುಪಡಿಸಿದರೆ ಮಿಕ್ಕೆಲ್ಲರಲ್ಲಿ ಸಮಾನತೆ ಇತ್ತು. ಮಹಿಳೆಯರಿಗೆ ಸ್ವಾತಂತ್ರ್ಯವಿತ್ತು. ಆಸ್ತಿಯ ಸಾಮೂಹಿಕ ಒಡೆತನವಿತ್ತೆಂಬ ಅಭಿಪ್ರಾಯವನ್ನು ಪಂಡಿತ್ ರಾಹುಲ ಸಾಂಕೃತ್ಯಾಯನ ಅವರು ತಮ್ಮ 'ಜಯ ಯೌಧೇಯ' ಕೃತಿಯಲ್ಲಿ ವ್ಯಕ್ತಪಡಿಸಿದ್ದಾರೆ. ಕಾಲ ಸರಿದಂತೆ ಅಧಿಕಾರ ಏಕವ್ಯಕ್ತಿಯಲ್ಲಿ ಕೇಂದ್ರೀಕೃತವಾದಾಗ ವ್ಯಕ್ತಿ ಆರಾಧನೆ, ರಾಜನ ದೈವಿಕ ಕಲ್ಪನೆ, ಜಾತಿ ತಾರತಮ್ಯ, ಮಹಿಳೆಯರ-ದುರ್ಬಲರ ಶೋಷಣೆ ಮುಂತಾದವು ಸಂಸ್ಕೃತಿಯೊಂದಿಗೆ ಸೇರಿಹೋದವು. ಏಕವ್ಯಕ್ತಿಯ ಅಧಿಕಾರವನ್ನು ಪುಷ್ಟಿಗೊಳಿಸುವುದಕ್ಕೆ ಸಮಾಜದಲ್ಲಿ ಒಡಕು ತರುವುದು ಅಗತ್ಯವಾಗಿತ್ತು ಎಂದುಕೊಳ್ಳಬಹುದು. ಅಲ್ಲಿ ಪಾರಮಾರ್ಥಿಕ ಚಿಂತನೆ ಶೋಷಕ ವರ್ಗಕ್ಕೆ ಇತರರನ್ನು ನಿಯಂತ್ರಿಸುವ ಪ್ರಬಲ ಅಸ್ತ್ರವಾಗಿ ಪರಿಣಮಿಸಿದ್ದನ್ನು ಕಾಣಬಹುದು. ಇಲ್ಲಿ ಕಷ್ಟಪಡುತ್ತಾ ದುಡಿದದ್ದೆಲ್ಲವನ್ನೂ ಶೋಷಕ ವರ್ಗಕ್ಕೆ ತಂದೊಪ್ಪಿಸಿದರೆ ಮರಣಾನಂತರ ಸದ್ಗತಿ ದೊರೆಯುತ್ತದೆಂಬ ಭ್ರಮೆಯಲ್ಲಿ ಶೋಷಿತರನ್ನು ಕೆಡಹಿದ್ದರಿಂದ ಭೌತಿಕ ಲಾಭವಾದದ್ದು ಪ್ರಭುತ್ವಕ್ಕೆ. ಜೊತೆಯಲ್ಲಿ ರೂಪುಗೊಂಡ ಕರ್ಮ ಸಿದ್ಧಾಂತ ಶೋಷಿತರಿಗೆ ತಮ್ಮೆಲ್ಲ ಕಷ್ಟಗಳಿಗೂ ಪೂರ್ವ ಜನ್ಮದ ಕರ್ಮಫಲವೇ ಕಾರಣ ಎಂಬ ತಿಳಿವಳಿಕೆ ಕೊಡುವಲ್ಲಿ ಯಶಸ್ವಿಯಾಯಿತು. ಆದ್ದರಿಂದಲೇ ಶೋಷಣೆಯನ್ನು ಸಾಮಾನ್ಯ ಜನತೆ ಸಂತೋಷದಿಂದಲೇ ಸ್ವೀಕರಿಸಿದ್ದು.

ಕರ್ಮ ಸಿದ್ಧಾಂತವಾಗಲೀ, ಸದ್ಗತಿ ಕಲ್ಪನೆಯಾಗಲೀ ೨೧ನೇ ಶತಮಾನದ ಹೊಸ್ತಿಲಲ್ಲಿರುವ ವಿಚಾರಶೀಲರಿಗೆ ಭ್ರಮೆ, ಮೋಸ ಎನಿಸುತ್ತದೆ. ಆದರೆ ಅಂದಿನ ಸಾಮಾನ್ಯ ಜನತೆ ಇಂದು ನಾವು ಶೋಷಣೆ ಎನ್ನುವ ಶೋಷಣೆಯಲ್ಲೂ ತೃಪ್ತಿಯನ್ನು ಕಂಡಿತ್ತು. ಮಾನಸಿಕ ಸುಖವನ್ನು ಅನುಭವಿಸಿತ್ತು. ಪರಸ್ಪರ ಪ್ರೀತಿ-ವಿಶ್ವಾಸಗಳಿಂದ ಬದುಕಿತ್ತು, ನಾವು ಮೂರ್ಖತನವೆನ್ನಬಹುದಾದ ಪ್ರಾಣ ತ್ಯಾಗದಲ್ಲೂ ಒಂದು ತತ್ವನಿಷ್ಠೆಯನ್ನು ಕಂಡಿತ್ತು ಎನ್ನುವುದನ್ನು ಗಮನಿಸಬೇಕು. ಈ ಎಲ್ಲವುಗಳ ಜೊತೆಯಲ್ಲಿ ಪ್ರಾಚೀನ ಭಾರತದಲ್ಲಿ ವಿಚಾರಶೀಲ ತತ್ವಜ್ಞಾನಿಗಳು ಇದ್ದರು. ಅವರು ಲೋಕಾಯತರು, ಭೌತವಾದಕ್ಕೆ ಮನ್ನಣೆಯನ್ನು ಕೊಟ್ಟವರು. ಇವರು ಭಾವ ಪ್ರಪಂಚದಲ್ಲಿ ತೇಲಿಸುವ ಪುರೋಹಿತಶಾಹಿ ಸಿದ್ಧಾಂತಗಳನ್ನು ಪ್ರಶ್ನಿಸುತ್ತಿದ್ದರು. ಅದಕ್ಕಿಂತಲೂ ಮುಖ್ಯವಾಗಿ ನಮ್ಮ ವಿಜ್ಞಾನದ ಪರಂಪರೆಗೆ ಅಮೂಲ್ಯ ಕೊಡುಗೆಯನ್ನು ನೀಡಿದರು. ಈ ವಿಷಯದ ಬಗ್ಗೆ ಡಾ॥ ಜಿ. ರಾಮಕೃಷ್ಣ ಅವರು ಹೀಗೆ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ : ''ಲೋಕಾಯತವು ನಮ್ಮ ವಿಜ್ಞಾನದ ಪರಂಪರೆಗೆ ಮಹತ್ತರವಾದ ಕೊಡುಗೆ ನೀಡಿದೆ. ವೈದ್ಯಕೀಯ ವಿಜ್ಞಾನವೂ ಸೇರಿದಂತೆ ಪ್ರಕೃತಿ ವಿಜ್ಞಾನದ ಪದ್ಧತಿ ಮತ್ತು ಪ್ರಯೋಗಕ್ಕೆ ಉತ್ತಮ ಕೊಡುಗೆ ನೀಡಿರುವ ಬಹುತೇಕ ಪ್ರಾಚೀನ ಭಾರತೀಯ ವಿಜ್ಞಾನಿಗಳೆಲ್ಲಾ ಲೋಕಾಯತದ ಮೂಲಭೂತ ಸಿದ್ಧಾಂತವನ್ನು ಒಪ್ಪಿರುವಂತಹವರೇ ಆಗಿದ್ದಾರೆ. ಉದಾಹರಣೆಯೊಂದನ್ನು ನೋಡುವುದಾದರೆ ವೈದ್ಯಕೀಯ ವಿಜ್ಞಾನವು ಪ್ರಾತ್ಯಕ್ಷಿಕವಾಗಿ ಮಾನವ ಶರೀರದ ಸಮಗ್ರ ಜ್ಞಾನವನ್ನು ಪಡೆದಾಗ ಮಧ್ಯ ಪ್ರವೇಶ ಮಾಡಿ ಅದರಲ್ಲಿ ಉಂಟಾಗಿರಬಹುದಾದ ಏರುಪೇರುಗಳನ್ನು ಸರಿಪಡಿಸಿ ಸಮತೋಲನ ಮತ್ತೆ ನೆಲಸುವಂತೆ ಮಾಡಬಹುದು ಎಂದು ಹೇಳುತ್ತದೆ. ಇದರಲ್ಲಿ ಭೂತ ದ್ರವ್ಯಗಳ ಸಂಯೋಜನೆಯನ್ನು ಗಣನೆಗೆ ತೆಗೆದುಕೊಳ್ಳುವುದಕ್ಕೆ ಆದ್ಯತೆ. ಕಾರ್ಯಕಾರಣ ಭಾವವನ್ನು ಸ್ಥಿರೀಕರಿಸುವಲ್ಲಿ ಕರ್ಮಸಿದ್ಧಾಂತ, ಮೂಢನಂಬಿಕೆ ಇತ್ಯಾದಿಗಳಿಗೆ ಇಲ್ಲಿ ಸ್ಥಾನವಿಲ್ಲ. ಇದಕ್ಕೆ ಪ್ರತಿಯಾಗಿ ಭಾವನಾವಾದಿ ವೇದಾಂತ ಸಿದ್ಧಾಂತವು ವಿಜ್ಞಾನದ ಬೆಳವಣಿಗೆಗೆ ನೀಡಿರುವ ಕಾಣಿಕೆ ಅತ್ಯಲ್ಪ. ವಿಶ್ವದ ಅಸ್ತಿತ್ವವನ್ನು ಮಾಯೆಯೆಂದು ವ್ಯಾಖ್ಯಾನಿಸುವ ಅದ್ವೈತಿಗಳು ವಿಜ್ಞಾನಕ್ಕೆ ಕೊಡುವ ಮಹತ್ವ ಗಣನೀಯವೇನಲ್ಲ.''

*ಈಗ ಧರ್ಮದ ಹೆಸರಿನಲ್ಲಿ ಗುಜರಾತ್‌ನಲ್ಲಿ ನಡೆಸಲಾಗಿರುವ ನರಮೇಧವು ಜನರಲ್ಲಿ ಭಯಾನಕ ಸನ್ನಿವೇಶವನ್ನು ನಿರ್ಮಿಸುವ ಚಾಣಕ್ಯ ತಂತ್ರವನ್ನು ನೆನಪಿಸುತ್ತಿದೆ. ಬೂದಿಬಾಬಾಗಳು ನಡೆಸುವ ಪವಾಡಗಳು ಧನ ಸಂಗ್ರಹಣೆಯ ಚಾಣಕ್ಯ ತಂತ್ರವಲ್ಲದೆ ಬೇರೇನೂ ಆಗಿರಲು ಸಾಧ್ಯವಿಲ್ಲ. ದಿನೇ ದಿನೇ ಈ ಬೂದಿಬಾಬಾಗಳ ಸಂಖ್ಯೆ ಹೆಚ್ಚುತ್ತಾ ಪ್ರಭುತ್ವದ ಮೇಲೆ ಅವರು ಬೀರುವ ಪ್ರಭಾವವನ್ನು ಗಮನಿಸಿದರೆ ಮತ್ತೆ ಪುರೋಹಿತಶಾಹಿ ಮತ್ತು ಪ್ರಭುತ್ವ ಒಟ್ಟಾಗಿ ಪಿತೂರಿ ನಡೆಸುತ್ತಿವೆಯೇನೋ ಎನಿಸುತ್ತದೆ.*

ಬಂಡವಾಳಶಾಹಿ ಯುಗದಲ್ಲಿರುವ ನಮಗೆ ಭೌತವಾದವೆಂದರೆ ಲಾಭಗಳಿಕೆ, ಸ್ವಾರ್ಥ, ದುರಾಶೆ ಎಂಬ ಕಲ್ಪನೆಗಳು ಮೂಡಲು ಸಾಧ್ಯವಿದೆ. ಆದರೆ ಲೋಕಾಯತರ ಭೌತವಾದ, ಸಾಮಾಜಿಕ ನ್ಯಾಯ ಹಾಗೂ ಉದಾತ್ತ ಚಿಂತನೆಯನ್ನು ಆಧರಿಸಿತ್ತು ಎಂಬ ಅಂಶವನ್ನು ಡಾ॥ ದೇವಿಪ್ರಸಾದ್ ಚಟ್ಟೋಪಾಧ್ಯಾಯರು ತಮ್ಮ 'ಭಾರತೀಯ ದರ್ಶನಗಳು' ಎಂಬ ಕೃತಿಯಲ್ಲಿ ಹೇಳಿರುವ ಒಂದು ನಿದರ್ಶನದಿಂದ ಗ್ರಹಿಸಬಹುದು: ''ಕುರುಕ್ಷೇತ್ರ ಯುದ್ಧದಲ್ಲಿ ಜಯಗಳಿಸಿದ ಪಾಂಡವರು ರಾಜಧಾನಿಗೆ ಹಿಂದಿರುಗಿದಾಗ ಬ್ರಾಹ್ಮಣರು ಯುಧಿಷ್ಠಿರನನ್ನು ಆಶೀರ್ವದಿಸಲು ಕಾದಿದ್ದರು. ಅವರಲ್ಲಿ ಚಾರ್ವಾಕನೂ ಇದ್ದ. ಆತ ಯುಧಿಷ್ಠಿರನಿಗೆ ಹೀಗೆ ಹೇಳಿದ: 'ಇಲ್ಲಿ ನೆರೆದಿರುವ ಬ್ರಾಹ್ಮಣರು ನಿನ್ನನ್ನು ಶಪಿಸುತ್ತಾರೆ. ಏಕೆಂದರೆ ನೀನು ನಿನ್ನ ರಕ್ತ ಸಂಬಂಧಿಗಳನ್ನು ಕೊಲೆ ಮಾಡಿದ್ದೀಯ. ನಿನ್ನ ಸ್ವಂತ ಜನರನ್ನು ನಾಶಮಾಡಿ ನೀನು ಸಾಧಿಸಿದ್ದೇನು ? ನಿನ್ನ ಸ್ವಂತ ಹಿರಿಯರನ್ನು ಕೊಂದು ನಿನಗಾದ ಲಾಭವೇನು ?' ಹೀಗೆ ಮಾತನಾಡಿದ ಚಾರ್ವಾಕನನ್ನು ಉಳಿದ ಬ್ರಾಹ್ಮಣರು ಛದ್ಮವೇಷಧಾರಿಯಾದ ಪಿಶಾಚಿ ಎಂದು ಯುಧಿಷ್ಠಿರನಿಗೆ ಹೇಳಿದರು ಮತ್ತು ಅವನನ್ನು ಸುಟ್ಟುಹಾಕಿದರು.''

ಅರವಿಂದ ಚೊಕ್ಕಾಡಿ

ಭೌತವಾದವನ್ನು ಮುಂದಿಟ್ಟುಕೊಂಡ ಒಬ್ಬ ಚಾರ್ವಾಕ ತನಗೆ ಮುಂದೆ ಜನ್ಮವಿಲ್ಲವೆಂದು ತಿಳಿದುಕೊಂಡಿದ್ದರೂ ಸಮಾಜದ ಹಿತಬದ್ಧತೆಯನ್ನು ಸಾಧಿಸಲು ಯತ್ನಿಸಿದ. ಪ್ರಭುತ್ವದಲ್ಲಿ ತಾನು ಕಂಡುಕೊಂಡ ತಪ್ಪನ್ನು ನಿರ್ದಾಕ್ಷಿಣ್ಯವಾಗಿ, ನಿರ್ಭೀತನಾಗಿ ಪ್ರಶ್ನಿಸಿದ. ಇಂಥದೇ ಧೈರ್ಯ ಹಾಗೂ ವಿಚಾರಶೀಲತೆಗೆ ಹೆಸರಾದ ಇನ್ನೊಬ್ಬ ವ್ಯಕ್ತಿ ಗೌತಮ ಬುದ್ಧ. ಆತನ 'ಸಂಘಂ ಶರಣಂ ಗಚ್ಛಾಮಿ' ಎಂಬ ಮಾತುಗಳಲ್ಲಿ ಆಸ್ತಿಯ ಸಾಮೂಹಿಕ ಒಡೆತನದ ಹಕ್ಕಿನ ಪ್ರತಿಪಾದನೆ ನಡೆದಿರುವುದನ್ನು ಗಮನಿಸಬೇಕು. ಆದರೇನು ? ಇಂದು ನಮ್ಮಲ್ಲಿ ಉಳಿದಿರುವ ಭಾರತೀಯ ಸಂಸ್ಕೃತಿಯ ಪ್ರತಿಪಾದನೆ ಎಂದರೆ ವೈದಿಕ ಸಂಸ್ಕೃತಿಯ ಪ್ರತಿಪಾದನೆಯಷ್ಟೇ ಆಗಿದೆ !

ಇದಿಷ್ಟು ಪ್ರಾಚೀನ ಭಾರತದ ಸಾಂಸ್ಕೃತಿಕ ವಿಚಾರಗಳಾದರೆ ಮಧ್ಯಯುಗದ ಸುಮಾರಿಗೆ ಇಸ್ಲಾಂ ಧರ್ಮ ಭಾರತಕ್ಕೆ ಕಾಲಿಟ್ಟಿತು. ಅದು ತನ್ನ ಪ್ರತ್ಯೇಕ ಅಸ್ತಿತ್ವವನ್ನು ಕಾಯ್ದುಕೊಳ್ಳುತ್ತಲೇ ಭಾರತೀಯ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿ ಸೇರಿಕೊಂಡಿತು. ಅದಕ್ಕೆ ಮೊದಲ ಕಾರಣ ಇಲ್ಲಿಗೆ ಬಂದ ಇಸ್ಲಾಂ ಧರ್ಮ ಇಲ್ಲಿಯೇ ತನ್ನ ನೆಲೆಯನ್ನು ಕಂಡುಕೊಂಡುದು. ಎರಡನೆಯ ಕಾರಣ ಯುದ್ಧಕಾಲದಲ್ಲಿ ಮತಾಂತರಗೊಂಡ ಹಿಂದೂಗಳ ಸಾಂಸ್ಕೃತಿಕ ಮೂಲ ಸೆಲೆ. ಮೂರನೆಯ ಬಹುಮುಖ್ಯ ಕಾರಣ ಎರಡೂ ಧರ್ಮಗಳು ಜೀವನ ವಿಧಾನಕ್ಕೆ ಕೊಟ್ಟ ಮೊದಲ ಆದ್ಯತೆ. ಅಂಥ ಉದಾಹರಣೆಯನ್ನು ಧರ್ಮ ಬೋಧನೆಯಲ್ಲಿ ಕಂಡುಕೊಳ್ಳಬಹುದು. ಇಸ್ಲಾಂ ಧರ್ಮ, ಸ್ವ-ಧರ್ಮದ ರಕ್ಷಣೆಗಾಗಿ ಧರ್ಮಯುದ್ಧವನ್ನು ಆದೇಶಿಸುತ್ತದೆ. ಹಿಂದೂ ಧರ್ಮದ ಗ್ರಂಥ ಭಗವದ್ಗೀತೆಯಲ್ಲಿ ಕೃಷ್ಣ, ಪರಧರ್ಮದಲ್ಲಿ ಬದುಕುವುದಕ್ಕಿಂತಲೂ ಸ್ವಧರ್ಮದಲ್ಲಿ ಸಾಯುವುದೇ ಶ್ರೇಯಸ್ಕರವೆನ್ನುತ್ತಾನೆ. ಹೀಗಾಗಿ ಎರಡೂ ಧರ್ಮಗಳಲ್ಲಿ (ಪ್ರಭುತ್ವ ಮತ್ತು ಪುರೋಹಿತಶಾಹಿಯನ್ನು ಹೊರತುಪಡಿಸಿದರೆ) ಸಾಂಸ್ಕೃತಿಕ ಅಂಶಗಳು ಆರ್ಥಿಕ ಅಂಶಗಳಿಗಿಂತ ಹೆಚ್ಚಿನ ಆದ್ಯತೆಯನ್ನು ಪಡೆದಿದ್ದವು ಎಂದು ಪರಿಗಣಿಸಬಹುದು. ಇಂಥ ಸಾಂಸ್ಕೃತಿಕ ಜೀವನಕ್ಕೆ ಹೊಸ ತಿರುವು ಸಿಕ್ಕಿದ್ದು ಪಾಶ್ಚಿಮಾತ್ಯರ ಆಗಮನದಿಂದ. ಪಾಶ್ಚಾತ್ಯ ಸಮಾಜದಲ್ಲಿ 'ಕ್ರುಸೇಡ್'ನಂಥ ಕೆಲವೇ ಕೆಲವು ಪುರಾತನ ನಿದರ್ಶನಗಳನ್ನು ಬಿಟ್ಟರೆ ಧಾರ್ಮಿಕ ನೆಲೆಗಟ್ಟಿನಲ್ಲಿ ನಡೆದ ಹೋರಾಟಗಳು ಕಡಿಮೆಯೆಂದೇ ಹೇಳಬೇಕಾಗುತ್ತದೆ. ಅಲ್ಲಿ ರಾಜನ ದೈವತ್ವದ ಸಿದ್ಧಾಂತವಾಗಲಿ ಹಿಟ್ಲರ್‌ನ ಜನಾಂಗೀಯ ವಾದವಾಗಲಿ ದೀರ್ಘಕಾಲ ಸಾಮಾನ್ಯ ಜನತೆಯನ್ನು ನಿಯಂತ್ರಿಸುವಲ್ಲಿ ವಿಫಲವಾಗಿರುವುದನ್ನು ಕಾಣಬಹುದು. ಒಟ್ಟಾರೆಯಾಗಿ ಪಾಶ್ಚಾತ್ಯ ಸಮಾಜವನ್ನು ನಿಯಂತ್ರಿಸುವಲ್ಲಿ ಮೊದಲ ಆದ್ಯತೆ ಪಡೆದದ್ದು ಆರ್ಥಿಕ ಅಂಶಗಳು ಎಂದರೆ ತಪ್ಪಾಗಲಾರದು. ಆದ್ದರಿಂದಲೇ ಅಲ್ಲಿನ ಸಾಮಾನ್ಯ ಜನತೆ ಮೇಲುವರ್ಗದ ತುಳಿತವನ್ನು ಅಸಹಾಯಕತೆಯಿಂದ ಸ್ವೀಕರಿಸಿತೇ ಹೊರತು ಸ್ವ-ಸಂತೋಷದಿಂದಲ್ಲ. ಹಾಗಿರುವುದರಿಂದ ಪ್ರಭುತ್ವದ ವಿರುದ್ಧ ಹಲವು ದಂಗೆಗಳು, ಕ್ರಾಂತಿಗಳು ಕಾಣಿಸಿ ಕೊಂಡವು. ಪ್ರಭುತ್ವದ ವಿರುದ್ಧ ಜನತೆಯ ಹೋರಾಟಕ್ಕೆ ಒಂದು ವ್ಯವಸ್ಥಿತ ನೆಲೆಗಟ್ಟು ಒದಗಿಸಿಕೊಟ್ಟವನು ಕಾರ್ಲ್ ಮಾರ್ಕ್ಸ್. ರಷ್ಯಾ ಸಮತಾವಾದವನ್ನು ಒಪ್ಪಿಕೊಂಡ ನಂತರ, ಬಂಡವಾಳಶಾಹಿ ವ್ಯವಸ್ಥೆ ಕೂಡ ಕಾರ್ಮಿಕ ವರ್ಗಕ್ಕೆ ಹಲವು ಭೌತಿಕ ಸವಲತ್ತನ್ನು ಒದಗಿಸಿಕೊಟ್ಟಿತ್ತು. ಕಮ್ಯುನಿಸಂ ತಮ್ಮ ದೇಶಕ್ಕೆ ಕಾಲಿಡದಂತೆ ತಡೆಯುವುದಕ್ಕೆ ಅಂಥ ಸವಲತ್ತುಗಳನ್ನು ಒದಗಿಸಿಕೊಡುವುದು ಆ ದೇಶಗಳಿಗೆ ಅನಿವಾರ್ಯವೂ ಆಯಿತು.

ಪಾಶ್ಚಾತ್ಯ ಸಮಾಜ ಬದುಕುವ ರೀತಿಗಿಂತ ಬದುಕುವುದಕ್ಕೆ ಹೆಚ್ಚು ಆದ್ಯತೆ ಕೊಟ್ಟಿತೆಂಬುದನ್ನು ಒಂದು ಜನಜನಿತ ಮಾತಿನ ಮೂಲಕ ಇನ್ನಷ್ಟು ಸ್ಪಷ್ಟಪಡಿಸಬಹುದು. ಇಂಗ್ಲಿಷ್‌ನ ಒಂದು ಗಾದೆ ಮಾತು, ''ಯಾವಾಗ ಅತ್ಯಾಚಾರವನ್ನು ತಪ್ಪಿಸಲಾಗುವುದಿಲ್ಲವೋ ಆಗ ಅದರಿಂದ ಖುಷಿಪಡು'' ಎನ್ನುತ್ತದೆ. ಆದರೆ ಭಾರತೀಯ ನಂಬಿಕೆ 'ಶೀಲಹರಣಕ್ಕೊಳಗಾದ ಹೆಣ್ಣು ಬದುಕುವುದಕ್ಕಿಂತ ಸಾಯುವುದೇ ಮೇಲು' ಎನ್ನುತ್ತದೆ. ಪಾಶ್ಚಾತ್ಯ ಚಿಂತನೆಯಲ್ಲಿ ಪ್ರಾಣ ಮೊದಲ ಆದ್ಯತೆಯನ್ನು ಪಡೆದರೆ ಭಾರತೀಯ ಚಿಂತನೆಯಲ್ಲಿ ಮಾನ ಅಧಿಕ ಪ್ರಾಶಸ್ತ್ಯವನ್ನು ಪಡೆಯಿತು. ಇಂಥ ಗಾದೆ ಮಾತುಗಳು ಸಾಮಾನ್ಯ ಜನತೆಯ ಚಿಂತನೆಯಿಂದ ರೂಪುಗೊಳ್ಳುತ್ತವಾದ್ದರಿಂದ ಅದರ ಪ್ರಾಮುಖ್ಯತೆ ಗಣನೀಯವಾಗಿರುತ್ತದೆ.

ಪ್ರಜಾಪ್ರಭುತ್ವ ವ್ಯವಸ್ಥೆ ಪುರಾತನ ಭಾರತದ ಗಣರಾಜ್ಯಗಳಲ್ಲಿ ಕಂಡುಬಂದಿತ್ತಾದರೂ ದೀರ್ಘಕಾಲದ ರಾಜನ ಆಳ್ವಿಕೆಯ ನಂತರ ಮತ್ತೆ ನಮ್ಮನ್ನು ಪ್ರಜಾ ಪ್ರಭುತ್ವಕ್ಕೆ ಕಾಲೂರುವಂತೆ ಮಾಡಿದ್ದು ಬ್ರಿಟಿಷ್ ಪ್ರಭುತ್ವ. ಅದರೊಂದಿಗೆ ಈ ದೇಶದ ಸ್ವಾಭಾವಿಕ ಸಂಪನ್ಮೂಲಗಳು ಬಹುದೊಡ್ಡ ಪ್ರಮಾಣದಲ್ಲಿ ವಿದೇಶಗಳಿಗೆ ರವಾನೆ ಯಾಯಿತು. ಇಂಗ್ಲಿಷ್ ಶಿಕ್ಷಣ ಜಾರಿಗೊಂಡಿತು. 'ಸತಿ ಪದ್ಧತಿ'ಯಂಥ ಧಾರ್ಮಿಕ ಚೌಕಟ್ಟಿನ ಸಂಪ್ರದಾಯಗಳು ನಿಷೇಧಿಸಲ್ಪಟ್ಟುವು. ಎಲ್ಲಕ್ಕಿಂತ ಮುಖ್ಯವಾಗಿ ಪ್ರಭುತ್ವದ ದಬ್ಬಾಳಿಕೆಯನ್ನು ವಿರೋಧಿಸುವ ಶಕ್ತಿಯನ್ನು ಪಾಶ್ಚಾತ್ಯ ಚಿಂತನೆ ತಂದು ಕೊಟ್ಟಿತೆಂದರೆ ತಪ್ಪಾಗಲಿಕ್ಕಿಲ್ಲ. ಅದರ ಪರಿಣಾಮವಾಗಿ ಭಾರತದ ರಾಷ್ಟ್ರೀಯ ಚಳುವಳಿ ನಡೆದು ದೇಶ ಬ್ರಿಟಿಷ್ ಪ್ರಭುತ್ವದಿಂದ ಮುಕ್ತವಾಯಿತು. ಕೊನೆಗೆ ಪಾಶ್ಚಾತ್ಯ ಚಿಂತನೆ ಹಾಗೂ ಭಾರತೀಯ ಚಿಂತನೆಗಳ ಸಮ್ಮಿಶ್ರರೂಪವಾದ ರಾಜ್ಯಾಂಗವನ್ನು ರಚಿಸಿ ಅದರ ಆಳ್ವಿಕೆಯನ್ನು ಒಪ್ಪಿಕೊಂಡೆವು. ಜೊತೆಯಲ್ಲಿ ತಾಂತ್ರಿಕತೆಯೂ, ವಿಜ್ಞಾನವೂ

ಆಕಾಶದ ಕಪ್ಪು ಸಿಲೇಟಿನಲ್ಲಿರುವ
ಅಕ್ಷರ ನಕ್ಷತ್ರಗಳಿಗಿಲ್ಲ - ಪರೀಕ್ಷಾ ಜ್ವರ
ಒಂದರ ಹಿಂದೊಂದರಂತೆ ಹರಿವ
ಕಪ್ಪು ಇರುವೆ ಶಾಲೆಗಿಲ್ಲ - ಪರೀಕ್ಷಾ ಜ್ವರ

ತಂತಾನೆ ಅರಳಿ ನಗುವ ಹೂಗಳ
ಮಧುರ ಮಕರಂದಕ್ಕಿಲ್ಲ - ಪರೀಕ್ಷಾ ಜ್ವರ
ಕಣಿವೆರಕ್ಕಸನ ಕೈಸೆರೆಯಾಗಿರುವ
ಬೆಣ್ಣೆ ಮೋಡಗಳ ಬಿಳುಪಿಗಿಲ್ಲ - ಪರೀಕ್ಷಾ ಜ್ವರ

ಅಮ್ಮನ ಹೃದಯದ ತಂಪುಮರದ
ಸುವಿಶಾಲ ನೆರಳಿಗಿಲ್ಲ - ಪರೀಕ್ಷಾ ಜ್ವರ
ಅರಿಯದ ಕಂದನ ಚೆಂದುಟಿಯ ಜೊಲ್ಲು
ಮಸಿಯಿಲ್ಲದ ಮನಸಿಗಿಲ್ಲ - ಪರೀಕ್ಷಾ ಜ್ವರ

ದೇಶ ವಿದೇಶದ ಕಲಬೆರಕೆ ಎಣ್ಣೆ ಕುಡಿದು
ಕರ್ಕಶ ಕೂಗುಗಳ ಕಂಠಪಾಠವೊಪ್ಪಿಸುತ್ತಾ
ಹೊಗೆಯ ನಂಜುಂಡು ಕೆಮ್ಮುತ್ತಿರುವ
ಸ್ಕೂಲು ಮಕ್ಕಳ ಶ್ವಾಸಕೋಶಗಳಿಗೆ
-ತಪ್ಪದಲ್ಲೋ ಪರೀಕ್ಷಾ ಜ್ವರ.



ಎ. ಚಂದ್ರಶೇಖರ ನಂಗಲಿ
೩೨೮೮೪, ಪಿ. ಸಿ. ಬಡಾವಣೆ, ಕೋಲಾರ-೫೬೩ ೧೦೧

ದೊಡ್ಡ ಪ್ರಮಾಣದಲ್ಲಿಯೇ ಪ್ರಗತಿಯಾದವು.

ಪ್ರಜಾಪ್ರಭುತ್ವದಲ್ಲಿ ಆಳುವ ಸರಕಾರಗಳು ಜನತೆಯ ಸರಕಾರವಾಗಿದ್ದು, ಬೇಕಾಗಿಯೋ ಬೇಡದೆಯೋ ಜನರಿಗೆ ಉತ್ತರಿಸಬೇಕಾದ ಬದ್ಧತೆಯನ್ನು ಹೊಂದಿವೆ. ಇಲ್ಲಿ ಆಳುವವರೂ ತಪ್ಪೆಸಗಿದಾಗ ಶಿಕ್ಷೆಗೊಳಪಡಿಸ ಬಹುದಾದ ನ್ಯಾಯಾಂಗವಿದೆ. ಒಳಿತು ಕೆಡುಕುಗಳನ್ನು ವಿಮರ್ಶಿಸುವ ಹಕ್ಕನ್ನು ರಾಜ್ಯಾಂಗವು ಜನತೆಗೆ ಕೊಡ ಮಾಡಿದೆ. ಸಾಮಾಜಿಕ ನ್ಯಾಯ ಸರಕಾರದ ಆದ್ಯತೆ ಯಾಗಿದೆ. ಜನತೆಯ ಸಾರ್ವಭೌಮತ್ವದಲ್ಲಿರುವ ಒಂದೊಂದು 'ಮತ'ವೂ ಆಳುವ ವರ್ಗ ಅನಿವಾರ್ಯ ವಾಗಿ ಜನತೆಯ ಕ್ಷೇಮಪಾಲನೆಯ ದೃಷ್ಟಿಯನ್ನಿಟ್ಟು ಕೊಳ್ಳುವಂತೆ ಮಾಡಿದೆ. ಇವೆಲ್ಲವುಗಳಿಂದ ಪ್ರಜಾ ಸರಕಾರಗಳು ರಾಜ ಪ್ರಭುತ್ವಕ್ಕಿಂತ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿವೆ ಎಂಬ ವಿಷಯವನ್ನು ಮನಗಾಣಬಹುದು.

ಈಗ ನಾವು ಒಪ್ಪಿಕೊಂಡಿರುವ ಪ್ರಜಾಪ್ರಭುತ್ವವೂ ದಬ್ಬಾಳಿಕೆಯಿಂದ ಹೊರತಾಗಿಲ್ಲ. ''ಲೋಕಾಃಸಮಸ್ತಾಃ ಸುಖಿನೋ ಭವಂತು'' ಎಂಬುದು ಭಾರತೀಯ ಚಿಂತನೆ. ಆದರೆ ಆಶಯವೊಂದೇ ಗುರಿಯನ್ನು ಸಾಧಿಸುವುದಿಲ್ಲ ವೆಂಬುದನ್ನು ನೆನಪಿಟ್ಟುಕೊಳ್ಳಬೇಕು. ಆ ಗುರಿಯನ್ನು ಸಾಧಿಸಬೇಕೆಂಬ ಛಲ, ಶ್ರದ್ಧೆ ಇರಬೇಕಾಗುತ್ತದೆ. ಕನಿಷ್ಠ ಅಂಥ ಪ್ರಯತ್ನಗಳಾದರೂ ನಡೆಯಬೇಕು. ಗ್ರಾಮ ಸ್ವರಾಜ್ಯ, ಸರ್ವೋದಯಗಳಂಥ ಚಿಂತನೆಗಳು ಅಂಥ ಪ್ರಯತ್ನಗಳಾಗಿವೆ. ಅವು ವಿಫಲವಾಗಿವೆ ನಿಜ. ಅದಕ್ಕೆ ಕಾರಣ ಪ್ರಜಾಪ್ರಭುತ್ವದಲ್ಲಿರುವ ಸ್ವಾರ್ಥ-ಲಾಲಸೆಯ ವ್ಯವಸ್ಥೆ.

ಇತ್ತೀಚೆಗೆ ಬೆಳೆಯತೊಡಗಿರುವ ಮತೀಯ ಮೂಲ ಭೂತವಾದವನ್ನು ಗಮನಿಸಿದರೆ, ನಾವು ಪ್ರಜಾಪ್ರಭುತ್ವ ಕ್ಕಿಂತ ಒಳ್ಳೆಯ ವ್ಯವಸ್ಥೆಯನ್ನು ಕಂಡುಕೊಳ್ಳುವ ಬದಲು ಹಿಂದಕ್ಕೆ ಹೋಗುತ್ತಿದ್ದೇವೇನೋ ಎನಿಸುತ್ತದೆ. ನಮ್ಮ ಪ್ರಭುತ್ವ ಬಳಸುತ್ತಿರುವ ಕೆಲವು ತಂತ್ರಗಾರಿಕೆಯನ್ನು ಗಮನಿಸಿದರೆ ಚಾಣಕ್ಯ ನೆನಪಿಗೆ ಬರುತ್ತಾನೆ. ಆತ ಅಧಿಕಾರ ವನ್ನು ಭದ್ರಪಡಿಸಿಕೊಳ್ಳುವುದಕ್ಕಾಗಿ ಜನರಿಗೆ ಪೊಳ್ಳು ಆಶ್ವಾಸನೆಗಳನ್ನು ಕೊಡುವಂತೆ ಪ್ರಭುತ್ವಕ್ಕೆ ಸಲಹೆ ಮಾಡು ತ್ತಾನೆ. ಯುವರಾಜ ತಂದೆಗೆ ಎದುರಾಡದಂತೆ ಆತನನ್ನು ಮದ್ಯಾಸಕ್ತನನ್ನಾಗಿಯೂ, ಸ್ತ್ರೀ ಲಂಪಟನನ್ನಾಗಿಯೂ ತಯಾರುಮಾಡಬೇಕು ಎನ್ನುತ್ತಾನೆ. ಹೀಗೆನ್ನುವ ಚಾಣಕ್ಯ ಜನರನ್ನು ಹೇಗೆ ಹಿಡಿತದಲ್ಲಿಟ್ಟುಕೊಂಡಿದ್ದ ಎನ್ನುವುದನ್ನು ಪ್ರೊ॥ ಆರ್. ಎಸ್. ಶರ್ಮ ಈ ರೀತಿ ಹೇಳುತ್ತಾರೆ: ''ರಾಕ್ಷಸನ ವೇಷಧಾರಿಯಾದ ಗೂಢಚಾರನೊಬ್ಬನನ್ನು ಒಂದು ಮರದಲ್ಲಿ ಅವತರಿಸುವಂತೆ ಮಾಡಿ, ಪ್ರತಿದಿನ ನರಬಲಿಯೊಂದು ಬೇಕೆಂದು ಕೇಳುವಂತೆ ಮಾಡಿ, ದುಷ್ಟ ಶಕ್ತಿಯೊಂದರ ಅವತಾರವಾಗಿದೆಯೆಂದು ಭಯಾನಕ ಸನ್ನಿವೇಶವೊಂದನ್ನು ಉಂಟುಮಾಡುತ್ತಿದ್ದ; ನಂತರ ದುಷ್ಟಶಕ್ತಿಯ ಉಚ್ಚಾಟನೆಗೆಂದು ನಗರದ ಮತ್ತು ಹಳ್ಳಿಯ ಜನರಿಂದ ಹಣ ಸಂಗ್ರಹಣೆ ಮಾಡುತ್ತಿದ್ದ.

ಈಗ ಧರ್ಮದ ಹೆಸರಿನಲ್ಲಿ ಗುಜರಾತ್‌ನಲ್ಲಿ ನಡೆಸ ಲಾಗಿರುವ ನರಮೇಧವು ಜನರಲ್ಲಿ ಭಯಾನಕ ಸನ್ನಿವೇಶವನ್ನು ನಿರ್ಮಿಸುವ ಚಾಣಕ್ಯ ತಂತ್ರವನ್ನು ನೆನಪಿಸುತ್ತಿದೆ. ಬೂದಿಬಾಬಾಗಳು ನಡೆಸುವ ಪವಾಡಗಳು ಧನ ಸಂಗ್ರಹಣೆಯ ಚಾಣಕ್ಯ ತಂತ್ರವಲ್ಲದೆ ಬೇರೇನೂ ಆಗಿರಲು ಸಾಧ್ಯವಿಲ್ಲ. ದಿನೇ ದಿನೇ ಈ ಬೂದಿಬಾಬಾಗಳ ಸಂಖ್ಯೆ ಹೆಚ್ಚುತ್ತಾ ಪ್ರಭುತ್ವದ ಮೇಲೆ ಅವರು ಬೀರುವ ಪ್ರಭಾವವನ್ನು ಗಮನಿಸಿದರೆ ಮತ್ತೆ ಪುರೋಹಿತಶಾಹಿ ಮತ್ತು ಪ್ರಭುತ್ವ ಒಟ್ಟಾಗಿ ಪಿತೂರಿ ನಡೆಸುತ್ತಿವೆಯೇನೋ ಎನಿಸುತ್ತದೆ. ಹಾಗಾದಾಗ ಇದು ಪ್ರಜಾತಂತ್ರವಾಗಿರು ವುದಿಲ್ಲ. ಬದಲು ಪ್ರಜಾತಂತ್ರದ ಮುಖವಾಡ ಧರಿಸಿರುವ ರಾಜಪ್ರಭುತ್ವವೇ ಆಗುತ್ತದೆ ! ಆದರೆ ಅಂತರರಾಷ್ಟ್ರೀಯ ಮಟ್ಟದಲ್ಲಿ ಅವಹೇಳನಕ್ಕೆ ಗುರಿಯಾಗದಿರಲು ಪ್ರಜಾ ತಂತ್ರದ ಮುಖವಾಡ ಅನಿವಾರ್ಯವಾಗುತ್ತದೆ.

ಈ ತಂತ್ರಗಾರಿಕೆಗಳಿಗೆ ನಮ್ಮ ಪ್ರಾಚೀನ ಸಂಸ್ಕೃತಿ ಯನ್ನು ಆರೋಪಿಸುವ ಮಂದಿ ಅದೇ ಸಂಸ್ಕೃತಿಯ ಇನ್ನೊಂದು ಮುಖವನ್ನು ಗಮನಿಸಬೇಕು. ಮತ್ತೆ ಚಾಣಕ್ಯನನ್ನು ಉದಾಹರಿಸುವುದಾದರೆ ಆತ ಕೆಳವರ್ಗದ ಹಕ್ಕುಗಳನ್ನು ಎತ್ತಿಹಿಡಿಯುತ್ತಾನೆ. ಕೆಳವರ್ಗ ಮೇಲು ವರ್ಗದ ಒಳಿತಿಗಾಗಿಯೇ ಬದುಕಬೇಕಾದ್ದಿಲ್ಲ. ಬದುಕುವುದು ಆ ವರ್ಗದ ಹಕ್ಕು ಎನ್ನುತ್ತಾನೆ. ಮನಸ್ಸಿಗೆ ಸಂತೋಷಕೊಡುವ ಹಬ್ಬ ಹರಿದಿನಗಳು ಸಾರ್ವಜನಿಕ ಹಿತಾಸಕ್ತಿಗೆ ಭಂಗ ತರಬಾರದು ಎನ್ನುತ್ತಾನೆ. ವಿವಾಹ ವಿಧಿಗಳಲ್ಲಿ ಸ್ಮೃತಿಗಳ ಪರಿವಾಗಿಯೇ ಇದ್ದರೂ ಹೆಂಡತಿಯ ಕರ್ತವ್ಯವನ್ನು ಮಾತ್ರ ಆತ ಗುರುತಿಸುವುದಿಲ್ಲ. ಗಂಡನ ಕರ್ತವ್ಯವನ್ನು ಗುರುತಿಸುತ್ತಾನೆ, ವಿಧವಾ ಪುನರ್ವಿವಾಹ ವನ್ನು ಪರಿಗಣಿಸುತ್ತಾನೆ.

ಬೂದಿಬಾಬಾಗಳು ಮಾತ್ರ ನಮ್ಮ ಸಂಸ್ಕೃತಿಯಲ್ಲ. ಅಹಿಂಸೆ, ದಯೆಗಳ ಬಗ್ಗೆ ಹೇಳಿದ ಮಹಾವೀರನೂ ನಮ್ಮ ಸಂಸ್ಕೃತಿಯ ಒಬ್ಬ ಮಹಾವ್ಯಕ್ತಿ. ಪವಾಡಗಳನ್ನು ನಡೆಸಲೇ ಬಾರದೆಂದು ತನ್ನ ಶಿಷ್ಯ ವರ್ಗಕ್ಕೆ ಆಜ್ಞೆ ಮಾಡಿದ್ದ ಗೌತಮ ಬುದ್ಧನೂ ನಮ್ಮ ಸಂಸ್ಕೃತಿಯ ಒಬ್ಬ ದಾರ್ಶನಿಕನೇ. ಭೌತ ವಾದವನ್ನು ಎತ್ತಿಹಿಡಿದ ಲೋಕಾಯತರೂ ಈ ಸಂಸ್ಕೃತಿಯ ಒಂದು ಭಾಗವೇ.

ಇಷ್ಟೆಲ್ಲಾ ಇದ್ದರೂ ನಮ್ಮ ಪ್ರಭುತ್ವ ಭಾವನಾವಾದವನ್ನು ಬೆಂಬಲಿಸುತ್ತಿರುವುದರ ಮರ್ಮವನ್ನು ಗಮನಿಸಬೇಕು. ಭಾವನಾವಾದ ಸುಲಭದಲ್ಲಿ ಸಾಮಾನ್ಯ ಜನರನ್ನು ಭ್ರಮೆ ಯೊಳಕ್ಕೆ ಕೆಡಹಬಲ್ಲುದು. ಬೃಹದಾರಣ್ಯಕೋಪನಿಷತ್ತು ಉಲ್ಲೇಖಿಸುವಂತೆ ಯಾಜ್ಞವಲ್ಕ್ಯ, ಮರಣದ ಬಗ್ಗೆ ಹೀಗೆ ಹೇಳುತ್ತಾನೆ : ''ಆಕಾಂಕ್ಷೆಯಿಂದ ಹೊರಗಿರುವಾತ, ಆಕಾಂಕ್ಷೆಯಿಂದ ಮುಕ್ತನಾದವ, ಆಕಾಂಕ್ಷೆ ಪೂರೈಸಿರುವಾತ, ಆತ್ಮವೇ ಆಕಾಂಕ್ಷೆಯಾಗಿರುವವನು-ಅಂಥವನ ಶ್ವಾಸ ನಿರ್ಗಮಿಸುವುದಿಲ್ಲ. ಬ್ರಹ್ಮವೇ ಆಗಿರುವ ಆತ್ಮ ಬ್ರಹ್ಮಕ್ಕೆ ಹೋಗಿ ಸೇರುತ್ತದೆ,'' ಹೀಗೆ ಹೇಳುವ ಯಾಜ್ಞವಲ್ಕ್ಯ ಜನಕರಾಜ ದಾನವಾಗಿ ಕೊಟ್ಟ ಸಾವಿರ ಗೋವುಗಳನ್ನು ಸ್ವೀಕರಿಸುವಲ್ಲಿ ಯಾವ ತಾತ್ಸಾರವನ್ನೂ ತೋರಿಸುವುದಿಲ್ಲ. ಮತ್ತೆ ಆತ ಭೌತಿಕ ಸುಖಕ್ಕೆ ಹಿಂದಿರುಗುತ್ತಾನೆ !

ನಮ್ಮ ಪ್ರಭುತ್ವ ಮತ್ತು ಬೂದಿಬಾಬಾಗಳು ಮಿಳಿತ ವಾಗಿ ಪ್ರೋತ್ಸಾಹಿಸುವ ಭಾವನಾವಾದದ ಹಿನ್ನೆಲೆಯೂ ಇದೇ. ಭಾರತೀಯ ಸಂದರ್ಭದಲ್ಲಿ ಭೌತವಾದದ ಮೂಲಕ ಜನರನ್ನು ತೃಪ್ತಿಪಡಿಸಿ ಅಧಿಕಾರವನ್ನು ಭದ್ರ ಪಡಿಸಿಕೊಳ್ಳುವುದು ಅವರಿಗೆ ಕಷ್ಟಕರವಾಗುತ್ತದೆ. ಏಕೆಂದರೆ, ಭೌತವಾದವನ್ನು ನಮ್ಮ ರಾಜ್ಯಾಂಗ ಒಪ್ಪಿಕೊಂಡಿದೆಯೇ ಹೊರತು ಸಮಾಜ ಇನ್ನೂ ಒಪ್ಪಿ ಕೊಂಡಿಲ್ಲ. ಭಾವನಾವಾದ ಪ್ರೇರಿತ ಜಾತಿ ವ್ಯವಸ್ಥೆಯನ್ನು ಸಾಮಾಜಿಕವಾಗಿ ಆಚರಿಸಲಾಗುತ್ತಿದೆ. ಒಬ್ಬ ದಲಿತ ಶಾಸಕನಾಗುವುದಕ್ಕೆ, ಮಂತ್ರಿಯಾಗುವುದಕ್ಕೆ, ಅಧಿಕಾರಿ ಯಾಗುವುದಕ್ಕೆ ಇಂದು ಸಾಧ್ಯವಾಗಿರುವುದು ರಾಜ್ಯಾಂಗದ ನಿಯಮದಿಂದಲೇ ಹೊರತು ಸಾಮಾಜಿಕ ಮನಸ್ಸಿನಿಂದಲ್ಲ ವೆನ್ನುವುದನ್ನು ಗಮನಿಸಬೇಕು. ಬಹುಮುಖಿ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳುವುದಕ್ಕೆ ಜಾತಿ, ಧರ್ಮಗಳು ಸಹಾಯಕ ಎನ್ನುವ ಮಾತು ಒಪ್ಪತಕ್ಕದ್ದೆ. ಆದರೆ ನಮ್ಮಲ್ಲಿ ನಡೆಯುವ ಜಾತಿ ಸಮ್ಮೇಳನಗಳು, ಧರ್ಮ ಸಮ್ಮೇಳನಗಳು ಆಯಾ ಜಾತಿಗೆ, ಧರ್ಮಕ್ಕೆ ಸೀಮಿತವಾಗಿ ಪ್ರತ್ಯೇಕತಾವಾದವನ್ನು ಪ್ರೋತ್ಸಾಹಿಸುತ್ತಿವೆ. ಒಂದು ವೇಳೆ ಸಾಮಾಜಿಕ ಅಂತರವೂ ಕಡಿಮೆಯಾಗಬೇಕು, ಬಹುಮುಖಿ ಸಂಸ್ಕೃತಿಯೂ ಉಳಿಯಬೇಕೆಂಬ ಆಶಯವಿದ್ದರೆ ಒಂದು ಧರ್ಮದ, ಒಂದು ಜಾತಿಯ ಸಮ್ಮೇಳನಕ್ಕೆ ಅನ್ಯಧರ್ಮೀಯ, ಅನ್ಯ ಜಾತೀಯ ಜನರನ್ನು ಆಹ್ವಾನಿಸಿ ಅವರಿಗೆ ತಮ್ಮ ಸಂಸ್ಕೃತಿಯನ್ನು ಪರಿಚಯಿಸಿ ಪರಸ್ಪರ ಹತ್ತಿರವಾಗು ವಂತಾಗಬೇಕು. ಆದರೆ ಇದಕ್ಕೆಲ್ಲ ನಮ್ಮ ಹುಸಿ ಜಾತ್ಯತೀತವಾದಿಗಳು ಸಿದ್ಧರಾಗಲಾರರು. ನಮ್ಮಲ್ಲಿ ಚಾತುರ್ವರ್ಣ್ಯ ಪದ್ಧತಿ ಇದೆ. ಅವುಗಳಲ್ಲಿ ಹಲವು ಉಪ ಪಂಗಡಗಳಿವೆ. ಅವು ಮೇಲು-ಕೀಳು ಭಾವನೆಗಳ ಆಗರ ವಾಗಿವೆ. ಇಂಥಲ್ಲಿ ಮೇಲು ವರ್ಗದೊಂದಿಗೆ ಸಹಪಂಕ್ತಿ ಭೋಜನಕ್ಕೆ ಸಿದ್ಧರಾಗುವ ಹಲವು ಜಾತ್ಯತೀತವಾದಿಗಳು. ಕೆಳವರ್ಗದೊಂದಿಗೆ ಸಹಪಂಕ್ತಿ ಭೋಜನಕ್ಕೆ ಸಿದ್ಧರಾಗು ವುದಿಲ್ಲ ! ಇಂಥ ಜಾತ್ಯತೀತವಾದಿಗಳಿರುವ ತನಕ ಒಂದು ಜಾತಿಯ ಸಮ್ಮೇಳನಕ್ಕೆ ಇನ್ನೊಂದು ಜಾತಿಯ ಜನರನ್ನು ಅತಿಥಿಗಳಾಗಿ ಆಹ್ವಾನಿಸುವುದು ಸಾಧ್ಯವಾಗಲಾರದು.

ಸಂಪ್ರದಾಯ ಪ್ರೇರಿತ ವ್ಯವಸ್ಥೆಯಿಂದ ರಾಜ್ಯಾಂಗ ದತ್ತ ಹೊರಳಲು ನಮ್ಮ ಸಾಮಾಜಿಕ ಮನಸ್ಸು ಇನ್ನೂ ಸಿದ್ಧಗೊಂಡಿಲ್ಲವೆನ್ನಬಹುದು. ಸ್ತ್ರೀ ಸಮಾನತೆ ಅಂಥ ಒಂದು ನಿದರ್ಶನ. ಸ್ವತಃ ಸ್ತ್ರೀಯರೂ ಸೇರಿದಂತೆ ಸಮಾಜ ಅದನ್ನು ಸ್ವೀಕರಿಸಿಲ್ಲ. ಸರಕಾರದಿಂದ ಅಥವಾ ಕಾನೂನು ಬದ್ಧ ಸಂಸ್ಥೆಯಿಂದ ನೌಕರರಾಗಿ ನೇಮಕಗೊಂಡ ಸ್ತ್ರೀ-ಪುರುಷ ನೌಕರರು ಸಮಾನ ವೇತನ ಪಡೆಯಲು ಸಾಧ್ಯವಾಗಿದೆ ಅಷ್ಟೇ. ಆದರೆ ಕೂಲಿ ಕಾರ್ಮಿಕರ ವೇತನದಲ್ಲಿ ಗಂಡಾಳು-ಹೆಣ್ಣಾಳುಗಳಿಗೆ ತಾರತಮ್ಯ ವಿರುವುದನ್ನು ಕಾಣಬಹುದು.

ಅದೇ ರೀತಿ ಸಂಪ್ರದಾಯ ಪ್ರೇರಿತ ವಿವಾಹ ವಿಧಿಗಳು ಕೂಡ. ರಾಜ್ಯಾಂಗೀಯ ಕಾನೂನಿನ ಪ್ರಕಾರ ಬಲಾತ್ಕಾರದಿಂದ ನಡೆಸಲಾದ ವಿವಾಹವನ್ನು ರದ್ದು ಪಡಿಸುವ ಅಧಿಕಾರ ನ್ಯಾಯಾಲಯಕ್ಕಿದೆ. ನಮ್ಮಲ್ಲಿ ಇಂಥ ಬಲವಂತದ ವಿವಾಹಗಳು ದೊಡ್ಡ ಪ್ರಮಾಣದಲ್ಲಿಯೇ ನಡೆಯುತ್ತಿವೆ. ಆದರೂ ನ್ಯಾಯಾಲಯದ ಮೂಲಕ ಅದನ್ನು ರದ್ದುಪಡಿಸಿದ ಉದಾಹರಣೆಗಳು ಬಹಳ ಕಡಿಮೆ ! ಹಿಂದಿನ ವರ್ಷ ದೇಶದ ಉಚ್ಚ ನ್ಯಾಯಾಲಯವೊಂದು ವಿವಾಹಕ್ಕೆ ಮೊದಲೇ ಪ್ರಾಯಪ್ರಬುದ್ಧರಾದ ಸ್ತ್ರೀ-ಪುರುಷರು ಒಟ್ಟಿಗೆ ವಾಸಿಸುವುದನ್ನು ಎತ್ತಿಹಿಡಿಯಿತು. ಈ ತೀರ್ಪನ್ನು ಕೊಟ್ಟ ನ್ಯಾಯಾಧೀಶರು ''ಸಾಮಾಜಿಕ ನೀತಿ ಮತ್ತು ಕಾನೂನಿಗೆ ವ್ಯತ್ಯಾಸವಿದೆ'' ಎಂದರು.

ಇವೆಲ್ಲ ಕೆಲವು ಉದಾಹರಣೆಗಳಷ್ಟೆ. ಸಾಮಾಜಿಕ ಮನಸ್ಸಿಗೂ ರಾಜ್ಯಾಂಗಕ್ಕೂ ಬಹಳ ಅಂತರವಿದೆ

ಎನ್ನುವುದಕ್ಕೆ ಇಂಥ ಸಾಕಷ್ಟು ಉದಾಹರಣೆಗಳು ಸಿಗುತ್ತವೆ. ಹೀಗಿರುವಲ್ಲಿ ಮೂಲಭೂತವಾದವು ಅಧಿಕಾರವನ್ನು ಭದ್ರಪಡಿಸಿಕೊಳ್ಳುವುದಕ್ಕಿರುವ ಸುಲಭ ಮಾರ್ಗವೆಂದು ತೋರುವುದರಲ್ಲಿ ಆಶ್ಚರ್ಯವೇನಿಲ್ಲ.

ಆದರೆ ಮೂಲಭೂತವಾದದ ಅಪಾಯವನ್ನು ಗ್ರಹಿಸುವುದು ಇಂದಿನ ಅಗತ್ಯವಾಗಿದೆ. ಅದು ಅಲ್ಪ ಸಂಖ್ಯಾತ ಸಮುದಾಯದಲ್ಲಿ ಒಂದು ಅಭದ್ರತೆಯ ವಾತಾವರಣವನ್ನು ನಿರ್ಮಿಸಬಲ್ಲುದು. ಹಲವು ಧರ್ಮ-ಆಚರಣೆಗಳೆಲ್ಲ ಇದ್ದರೂ ರಾಷ್ಟ್ರನಿಷ್ಠೆಯ ಪ್ರಶ್ನೆ ಬಂದಾಗ ಇಡೀ ದೇಶ ಒಂದು ಶಕ್ತಿಯಾಗಿ ನಡೆದುಕೊಂಡದ್ದನ್ನು ನಾವು ಗಮನಿಸಬಹುದು. ಈ ಮೂಲಭೂತವಾದ ಸಾಮುದಾಯಿಕ ರಾಷ್ಟ್ರನಿಷ್ಠೆಯನ್ನು ಕದಲಿಸಬಲ್ಲುದು. ಸಾರ್ವಜನಿಕ ಶಾಂತಿಗೆ ಭಂಗ ತಂದು ಪರಸ್ಪರ ಅವಿಶ್ವಾಸ-ಅಪನಂಬಿಕೆಗಳನ್ನು ಹೆಚ್ಚಿಸಬಹುದು. ಸಂಕುಚಿತ ಮನೋಭಾವನೆಗೆ ಇಂಬು ಕೊಡಬಲ್ಲುದು. ಮಿಶ್ರ ಸಂಸ್ಕೃತಿಯನ್ನು ಬಹುಕಾಲದಿಂದಲೂ ಕಾಯ್ದುಕೊಂಡು ಬಂದು ರೂಪಿಸಲಾದ ಶಾಂತಿ, ಸಹಬಾಳ್ವೆ, ಸರಳ ಬದುಕು - ಉದಾತ್ತ ಚಿಂತನೆಯಂಥ ಭಾರತೀಯ ಸಾಂಸ್ಕೃತಿಕ ಚಿಂತನೆಯನ್ನು ಧೂಳೀಪಟ ಮಾಡಿಬಿಡಬಲ್ಲುದು. ನಮ್ಮನ್ನು ನಾವು ಜಾಗತೀಕರಣ ಪ್ರಕ್ರಿಯೆಗೆ ಒಡ್ಡಿಕೊಂಡಿರುವ ಈ ಸಂದರ್ಭದಲ್ಲಿ ಆರ್ಥಿಕವಾಗಿ ನಾವು ಬಲಾಢ್ಯಶಕ್ತಿಯಾಗಬೇಕಾಗಿದೆ. ಆದರೆ ಮೂಲಭೂತವಾದ ಒಂದು ಕಡೆಯಿಂದ ಸಂಪತ್ತು ಲೂಟಿಗೈದು ನಾಶಪಡಿಸತೊಡಗಿದರೆ ಇನ್ನೊಂದು ಕಡೆಯಿಂದ ಜನರಲ್ಲಿ ಅಭದ್ರತೆಯ ವಾತಾವರಣವನ್ನು ಮೂಡಿಸಿ ದುಡಿಯುವ ಶಕ್ತಿಯನ್ನು ಕುಂಠಿತಗೊಳಿಸಬಲ್ಲದು. ಇಂಥ ಮೂಲಭೂತವಾದಕ್ಕೆ ಬಲಿಯಾಗುತ್ತಿರುವವರು ಸಾಮಾನ್ಯವಾಗಿ ಬಡಜನತೆಯಾಗಿರುತ್ತಾರೆ ಎನ್ನುವುದನ್ನು ಗಮನಿಸಿದಾಗ ರಾಜ್ಯಾಂಗದ ಪ್ರಸ್ತಾವನೆ ಹೊಂದಿರುವ ಸಮಾಜವಾದಿ ಸಮಾಜ ನಿರ್ಮಾಣದ ಆಶಯ ಕುಸಿಯುತ್ತಿದೆಯೇನೋ ಎನಿಸುತ್ತಿದೆ. ಈ ಅಭಿಪ್ರಾಯಕ್ಕೆ ಪೂರಕವಾಗಿ ಕೇಂದ್ರ ಗೃಹಸಚಿವರು, ಸಮಾಜವಾದಿ ಸಮಾಜ ಇಂದಿಗೆ ಅಪ್ರಸ್ತುತವಾಗಿರುವುದರಿಂದ ಸಂವಿಧಾನದಿಂದ ಆ ಪದವನ್ನು ತೆಗೆದು ಹಾಕುವುದರತ್ತ ಒಲವು ತೋರಿದ್ದರು ಎಂಬುದನ್ನು ಗಮನಿಸಬೇಕು. ಹೀಗಾದಲ್ಲಿ ಆರ್ಥಿಕವಾಗಿ ನಿರ್ಗತಿಕರಾಗುವ ಜನತೆಗೆ ಪ್ರಶ್ನಿಸುವ ಸಾಮರ್ಥ್ಯ ಇಲ್ಲವಾಗಬಹುದು.

ಮೂಲಭೂತವಾದ ಹಿಂದೂ ಧರ್ಮೇತರರನ್ನು ಮಾತ್ರ ತುಳಿಯಲು ಉದ್ದೇಶವನ್ನು ಹೊಂದಿದೆ ಎಂದು ಭಾವಿಸಬೇಕಾಗಿಲ್ಲ. ಹಿಂದೂಗಳು ಕೂಡ ಪ್ರಭುತ್ವದ ವಿರುದ್ಧ ಧ್ವನಿ ಎತ್ತದಂತೆ ಮಾಡುವ ಹಲವು ಕಾರ್ಯಾಚರಣೆಗಳು ನಡೆಯುತ್ತಿವೆ. ದೇಶದ ಮಾನವ ಸಂಪನ್ಮೂಲ ಸಚಿವರಿಗೆ ವಿಚಾರವಾದಿಗಳು ಬೌದ್ಧಿಕ ಭಯೋತ್ಪಾದಕರಂತೆ ಕಾಣಿಸುತ್ತಾರೆ! ಇರ್ಫಾನ್ ಹಬೀಬ್, ಸುಮಿತ್ ಸರ್ಕಾರ್, ಆರ್. ಎಸ್. ಶರ್ಮ, ರೋಮಿಲಾ ಥಾಪರ್ ಅವರೆಲ್ಲ 'ಭಯೋತ್ಪಾದಕರಿಗಿಂತ ಹೀನರು' ಎನಿಸುತ್ತದೆ! ಈ ಬಗ್ಗೆ ತಮ್ಮ ಅಭಿಪ್ರಾಯವನ್ನು ಕೊಟ್ಟಿರುವ ಅರ್ಥಶಾಸ್ತ್ರಜ್ಞ ಅಮರ್ತ್ಯ ಸೇನ್ ಹೀಗೆ ಹೇಳುತ್ತಾರೆ: ''ಈ ವರದಿಯು ನಿಜವೇ ಆಗಿದ್ದಲ್ಲಿ ನಾವೆಲ್ಲ ಥರಥರ ನಡುಗಬೇಕು. ಇತಿಹಾಸಕಾರರನ್ನು ಭಯೋತ್ಪಾದಕರೊಂದಿಗೆ ಜೋಡಿಸುವುದು ತಪ್ಪು ವರ್ಗೀಕರಣವೆಂಬ ತರ್ಕದೋಷ. ಇಲ್ಲಿ ಹೆಸರಿಸಿದ ಇತಿಹಾಸಕಾರರು ಇಡೀ ಜಗತ್ತಿನ ಮನ್ನಣೆಗೆ ಪಾತ್ರರಾದವರು. ಅವರ ಬಗ್ಗೆ ಇಂಥ ಟೀಕೆಯನ್ನು ಯಾರಾದರೂ – ಅದರಲ್ಲೂ ಶಿಕ್ಷಣ ಖಾತೆಯ ಹೊಣೆ ಹೊತ್ತಿರುವ ಕೇಂದ್ರ ಸಚಿವರು – ಮಾಡಿಯಾರೆಂದು ನಾನು ನಂಬಲಾರೆ. ಪ್ರಾಯಶಃ ತಪ್ಪು ವರದಿಯಾಗಿರಬೇಕು.''

ಮಾನವ ಸಂಪನ್ಮೂಲ ಸಚಿವರಿಗೆ ಮೇಲೆ ಹೆಸರಿಸಲಾದ ಇತಿಹಾಸಕಾರರ ಚಿಂತನೆಯಲ್ಲಿ ದೋಷಗಳು ಕಂಡು ಬಂದಿರಬಹುದು. ಹಾಗೆಂದರೆ ಯಾವ ವ್ಯಕ್ತಿ ಎಷ್ಟೇ ಮಹಾನ್ ಚಿಂತಕನಾಗಿದ್ದರೂ ಆತನ ಚಿಂತನೆಗಳಲ್ಲಿ ದೋಷಗಳಿರುವುದು ಸಹಜವೇ ಆಗಿದೆ. ಹಾಗೆ ಚಿಂತನೆಯಲ್ಲಿ ದೋಷಗಳಿರುವುದರಿಂದಲೇ ಮುಂದಿನ ಚಿಂತನೆ ನಡೆಯಲು ಅವಕಾಶವಾಗುತ್ತದೆ. ಅಂಥ ಚಿಂತನಾ ದೋಷಗಳು ಕಂಡುಬಂದರೆ ಧಾರಾಳವಾಗಿ ಪ್ರಶ್ನಿಸುವುದಕ್ಕೆ, ಚರ್ಚಿಸುವುದಕ್ಕೆ, ಚಿಂತನಾದೋಷವನ್ನು ಇಂದಿನ ಸ್ಥಿತಿಗೆ ತಕ್ಕಂತೆ ಸರಿಪಡಿಸಿಕೊಳ್ಳುವುದಕ್ಕೆ ನಮ್ಮ ರಾಜ್ಯಾಂಗದಲ್ಲಿ ಅವಕಾಶವಿದೆ. ಜವಾಬ್ದಾರಿಯುತ ಸ್ಥಾನದಲ್ಲಿರುವ ಸಚಿವರು ಅಂಥ ಒಂದು ಮುಕ್ತ ಜಿಜ್ಞಾಸೆಗೆ ಚಾಲನೆ ನೀಡಬಹುದಿತ್ತು. ಆದರೆ ಹಾಗಾಗಲಿಲ್ಲ. ಅದಕ್ಕೆ ಕಾರಣವಿದೆ. ಪ್ರಭಾವಶಾಲಿ ವಿಚಾರಶೀಲ ವಿದ್ವಾಂಸರಿರುವ ತನಕ ಮೂಲಭೂತವಾದದ ಹುಳುಕುಗಳನ್ನು ಬಯಲಿಗೆಳೆಯುತ್ತಾರೆ ಎಂಬುದು ಅದರ ಪ್ರಾಯೋಜಕರಿಗೆ ಗೊತ್ತಿದೆ. ದೈಹಿಕವಾಗಿ ಪ್ರಭಾವಿ ವಿಚಾರಶೀಲರನ್ನು ನಾಶಪಡಿಸುವುದು ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಕಷ್ಟಕರವೆಂಬುದೂ ಗೊತ್ತಿದೆ. ಅದಕ್ಕೆಂದೇ ಅವರ ಹೆಸರಿಗೆ ಮಸಿ ಬಳಿಯುವ ಕಾರ್ಯಕ್ಕೆ ಉದ್ಯುಕ್ತರಾಗುತ್ತಾರೆ. ಹೇಗಾದರೂ ಮಾಡಿ ಪ್ರಭಾವಶಾಲಿ ವಿಚಾರಶೀಲರನ್ನು ದಮನಿಸದಿದ್ದರೆ ಅವರು ಭಾವೀ ಪೀಳಿಗೆಯನ್ನು ವಿಚಾರಶೀಲರನ್ನಾಗಿ ಸಿದ್ಧಪಡಿಸುತ್ತಾರೆ ಎಂಬ ಅಂಶವನ್ನು ಮೂಲಭೂತವಾದಿಗಳು ಗ್ರಹಿಸಿದ್ದಾರೇನೋ ಎನಿಸುತ್ತದೆ. ಒಂದೆಡೆ ಜಾಗತೀಕರಣ- ಖಾಸಗೀಕರಣ ನಿರಂತರವಾಗಿ ಸಾಗಿ ಬಡಜನತೆಯನ್ನು ಇನ್ನಷ್ಟು ನಿರ್ಗತಿಕರನ್ನಾಗಿಸಿದಾಗ, ಒಪ್ಪತ್ತಿನ ಊಟಕ್ಕೆ ಗತಿ ಇಲ್ಲದಾದಾಗ ವೈಚಾರಿಕ ಚಿಂತನೆ ಅವರಿಗೆ ದಾರಿ ತೋರುತ್ತದೆ. ಆಗ ಪ್ರಭುತ್ವದ ದುಷ್ಟ ವೃತ್ತಿಯ ವಿರುದ್ಧದ ಕೂಗು ವ್ಯಾಪಕವಾಗಿ ಅಧಿಕಾರ ನಷ್ಟವಾಗುತ್ತದೆ. ಇಂದಿನ ನಮ್ಮ ಶಿಕ್ಷಣ ವ್ಯವಸ್ಥೆ ವೈಚಾರಿಕ ಪ್ರಜ್ಞೆಗೆ ಆದ್ಯತೆ ಕೊಟ್ಟಿದೆ. ಈ ಎಲ್ಲ ಅಂಶಗಳನ್ನು ಗ್ರಹಿಸಿದ ಪ್ರಭುತ್ವ ಶಿಕ್ಷಣದಲ್ಲಿ ಮುಖ್ಯವಾಗಿ ವೈಚಾರಿಕ ಪ್ರಜ್ಞೆಯನ್ನು ಜಾಗೃತಗೊಳಿಸಬಲ್ಲ ಇತಿಹಾಸ ಪಠ್ಯವನ್ನು ಬದಲಿಸತೊಡಗಿದೆಯೇ? (ಸದ್ಯ ಸುಪ್ರಿಂಕೋರ್ಟ್ ಅಂಥ ಬದಲಾವಣೆಗೊಂಡ ಪಠ್ಯವನ್ನು ಜಾರಿಗೊಳಿಸುವುದಕ್ಕೆ ತಡೆಯಾಜ್ಞೆ ವಿಧಿಸಿರುವುದು ಸಮಾಧಾನಕರ ಅಂಶ). ಈ ರೀತಿ ಬದಲಾವಣೆಗೊಂಡ ಪಠ್ಯ ವೈಚಾರಿಕ ಪ್ರಜ್ಞೆಯನ್ನು, ವಿಮರ್ಶೆಯನ್ನು ಆದ್ಯತೆಯಾಗಿ ಇರಿಸಿಕೊಂಡಿರದೆ, ಸತ್ಯವನ್ನು ಮರೆಮಾಚುವ ರೀತಿಯಲ್ಲಿ ಪ್ರಾಚೀನ ಪರಂಪರೆಯನ್ನು ಬೋಧಿಸುವುದಕ್ಕೆ ಆದ್ಯತೆ ಕೊಟ್ಟಿರುವ ಸೂಚನೆ ಈಗಾಗಲೇ ಸಿಕ್ಕಿದೆ. ಅಂಥವುಗಳಲ್ಲಿ ಪ್ರಾಚೀನ ಕಾಲದಲ್ಲಿ ಬ್ರಾಹ್ಮಣರು ಗೋಮಾಂಸವನ್ನು ಸ್ವೀಕರಿಸುತ್ತಿದ್ದರು ಎಂಬ ವಿಚಾರವನ್ನು ಸಾಂಸ್ಕೃತಿಕ ದೃಷ್ಟಿಯಿಂದ ಹೊರಗಿಡುವುದು ಸೂಕ್ತ ಎಂದು ಹೇಳಲಾಗಿದೆ. ಈಗ ಒಂದು ಪ್ರಶ್ನೆ ಕೇಳಬೇಕಾಗುತ್ತದೆ. ಮಹಾಭಾರತದಲ್ಲಿ ಯುಧಿಷ್ಠಿರ ಹೆಂಡತಿಯನ್ನು ಒತ್ತೆ ಇಟ್ಟು ಜೂಜಾಡಿದ ಎನ್ನುವುದನ್ನು ತಿಳಿದ ಮಾತ್ರಕ್ಕೆ ಇಂದು ನಾವೂ ಅದನ್ನು ಮಾಡುತ್ತೇವೆಯೇ? ಅಂದಮೇಲೆ ಬ್ರಾಹ್ಮಣರು ಮಾಂಸಾಹಾರ ಸ್ವೀಕರಿಸುತ್ತಿದ್ದರು ಎಂದು ತಿಳಿದರೆ ಅದೇಕೆ ತಪ್ಪು ಅಭಿಪ್ರಾಯ ಮೂಡಬೇಕು? ಈ ಕಾರ್ಯಯೋಜನೆಯ ಭಾಗವಾಗಿ ಪುರಾತನ ಭಾರತದಲ್ಲಿ ಜೈನ ಧರ್ಮದ ಅಸ್ತಿತ್ವಕ್ಕೆ ಸಂಬಂಧಿಸಿದಂತೆ ಪ್ರೊ|| ಆರ್. ಎಸ್. ಶರ್ಮ ಅವರು ಉತ್ಖನನದ ಆಧಾರದ ಮೂಲಕ ಸಾಬೀತುಪಡಿಸಿದ ವಿಷಯವನ್ನು ಪಠ್ಯ ಪುಸ್ತಕದಿಂದ ತೆಗೆದು ಹಾಕಲಾಗಿದೆ ಎಂಬ ವಿಚಾರವನ್ನು 'ಫ್ರಂಟ್‌ಲೈನ್' ಪತ್ರಿಕೆ ವರದಿ ಮಾಡಿತ್ತು.

ಈ ಎಲ್ಲ ಕಾರ್ಯವಿಧಾನಗಳ ಒಟ್ಟು ಉದ್ದೇಶ ಮೂಲಭೂತವಾದವನ್ನೇ ಸಂಸ್ಕೃತಿ ಎಂದು ಬಿಂಬಿಸುವ ಪ್ರಯತ್ನವೆನ್ನದೆ ಅನ್ಯಮಾರ್ಗವಿಲ್ಲ. ಅಂಥವರಿಗೆ ಒಂದು ಪವಾಡವನ್ನು ಬಯಲು ಮಾಡಹೊರಟರೆ ಜನರ ಭಾವನೆಗಳನ್ನು ನೋಯಿಸುತ್ತಿದ್ದಾರೆ ಎನಿಸುತ್ತದೆ. ಅದಕ್ಕೆ ರಾಜ್ಯಾಂಗವು ಕೊಡಮಾಡಿದ ಧಾರ್ಮಿಕ ಸ್ವಾತಂತ್ರ್ಯದ ಹಕ್ಕನ್ನು ಉದಾಹರಿಸುತ್ತಾರೆ. ನಿಜ, ರಾಜ್ಯಾಂಗದ ೨೫, ೨೬, ೨೭ ಮತ್ತು ೨೮ನೆಯ ವಿಧಿಗಳು ಧಾರ್ಮಿಕ ಸ್ವಾತಂತ್ರ್ಯದ ಬಗ್ಗೆ ಹೇಳುತ್ತವೆ. ಆದರೆ ಅದೇ ರಾಜ್ಯಾಂಗದ ೫೧ ಎ(ಎಚ್) ವಿಧಿ ನಿಯಮವು ವೈಜ್ಞಾನಿಕ ಮನೋಭಾವನೆ, ಮಾನವೀಯತೆ, ಜಿಜ್ಞಾಸೆ ಮತ್ತು ಸುಧಾರಣಾ ಪ್ರವೃತ್ತಿಯನ್ನು ಅಭಿವೃದ್ಧಿಗೊಳಿಸುವುದು ಮೂಲಭೂತ ಕರ್ತವ್ಯದ ಭಾಗವೆಂದು ಹೇಳುತ್ತದೆ. ಧಾರ್ಮಿಕ ಸ್ವಾತಂತ್ರ್ಯವನ್ನು ಹಕ್ಕು ಎಂದು ಪರಿಗಣಿಸಿರುವ ರಾಜ್ಯಾಂಗ ವೈಜ್ಞಾನಿಕ ಮನೋಭಾವನೆಯನ್ನು ಕರ್ತವ್ಯ ಎಂದು ಪರಿಗಣಿಸಿರುವುದನ್ನು ಗಮನಿಸಬೇಕು.

ರಾಜ್ಯಾಂಗವು ಕೊಡಮಾಡಿದ ಧಾರ್ಮಿಕ ಸ್ವಾತಂತ್ರ್ಯದ ಹಕ್ಕಿನ ಬಗ್ಗೆ ಮಾತನಾಡುವಾಗ ಅದರ ಒಟ್ಟು ಆಶಯಗಳನ್ನು ನೆನಪಿಟ್ಟುಕೊಳ್ಳಬೇಕು. ಒಂದಲ್ಲ ಒಂದು ರೀತಿಯಲ್ಲೇ ಅಸಮಾನತೆ, ಅಸ್ಪೃಶ್ಯತೆ, ಸ್ತ್ರೀಶೋಷಣೆ, ಪ್ರಾಣಿಬಲಿ ಇತ್ಯಾದಿಗಳು 'ಧರ್ಮ'ದೊಂದಿಗೆ ಥಳಕು ಹಾಕಿಕೊಂಡಿವೆ. ಆದರೆ ರಾಜ್ಯಾಂಗವು ಇವೆಲ್ಲವನ್ನೂ ನಿರಾಕರಿಸಿದೆ. ರಾಜ್ಯಾಂಗದ ಪ್ರಸ್ತಾವನೆ 'ಜಾತ್ಯಾತೀತ' ನಿಲುವನ್ನು ಎತ್ತಿಹಿಡಿಯುತ್ತದೆ. ಅದನ್ನು 'ಧರ್ಮ ನಿರಪೇಕ್ಷ', 'ಸರ್ವಧರ್ಮ ಸಮಭಾವ' ಎಂದೆಲ್ಲ ವ್ಯಾಖ್ಯಾನಿಸುವವರಿದ್ದಾರೆ. ಮೂಲತಃ ಅದರರ್ಥ 'ಪ್ರಸ್ತುತ ಬದುಕು' ಎಂದು. ಅಂದರೆ ನಮ್ಮ ರಾಜ್ಯಾಂಗ ಪ್ರಸ್ತುತ ಬದುಕಿಗೆ, ಅರ್ಥಾತ್ ಭೌತಿಕವಾದಕ್ಕೆ ಆದ್ಯತೆಯನ್ನು ಕೊಟ್ಟಿದೆ ಎಂದು ಗ್ರಹಿಸಬಹುದು. ಅಂದಾಗ ಪಾರಮಾರ್ಥಿಕ ಚಿಂತನೆ, ಭಾವನಾವಾದ, ಅವುಗಳಿಗೆ ತಳಹದಿಯಾದ ಧರ್ಮ ಎಲ್ಲವೂ ಎರಡನೆಯ ಆದ್ಯತೆಯಾಗುತ್ತದೆ. ಪ್ರಸ್ತುತ ಬದುಕನ್ನು ಹಾಳುಗೆಡಹುವ ಮೂಲಭೂತವಾದಕ್ಕಂತೂ ಅಲ್ಲಿ ಸ್ಥಾನವೇ ಇಲ್ಲ.

ಅರವಿಂದ ಚೊಕ್ಕಾಡಿ
ಕಮಲದೀಪ, ತಿಳ್ಳಾರು ಕ್ರಾಸ್ ರಸ್ತೆ ಕಾರ್ಕಳ - ೫೭೪ ೧೦೪



# ತೆಹರಿ ಅಣೆಕಟ್ಟಿನ ವಿವಾದ

**ಮ. ಶ್ರೀ. ಮುರಳೀಕೃಷ್ಣ**

ಕಳೆದ ವರ್ಷದ ಅಂತ್ಯದಲ್ಲಿ ನರ್ಮದಾ ನದಿಗೆ ಅಡ್ಡವಾಗಿ ಕಟ್ಟುತ್ತಿರುವ ಸರ್ದಾರ್ ಸರೋವರ್ ಅಣೆಕಟ್ಟು ಸುದ್ದಿಯಲ್ಲಿತ್ತು. ಈಗ ಮತ್ತೆ ತೆಹರಿ ಅಣೆಕಟ್ಟಿನ ಸರದಿ. ತೆಹರಿ ಪಟ್ಟಣ ಉತ್ತರಾಂಚಲ ರಾಜ್ಯದ ಮುಖ್ಯ ಜಿಲ್ಲಾ ಕೇಂದ್ರ. ಗಂಗಾನದಿಯ ಮೂಲ ನದಿಗಳಾದ ಭಾಗೀರಥಿ ಹಾಗೂ ಬನಾಂಗಿನಿ ಸಂಗಮವಾಗುವುದು ಇಲ್ಲೇ. ಕ್ರಿ. ಶ. ೧೮೧೫ರಲ್ಲಿ ಈ ಪಟ್ಟಣವನ್ನು ಕಟ್ಟಿದ್ದು ಮಹಾರಾಜ್ ಸುದರ್ಶನ್ ಶಹ.

ತೆಹರಿಯಿರುವುದು ಹಿಮಾಲಯದಲ್ಲಿ. ಇಲ್ಲಿನ ಎತ್ತರವಾದ ಬೆಟ್ಟ-ಗುಡ್ಡಗಳು, ನದಿ - ಜಲಪಾತಗಳು, ಕಾನನ ಕಣಿವೆಗಳು, ನಿಸರ್ಗದ ವೈವಿಧ್ಯತೆಗಳು ತಲಾಂತರಗಳಿಂದ ನಮ್ಮ ದೇಶದ ಪರಿಸರಕ್ಕೆ ನೀಡಿರುವ ಕೊಡುಗೆಗಳು ಅಪಾರ ಹಾಗೂ ಅನನ್ಯ. ಇಂತಹ ಪ್ರದೇಶದಲ್ಲಿ ಭಾಗೀರಥಿ ನದಿಯ ಮೇಲೆ ಅಣೆಕಟ್ಟನ್ನು ಕಟ್ಟಲು ನಿರ್ಧರಿಸಿದ್ದು ೧೯೭೨ರಲ್ಲಿ. ಇದಕ್ಕಾಗಿ ಉತ್ತರ ಪ್ರದೇಶ ಹಾಗೂ ಕೇಂದ್ರ ಸರ್ಕಾರಗಳ ಸಹಯೋಗದಲ್ಲಿ ತೆಹರಿ ಜಲ ಅಭಿವೃದ್ಧಿ ನಿಗಮವನ್ನು ಸ್ಥಾಪಿಸಲಾಯಿತು. ಆಗ ಅಂದಾಜು ಮಾಡಲಾಗಿದ್ದ ವೆಚ್ಚ ಸುಮಾರು ರೂ. ೧೯೭ ಕೋಟಿ. ಇದರಿಂದ ಸುಮಾರು ೬೦೦ ಮೆಗಾವಾಟ್ ಜಲವಿದ್ಯುತ್ತನ್ನು ಉತ್ಪಾದಿಸಬಹುದೆಂದು ನಿರೀಕ್ಷಿಸಲಾಗಿತ್ತು. (ಈಗ ಸುಮಾರು ೨೪೦೦ ಮೆಗಾವಾಟ್). ಹಾಗೆಯೇ, ಈ ಪ್ರದೇಶದ ಹಲವು ಗ್ರಾಮಗಳಿಗೆ, ಪಟ್ಟಣಗಳಿಗೆ ಕೃಷಿ ಹಾಗೂ ಸಂಬಂಧಿತ ಚಟುವಟಿಕೆಗಳಿಗೆ ಸಾಕಷ್ಟು ಪ್ರಮಾಣದ ನೀರನ್ನು ಪೂರೈಸಬಹುದೆಂದು ಪ್ರತೀಕ್ಷಿಸಲಾಗಿತ್ತು.

ಈ ಯೋಜನೆ ಪೂರ್ಣಗೊಂಡಾಗ, ಏಷ್ಯಾದ ಅತಿ ಎತ್ತರದ ಹಾಗೂ ಪೂರ್ಣ ಪ್ರಮಾಣದ ದೇಶೀಯ ತಂತ್ರಜ್ಞಾನ ಬಳಸಿಕೊಂಡು ಕಟ್ಟಿದ ವಿಶ್ವದ ನಾಲ್ಕನೇ ಬಹು ಎತ್ತರದ ಅಣೆಕಟ್ಟು ಆಗುತ್ತದೆ ಎಂಬುದು ಇದರ ಹೆಗ್ಗಳಿಕೆ. (ಎತ್ತರ ಸುಮಾರು ೨೬೦ ಮೀಟರ್). ಆದರೆ ಎಪ್ಪತ್ತರ ದಶಕದಲ್ಲೇ ಈ ಬೃಹತ್ ಯೋಜನೆ ಬಗ್ಗೆ ಅಪಸ್ವರಗಳೆದ್ದವು. ಭಾರತದಲ್ಲಾಗಿರುವ ಹೆಚ್ಚಿನ ಭೂಕಂಪಗಳು ಹಿಮಾಲಯ ಕೇಂದ್ರೀಕೃತವಾಗಿರುವುದರಿಂದ ಈ ಅಣೆಕಟ್ಟಿನ ಸುರಕ್ಷತೆಯ ಬಗ್ಗೆ ಪ್ರಶ್ನೆ ಮಾಡಲಾಯಿತು. ಎಲ್ಲಾ ಅತಿ ದೊಡ್ಡ ನೀರಾವರಿ ಯೋಜನೆಗಳಿಂದ ಉದ್ಭವಿಸುವ ತಲ್ಲಣಗಳು ಈ ಭಾಗದ ಜನರಲ್ಲೂ ಸ್ವಾಭಾವಿಕವಾಗಿ ತಲೆದೋರಿತು. ಪ್ರಪಂಚದಲ್ಲೇ ನಿಸರ್ಗ ಐಸಿರಿಯ ಕಿರೀಟದಂತಿರುವ ಭವ್ಯ ಹಿಮಾಲಯದ ಸೂಕ್ಷ್ಮ ಪರಿಸರದ ನಾಶ, ಜನರ ಸ್ಥಳಾಂತರ, ಪುನರ್ವಸತಿ ಮುಂತಾದ ವಿಷಯಗಳು ಸೇರಿಕೊಂಡವು.

ಅದೇ ಸಮಯದಲ್ಲಿ ಹಿಮಾಲಯದ ಪರಿಸರದ ಮೇಲೆ ಆಗುತ್ತಿದ್ದ ಅವ್ಯಾಹತ ದಾಳಿಗಳ ವಿರುದ್ಧ ಜನರಲ್ಲಿ ಜಾಗೃತಿಯನ್ನು ಮೂಡಿಸುವುದರಲ್ಲಿ ಪ್ರೇರಕ ಶಕ್ತಿಯಾದರು ಸುಂದರಲಾಲ್ ಬಹುಗುಣ. ಗಾಂಧೀಜಿಯವರ ತತ್ವಗಳಿಂದ ಪ್ರೇರೇಪಿತರಾಗಿದ್ದ ಈತ ಚಿಪ್ಕೊ ಜನಾಂದೋಳನಕ್ಕೆ ನಾಂದಿ ಹಾಡಿದರು. ಇದಕ್ಕೆ ಸಾಮಾನ್ಯ ಜನರು ಪ್ರತಿಕ್ರಿಯಿಸಿದ ರೀತಿ ಅದ್ಭುತವಾಗಿತ್ತು. ಸಹಜವಾಗಿ, ಪರಿಸರವಾದಿಗಳ ಗಮನ ತೆಹರಿ ಅಣೆಕಟ್ಟಿನತ್ತ ತಿರುಗಿತು.

ಈ ಅಣೆಕಟ್ಟಿನ ಆಯಸ್ಸಿನ ಬಗ್ಗೆ ಭಿನ್ನ ಅಭಿಪ್ರಾಯಗಳು ವ್ಯಕ್ತವಾದವು. ಸರ್ಕಾರ ಅದು ದೀರ್ಘಕಾಲ ಸುರಕ್ಷಿತವಾಗಿರುವುದೆಂದು ಸಾರಿತು. ಆದರೆ ಹಿಮಾಲಯ ಪರಿಸರದ ತಜ್ಞರಾದ ಪ್ರೊ॥ ವಾಲ್ದಿಯಾ ಹಾಗೂ ಇತರರು ಅದು [illegible] ವರ್ಷಗಳ ಕಾಲ ಬಾಳಬಹುದೆಂದು ಅಭಿಪ್ರಾಯ ಪಟ್ಟರು. ಭೂಕಂಪನಾ ವಿಶೇಷಜ್ಞರು ಅಣೆಕಟ್ಟಿನ ಕೆಳಗೆ ೧೫ ಕಿ.ಮೀ. ಆಳದಲ್ಲಿ ರಿಕ್ಟರ್ ಮಾಪನದಲ್ಲಿ ೮ರ ಪ್ರಮಾಣದ ಭೂಕಂಪವಾದರೂ ಯಾವುದೇ ಅನಾಹುತವಾಗುವುದಿಲ್ಲವೆಂಬ ಅಭಿಮತ ವ್ಯಕ್ತಪಡಿಸಿದರು. ೧೯೬೦ರಲ್ಲಿ ಇಟಲಿಯಲ್ಲಿ ಸಂಭವಿಸಿದ ಭೂಕಂಪದಿಂದ ವಿಜಾನ್ ಅಣೆಕಟ್ಟೆಗೆ ಏನೂ ಧಕ್ಕೆಯಾಗಲಿಲ್ಲ. ಆದರೆ ಸುತ್ತಮುತ್ತಲಿನ ಬೆಟ್ಟಗಳು ಕುಸಿದು ಸುಮಾರು ೨೫೦೦ಕ್ಕೂ ಹೆಚ್ಚಿನ ಮಂದಿ ಹತರಾದರು. ತೆಹರಿಗೇನಾದರೂ ಈ ದುಃಸ್ಥಿತಿ ಒದಗಿದರೆ ಸುಮಾರು ೩ ಲಕ್ಷ ಮಂದಿ ಸಾವನ್ನಪ್ಪಿ ಅನೇಕ ಗ್ರಾಮಗಳು -ಪಟ್ಟಣಗಳು ನೀರು ಪಾಲಾಗುತ್ತವೆಯೆಂದು ಬಹುಗುಣ ಎಚ್ಚರಿಕೆ ನೀಡಿದರು. (ಇತ್ತೀಚಿನ ಸಂದರ್ಶನವೊಂದರಲ್ಲಿ ಮಾತನಾಡುತ್ತಾ ಅವರು ತೆಹರಿ ಅಣೆಕಟ್ಟಿನ ಸುತ್ತ ಇರುವ ಮಲ್ಲಿದೇವಲ್ ಹಾಗೂ ಸಿರಯ್ ಬೆಟ್ಟಗಳಲ್ಲಿ ಬಿರುಕುಗಳು ಕಾಣಿಸಿಕೊಂಡು, ಕೆಲವೊಮ್ಮೆ ಭೂಕುಸಿತವೂ ಆಗಿದೆ ಎಂದು ತಿಳಿಸಿದ್ದಾರೆ.) ಆದರೆ ಗಂಗೆಯ ಮೇಲೆ ಹಲವು ಅಣೆಕಟ್ಟುಗಳನ್ನು ಕಟ್ಟಲಾಗಿವೆಯೆಂದು ಅವುಗಳ ಬಗ್ಗೆ ಯಾರೂ ಚಕಾರವೆತ್ತಿರಲಿಲ್ಲವೆಂದು ಸರ್ಕಾರದ ಸಮರ್ಥನೆ. ಪ್ರತಿಭಟನಕಾರರು ತಮ್ಮ ಮನೆ, ಭೂಮಿ, ಆಸ್ತಿಗಳ ನಾಶದ ಜೊತೆಗೆ ಸಾಂಸ್ಕೃತಿಕ ಪರಂಪರೆ, ಇತಿಹಾಸ ಹಾಗೂ ಭಾಗೀರಥಿ ನದಿಯ ಸ್ವಯಂ ನಿರ್ಮಲೀಕರಣ ಗುಣವೂ ಹಾಳಾಗುವುದೆಂದು ದನಿ ಎತ್ತಿದರು. ಅಣೆಕಟ್ಟೆಗೆ ಹಸಿರು ನಿಶಾನೆ ಸಿಕ್ಕಾಗ ನಿರ್ಮಾಣದ ಕಾರ್ಯಗಳ ಜೊತೆಯಲ್ಲೇ ಪುನರ್ವಸತಿಯಾಗಬೇಕೆಂದು ನಿಗದಿಪಡಿಸಲಾಗಿತ್ತು. ಆದರೆ ಅದು ಕಾರ್ಯಗತವಾಗಲಿಲ್ಲವೆಂದು ಬೊಟ್ಟು ಮಾಡಿ ತೋರಿಸಿದರು.

ಈ ಬಗೆಯ ವಾದ, ವಿವಾದಗಳೆದ್ದಾಗ, ಸರ್ಕಾರ ಇತರ ವಿಷಯಗಳಲ್ಲಿ ನಿರ್ಧರಿಸುವಂತೆ, ತೆಹರಿ ಅಣೆಕಟ್ಟಿನ ವಿಷಯದಲ್ಲೂ ಸಮಿತಿಗಳನ್ನು ನೇಮಕ ಮಾಡಿತು. ವರದಿಗಳು ಹೊರಬಂದವು. ಇವುಗಳಲ್ಲಿ ಒಮ್ಮತವಿರದಿದ್ದರೂ, ಸರ್ಕಾರ ಅಣೆಕಟ್ಟನ್ನು ಮುಂದುವರಿಸಲು ನಿಶ್ಚಯಿಸಿತು. ಇದಕ್ಕೆ ವಿರೋಧವೂ ಹೆಚ್ಚಾಯಿತು. ಬಹುಗುಣರು ಉಪವಾಸ ಸತ್ಯಾಗ್ರಹಗಳನ್ನು ಮಾಡಿದರು. ನ್ಯಾಯಾಲಯಗಳಲ್ಲಿ ಮೊಕದ್ದಮೆಗಳನ್ನು ಮಾಡಲಾಯಿತು. ಪ್ರತಿರೋಧವನ್ನು ಹತ್ತಿಕ್ಕಲು ಸರ್ಕಾರ ಶಕ್ತಿಯನ್ನು ಪ್ರಯೋಗಿಸಿತು. ಈ ಬೆಳವಣಿಗೆಗಳಿಂದ ಅಣೆಕಟ್ಟಿನ ಕೆಲಸ ಸ್ಥಗಿತವಾಯಿತು. ಯೋಜನೆ ಮುಕ್ತಾಯ ಹಂತ ತಲುಪುವಾಗ ಇದರ ಖರ್ಚು ಸುಮಾರು ರೂ. ೬೦೦೦ ಕೋಟಿಯಾಗಬಹುದೆಂದು

ಒಂದು ಅಂದಾಜು ಮಾಡಲಾಗಿದೆ. ಈ ಅತೀವ ಹೆಚ್ಚಳಕ್ಕೆ ಸರ್ಕಾರ ಪರಿಸರವಾದಿಗಳನ್ನು ದೂಷಿಸುತ್ತಿದೆ.

ಕಳೆದ ಕೆಲವು ವರ್ಷಗಳಲ್ಲಿ ದೊಡ್ಡ ಅಣೆಕಟ್ಟುಗಳ ಬಗ್ಗೆ ದೇಶಾದ್ಯಂತ ವ್ಯಾಪಕ ಚರ್ಚೆ, ವಿಚಾರ ವಿನಿಮಯ ಜರುಗಿದವು. ಕಳೆದ ವರ್ಷ ಅಣೆಕಟ್ಟುಗಳ ಜಾಗತಿಕ ಆಯೋಗಕ್ಕೆ ''ದೊಡ್ಡ ಅಣೆಕಟ್ಟುಗಳು-ಇಂಡಿಯಾದ ಅನುಭವ'' ಎಂಬ ವರದಿಯೊಂದನ್ನು ನೀಡಲಾಗಿತ್ತು. ಅದರ ಪ್ರಕಾರ ೧೯೭೮ರವರೆಗೂ ನಮ್ಮ ದೇಶದಲ್ಲಿ ಕಟ್ಟಲಾಗಿರುವ ಬಹುತೇಕ ಅಣೆಕಟ್ಟುಗಳಿಂದ ಪರಿಸರ ಹಾಗೂ ಸಮಾಜದ ಮೇಲೆ ಆದ ಪರಿಣಾಮಗಳ ಮೌಲ್ಯಮಾಪನವಾಗಿಲ್ಲ. ಈ ವರದಿಯಲ್ಲಿ ನೀಡಲಾಗಿರುವ ಮಾಹಿತಿಯಂತೆ ೧೯೮೦-೨೦೦೦ವರೆಗಿನ ಅವಧಿಯಲ್ಲಿ ದೊಡ್ಡ ಅಣೆಕಟ್ಟುಗಳಿಂದ ಮುಳುಗಡೆಯಾಗಿರುವ ಅರಣ್ಯ ಪ್ರದೇಶ ಸುಮಾರು ೯.೧ ಮಿಲಿಯ ಹೆಕ್ಟೇರ್. ಆದರೆ ಕೇಂದ್ರ ನೀರು ಆಯೋಗದ ಪ್ರಕಾರ ಅದು ೪.೫ ಮಿಲಿಯ ಹೆಕ್ಟೇರ್ (ಈಗಾಗಲೇ ನಿಗದಿಪಡಿಸಿರುವ ಶೇ. ೩೩ ಕ್ಕಿಂತ ಕಡಿಮೆ ಅರಣ್ಯ ಪ್ರದೇಶವಿದೆ ಭಾರತದಲ್ಲಿ).

ಒಂದು ಅಧ್ಯಯನದ ಪ್ರಕಾರ, ಇದುವರೆಗೆ ಅಣೆಕಟ್ಟುಗಳ ನಿರ್ಮಾಣದಿಂದ ಭಾರತದಲ್ಲಿ ನಿರ್ವಸಿತರಾದವರ ಸಂಖ್ಯೆ ಸುಮಾರು ೫.೬ ಕೋಟಿ. ೩೪ ಅಣೆಕಟ್ಟುಗಳಿಂದ ನಿರ್ವಸಿತರಾದವರಲ್ಲಿ ಶೇ. ೪೭ರಷ್ಟು ಆದಿವಾಸಿಗಳು. (ದೇಶದ ಒಟ್ಟಾರೆ ಜನಸಂಖ್ಯೆಯಲ್ಲಿ ಇವರು ಶೇ. ೮ರಷ್ಟಿದ್ದಾರೆ.)

ಕೇಂದ್ರ ಸರ್ಕಾರದ ಶಕ್ತಿ ಹಾಗೂ ನೀರಾವರಿ ಮಂಡಲಿ ಒದಗಿಸಿರುವ ೧೯ ಅಣೆಕಟ್ಟುಗಳ ಮಾಹಿತಿಗಳ ಪ್ರಕಾರ ೧೮ರಲ್ಲಿ ಹೂಳು ಸೇರುವ ಪ್ರಮಾಣ ಎಣಿಸಿದ್ದಕ್ಕಿಂತ ಜಾಸ್ತಿಯಿದೆ. ಇದು ಅಣೆಕಟ್ಟುಗಳ ಆಯುಷ್ಯ, ಆರ್ಥಿಕ ಸಾಧಕ-ಬಾಧಕಗಳ ಹಾಗೂ ಭದ್ರತೆಯ ಮೇಲೆ ತೀವ್ರ ಪರಿಣಾಮ ಬೀರುತ್ತದೆ.

೧೩೧ ಅಣೆಕಟ್ಟುಗಳ ಬಗ್ಗೆ ಅಧ್ಯಯನ ನಡೆಸಿ, ಅವುಗಳಲ್ಲಿ ೮೧ರಲ್ಲಿ ಒಂದಲ್ಲಾ ಒಂದು ಕುಂದುಕೊರತೆಗಳಿವೆಯೆಂದು ಹಾಗೂ ೯೦ರಲ್ಲಿ ಅಪಾಯದ ಸಂದರ್ಭಗಳಲ್ಲಿ ತುರ್ತು ಕ್ರಮಗಳನ್ನು ಜಾರಿ ಮಾಡುವ ಯೋಜನೆಗಳೇ ಇಲ್ಲವೆಂದು ಕೇಂದ್ರ ನೀರು ಹಾಗೂ ಶಕ್ತಿ ಆಯೋಗದ ಮಾಜಿ ಅಧ್ಯಕ್ಷ ಡಾ|| ವೈ. ಕೆ. ಮೂರ್ತಿ ಅಭಿಪ್ರಾಯ ಮಂಡಿಸಿದ್ದಾರೆ.

ಕಳೆದ ವರ್ಷ ಮಹಾರಾಷ್ಟ್ರದ ಕೊಯ್ನಾ ಅಣೆಕಟ್ಟಿನಲ್ಲಿ ದೊಡ್ಡ ಬಿರುಕುಗಳಾಗಿವೆಯೆಂದು ಅವು ಕರ್ನಾಟಕದ ಜನರಿಗೆ ಆತಂಕಕಾರಿ ಬೆಳವಣಿಗೆಯಾಗಬಹುದೆಂದು ಹಾಗೂ ಈ ವಿಷಯದಲ್ಲಿ ಮಹಾರಾಷ್ಟ್ರ ಸರ್ಕಾರ ತುರ್ತಾಗಿ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ನಮ್ಮ ರಾಜ್ಯದ ನೀರಾವರಿ ಮಂತ್ರಿ ಶ್ರೀ ಎಚ್. ಕೆ. ಪಾಟೀಲರು ಆಗ್ರಹಿಸಿದ್ದನ್ನು ನೆನಪಿಸಿಕೊಳ್ಳಬಹುದು.

ಅಣೆಕಟ್ಟುಗಳ ಜಾಗತಿಕ ಆಯೋಗದ ವರದಿಯನ್ನು ನೆಲ್ಸನ್ ಮಂಡೇಲಾ ನವೆಂಬರ್ ೧೬, ೨೦೦೦ರಂದು ಲಂಡನ್‌ನಲ್ಲಿ ಬಿಡುಗಡೆ ಮಾಡಿದರು. ಅದರಲ್ಲಿ ಭಾರತಕ್ಕೆ ಸಂಬಂಧಿಸಿದಂತೆ, ಭಾರಿ ಅಣೆಕಟ್ಟುಗಳ ವಿಷಯದಲ್ಲಿ ವ್ಯಕ್ತವಾಗಿದ್ದ ಅಭಿಪ್ರಾಯಗಳು, ವಿಚಾರಗಳು ಆತಂಕಕಾರಿಯಾಗಿದ್ದವು. ದೊಡ್ಡ ಅಣೆಕಟ್ಟುಗಳಿಂದ ಜರುಗಿದ ಕೃಷಿ ಆಹಾರ ಉತ್ಪಾದನೆ, ಜಲವಿದ್ಯುತ್ ಹಾಗೂ ನೀರಿನ ಪೂರೈಕೆಯಲ್ಲಿ ಆದ ಅಭಿವೃದ್ಧಿಯನ್ನು ಅದು ಗುರುತಿಸಿದರೂ, ಈ ಯೋಜನೆಗಳಿಂದ ಉಂಟಾದ ಸಾಮಾಜಿಕ-ಆರ್ಥಿಕ ಅಸಮತೆ, ಯೋಜನೆಗಳಿಗಾಗಿ ಆದ ಖರ್ಚಿಗೂ ಅವುಗಳಿಂದಾಗುತ್ತಿರುವ ಲಾಭದ ಪ್ರಮಾಣಕ್ಕೂ ಇರುವ ಅಗಾಧ ವ್ಯತ್ಯಾಸ ಹಾಗೂ ಆಯೋಗಕ್ಕೆ ನೀಡಲಾಗಿದ್ದ ವರದಿಯ ಅಂಶಗಳನ್ನು ಎತ್ತಿ ಹಿಡಿಯಿತು. ಇದು ಬೃಹತ್ ಅಣೆಕಟ್ಟುಗಳ ಬಗ್ಗೆ ನರ್ಮದಾ ಬಚಾವ್ ಆಂದೋಳನ ಹಾಗೂ ಇತರ ಪರಿಸರ ಸಂಘಟನೆಗಳಿಗಿರುವ ನಿಲುವನ್ನು ಪುಷ್ಟೀಕರಿಸಿತು.

ಇತ್ತೀಚೆಗೆ ತೆಹರಿ ಅಣೆಕಟ್ಟು ಪುನಃ ಸುದ್ದಿಯಲ್ಲಿದೆ. ಅಣೆಕಟ್ಟಿನ ಟಿ-೩ ಮತ್ತು ಟಿ-೪ ಎಂಬ ಎರಡು ಬೇರೆಡೆಗೆ ಸಾಗುವ ಸುರಂಗಗಳನ್ನು ಮುಚ್ಚಲಾಯಿತು. ಜಲಾಶಯದಲ್ಲಿ ನೀರು ತುಂಬಿಕೊಳ್ಳುತ್ತಿದ್ದಂತೆ ೧೨೯ ಗ್ರಾಮಗಳು ಮುಳುಗಡೆಯಾಗುತ್ತವೆ. ಟಿ-೧ ಹಾಗೂ ಟಿ-೨ ಸುರಂಗಗಳನ್ನು ಬಂದ್ ಮಾಡಿದಾಗ, ತೆಹರಿ ಪಟ್ಟಣ ಜಲಸಮಾಧಿಯಾಗುತ್ತದೆ.

ತೆಹರಿ ಅಣೆಕಟ್ಟನ್ನು ವಿರೋಧಿಸುತ್ತಿರುವ ಸಂಘಟನೆಗಳಲ್ಲಿ ಭಿನ್ನ ದೃಷ್ಟಿಕೋನಗಳಿವೆ. ವಿಶ್ವಹಿಂದೂ ಪರಿಷತ್ ವಿರೋಧಿಸುತ್ತಿರುವುದು ಧಾರ್ಮಿಕ ಹಾಗೂ ಭಾವನಾತ್ಮಕ ದೃಷ್ಟಿಯಿಂದ ಎಂದು ಹೇಳಬಹುದು. ಬಹುಗುಣರ ಆಂದೋಳನಕ್ಕೆ ಇರುವ ವಿಸ್ತಾರವಾದ ಧ್ಯೇಯೋದ್ದೇಶಗಳು ಪರಿಸರಕ್ಕೆ ಸಂಬಂಧಿಸಿದ ಕಾಳಜಿಗಳು ಇದಕ್ಕಿಲ್ಲ ಎಂದರೆ ತಪ್ಪಾಗುವುದಿಲ್ಲ. ಏಕೆಂದರೆ ಭಾಗೀರಥಿಯ ಮೇಲೆ ಕಟ್ಟಲಾಗುತ್ತಿರುವ ಈ ಅಣೆಕಟ್ಟಿನ ಬಗ್ಗೆ ವಿರೋಧಿಸುವ ವಿ.ಎಚ್.ಪಿ. ಸರ್ದಾರ್ ಸರೋವರ್ ಅಣೆಕಟ್ಟಿನ ವಿಷಯದಲ್ಲಿ ಮೌನ ವಹಿಸಿದೆ.

ತೆಹರಿ ಅಣೆಕಟ್ಟಿನ ನಿರ್ಮಾಣ ಕಾರ್ಯಗಳು ಭರದಿಂದ ಸಾಗುವ ಸೂಚನೆಗಳಿವೆ. ಅದರ ಜೊತೆಯಲ್ಲಿ ನಿರ್ವಸಿತರಾದವರಿಗೆ ಸಮರ್ಪಕವಾದ ಪುನರ್ವಸತಿ ಎಂಬುದೇ ದೊಡ್ಡ ಪ್ರಶ್ನೆ. ತೆಹರಿ ಅಣೆಕಟ್ಟಿನ ವಿರುದ್ಧದ ಆಂದೋಳನಕ್ಕೆ ಜಯ ಸಿಗದಿದ್ದರೂ, ಅದು ಜನರ ಮುಂದೆ ಮಂಡಿಸಿದ ವಿಚಾರಗಳು, ಪ್ರಶ್ನೆಗಳು ಚಿಂತನಾಯೋಗ್ಯ.

ಮೇಲಿನ ವಿವರಗಳಿಂದ ಭಾರತದ ದೊಡ್ಡ ಅಣೆಕಟ್ಟುಗಳ ಬಗ್ಗೆ ಒಂದು ಚಿತ್ರಣ ಸಿಗುತ್ತದೆ. ಇದು ಆಶಾದಾಯಕವಾಗಿಲ್ಲದಿರುವುದು ಸ್ಪಷ್ಟ. ನಿಸರ್ಗದ ಮೇಲೆ ಮಾನವನಿಂದ ಆಗುತ್ತಿರುವ ನಿರಂತರ ಪ್ರಹಾರಗಳ ವಿರಾಟ ಸ್ವರೂಪವೂ ಭೀಕರ. ಅಭಿವೃದ್ಧಿಯಾಗಬೇಕಾದರೆ ಪರಿಸರ ನಾಶ ಅನಿವಾರ್ಯ ಎಂಬುದು ಕೆಲವರ ಅಭಿಪ್ರಾಯ. ಆದರೆ ನಮ್ಮ ದೇಶದ ಅಭಿವೃದ್ಧಿಯ ಪಥದ ಬಗ್ಗೆ ಭಿನ್ನಾಭಿಪ್ರಾಯ ವ್ಯಕ್ತಪಡಿಸುವವರಿದ್ದಾರೆ. ಶ್ರೀಮಂತರು ಹೆಚ್ಚು ಶ್ರೀಮಂತರಾಗಿ, ಬಡವರು ಇನ್ನೂ ಬಡವರಾಗುತ್ತಿರುವುದು ಯಾವ ರೀತಿಯ ಏಳಿಗೆ ಎಂಬುದು ಅವರ ಪ್ರಶ್ನೆ. ಪರಿಸರ ಸಂರಕ್ಷಣೆ ಹಾಗೂ ಅಭಿವೃದ್ಧಿ ಬಹಳ ಸಂಕೀರ್ಣ ವಿಷಯ. ಇವೆರಡರ ನಡುವೆ ಸಮತೋಲನವಿರಲೇಬೇಕು. ಇಲ್ಲದಿದ್ದರೆ ಮಾನವ ಜನಾಂಗಕ್ಕೆ ಗಂಡಾಂತರ ತಪ್ಪಿದ್ದಲ್ಲ.

ಹೀಗಿರಬೇಕಾದರೆ ನಮ್ಮ ಮುಂದಿರುವ ಯಕ್ಷ ಪ್ರಶ್ನೆಯೆಂದರೆ – ತೆಹರಿ, ಸರ್ದಾರ್ ಸರೋವರ್‌ನಂತಹ ಬೃಹತ್ ಅಣೆಕಟ್ಟುಗಳು ಬೇಕೆ ? ಬೇಡವೆ ? ಈ ಪ್ರಶ್ನೆಗಳು ನಮ್ಮ ಜನತೆಯ ಮನಗಳಲ್ಲಿ ಹುಟ್ಟುವಂತಾದರೆ, ಅದೇ ನರ್ಮದಾ ಬಚಾವ್ ಆಂದೋಳನ, ತೆಹರಿ ಅಣೆಕಟ್ಟಿನ ವಿರುದ್ಧದ ಚಳುವಳಿ ಮುಂತಾದವುಗಳ ದೊಡ್ಡ ಕೊಡುಗೆ.

ನಮ್ಮ ದೇಶದಲ್ಲಿ ಪರಿಸರ ಚಳುವಳಿಗಳು ಸಂಕ್ರಮಣ ಸ್ಥಿತಿಯಲ್ಲಿವೆ. ಕೆಲವು ವಿಷಯಗಳಲ್ಲಿ ಅವು ಜಯವನ್ನು ಸಾಧಿಸಿವೆ. ಇತ್ತೀಚಿನ ವರ್ಷಗಳಲ್ಲಿ ಪರಿಸರ ಚಳುವಳಿಗಳು ಹೆಚ್ಚಾಗಿ ಕೋರ್ಟುಗಳ ಕಟಕಟೆಯನ್ನು ಹತ್ತುತ್ತಿರುವುದನ್ನು ಗಮನಿಸಬಹುದು. ನ್ಯಾಯಾಲಯಗಳಿಗೆ ಹೋಗಲೇಬಾರದೆಂದಲ್ಲ. ಆದರೂ ಈ ಪ್ರಕ್ರಿಯೆಯಲ್ಲಿ ಹೆಚ್ಚಿನ ಶಕ್ತಿ ಸಮಯ ವ್ಯಯವಾಗುವುದು ಸತ್ಯ. ಜನತೆಯನ್ನು ಸಂಘಟಿಸಿ ಸರಿಯಾದ ಹೋರಾಟವನ್ನು ರೂಪಿಸಿ, ಜನಾಂದೋಳನಗಳಿಂದಲೇ ದೀರ್ಘಾವಧಿ ಫಲಗಳನ್ನು ನಿರೀಕ್ಷಿಸಬಹುದು.

ತೆಹರಿ ಅಣೆಕಟ್ಟಿನ ಮೇಲೆ ಈಗಾಗಲೇ ಹಲವು ಕೋಟಿ ರೂ. ಖರ್ಚು ಮಾಡಲಾಗಿದೆ. ಇದನ್ನು ಸರ್ಕಾರ ಮುಂದುವರೆಸುತ್ತಿದೆ. ಈ ಯೋಜನೆಯ ನಿರ್ವಸಿತರಿಗೆ ಸರಿಯಾಗಿ ಪುನರ್ವಸತಿಯಾಗುವಂತೆ ಜನಪರ ಹೋರಾಟ ಮುಂದುವರೆಸಬೇಕು. ಪರಿಸರ ಚಳುವಳಿಯನ್ನು ಭಾರತದ ಉದ್ದಗಲಕ್ಕೆ ಹರಡುವಂತೆ ಮಾಡುವಲ್ಲಿ ಸಕಲ ಪ್ರಯತ್ನಗಳನ್ನು ಮಾಡಬೇಕು. ಐರೋಪ್ಯ ದೇಶಗಳಲ್ಲಿ ನೆಲೆವೂರಿರುವ ಗ್ರೀನ್‌ಪೀಸ್ ಚಳುವಳಿ ಶಕ್ತಿಯುತವಾಗಿದೆ. ಕೆಲವು ದೇಶಗಳ ಸಂಸತ್‌ಗಳಲ್ಲಿ ಅದರ ಪ್ರತಿನಿಧಿಗಳಿದ್ದಾರೆ. ಭಾರತದಲ್ಲೂ ಈ ಪರಿಸ್ಥಿತಿ ನಿರ್ಮಾಣವಾಗಬೇಕು. ಹೀಗಾದಾಗ ಮಾತ್ರ ಇದುವರೆಗಿನ ಭಾರಿ ನೀರಾವರಿ ಯೋಜನೆಗಳ ಸಂಪೂರ್ಣ ವಿವರಗಳು (ನೀರಾವರಿ ಸೌಲಭ್ಯ ಹೊಂದಿದ ಪ್ರದೇಶ, ನಿರ್ವಸಿತರ ಸಂಖ್ಯೆ, ಪುನರ್ವಸತಿ ಇತ್ಯಾದಿ) ಸಂವಿಧಾನದತ್ತ ಮಾಹಿತಿ ಹಕ್ಕಿನ ಅನ್ವಯ ದೇಶದ ಪ್ರತಿಯೊಬ್ಬ ನಾಗರಿಕನಿಗೂ ಸರ್ಕಾರದಿಂದ ದೊರಕಬಹುದು. ಈ ದಿಶೆಯಲ್ಲಿ ಜನಪರ ಸಂಘಟನೆಗಳು ಕಾರ್ಯೋನ್ಮುಖವಾಗಬೇಕು.

*ಆಧಾರ : ಅಂಕಿ-ಅಂಶಗಳು, ವಿವಿಧ ಮೂಲಗಳಿಂದ.*

**ಮ. ಶ್ರೀ. ಮುರಳಿಕೃಷ್ಣ**
ನಂ. ೧೦೦, ೨ನೇ 'ಎ' ಕ್ರಾಸ್
ಗವೀಪುರಂ ಬಡಾವಣೆ
ಬೆಂಗಳೂರು-೫೬೦ ೦೧೯

## ಒಳ್ಳೆಯ ಓದು



**ಹುತ್ತ** (ಕಾದಂಬರಿ)

*ಬಾಳಾ ಸಾಹೇಬ ಲೋಕಾಪುರ*

**ಪುಟ : ೨೦೦** **ಬೆಲೆ : ರೂ. ೭೫**

**ಲೋಹಿಯಾ ಪ್ರಕಾಶನ,** ''ಕ್ಷಿತಿಜ'' ಕಪ್ಪಗಲ್ಲುರಸ್ತೆ,
ಬಳ್ಳಾರಿ - ೫೮೩ ೧೦೩

*ಒಂದು ಗ್ರಾಮೀಣ ಬದುಕಿನ ಸೂಕ್ಷ್ಮ ವಿವರಗಳು ಇಲ್ಲಿ ದಾಖಲಾಗಿವೆ. ಗಾಂಧಿ ಕಂಡ ಗ್ರಾಮ ರಾಜ್ಯಗಳ ಕನಸಿಗೂ ಇಲ್ಲಿನ ಗ್ರಾಮೀಣ ಬದುಕಿಗೂ ಪರಸ್ಪರ ಸಂಬಂಧವೇ ಇಲ್ಲ ಅಥವಾ ಗಾಂಧಿ ಗ್ರಾಮಗಳನ್ನು ಅರಿತಿದ್ದರೂ ಗ್ರಾಮಸ್ಥರು ಗಾಂಧಿಯನ್ನು ಅರ್ಥಮಾಡಿಕೊಂಡಿರಲಿಲ್ಲವೆನ್ನಬಹುದು. ಈ ದೇಶದಲ್ಲಿ ಇದ್ದುಕೊಂಡೇ ಗಾಂಧಿಯಿಂದ ಜನರನ್ನು ಗಾವುದ ದೂರ ಇಟ್ಟಿರುವ ಶಕ್ತಿಗಳು ಯಾವುವು ? ಅವನ್ನು ಗುರುತಿಸಬಹುದೆ ? ಅಥವಾ ಆ ಶಕ್ತಿಗಳಿಗೇನಾದರೂ ಗಾಂಧಿಯಿಂದ...? ಪ್ರಶ್ನೆ ಪ್ರಶ್ನೆಗಳಾಗಿಯೇ ಉಳಿಯುತ್ತವೆ.*

**ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ** (ಸಂಶೋಧನೆ)



*ಜೆ. ಎಂ. ನಾಗಯ್ಯ*

**ಪುಟ : ೨೨೪** **ಬೆಲೆ : ರೂ. ೧೦೦**

**ಲೋಹಿಯಾ ಪ್ರಕಾಶನ,** ''ಕ್ಷಿತಿಜ'', ಕಪ್ಪಗಲ್ಲುರಸ್ತೆ,
ಬಳ್ಳಾರಿ - ೫೮೩ ೧೦೩

*ಇಂದಿನ ಬಳ್ಳಾರಿ ಜಿಲ್ಲೆಯ ಪ್ರಾಚೀನ ಶಾಸನಗಳ ವಿವರ. ಚಕ್ರವರ್ತಿಯ ಛತ್ರದಡಿ ''ಪಾದ ಪದ್ಮೋಪಜೀವಿ''ಯಾಗಿದ್ದರೂ ಪರಸ್ಪರ ದಂಡೆತ್ತಿ ಕಾದಾಡಿ ಮಡಿದು ತನ್ಮೂಲಕ ವೀರ-ಶೂರರೆಂದು ತಾಮ್ರ ಶಾಸನ-ಶಿಲಾಶಾಸನಗಳಲ್ಲಿ ಕರೆಸಿಕೊಂಡ ರಾಜ-ಸಾಮಂತ ನಾಡಪ್ರಭು ಮುಂತಾದವರ ಬಗ್ಗೆ ಬೆಳಕು ಚೆಲ್ಲುವಂಥ ಕೃತಿ. ಭೂಮಿಯ ಮೇಲೆ ಸಾರ್ವಭೌಮನಾಗಲು ಹವಣಿಸುವ ಮಾನವನ ಇಂದಿನ ವರ್ತನೆಯೇ ಹಿಂದೆಯೂ ಇತ್ತೆಂಬುದನ್ನು ತಿಳಿಸುತ್ತದೆ.*

**ಬೆಡಗಿನೆದುರಿನ ಬೆರಗು** (ಆಯ್ದ ಬರಹಗಳು)



*ಮೋಹನ ನಾಗಮ್ಮನವರ*

**ಪುಟ : ೨೦೮** **ಬೆಲೆ : ರೂ. ೧೦೦**

**ಮಹಾಮನೆ ಪ್ರಕಾಶನ,** ನವೋದಯ ನಗರ,
ಧಾರವಾಡ - ೫೮೦ ೦೦೩

*ಸಂಬಂಧಗಳನ್ನು ಆತ್ಮೀಯವಾಗಿಸುವ, ಮನುಷ್ಯ-ಮನುಷ್ಯನನ್ನು ಇನ್ನಷ್ಟು ಅರ್ಥಮಾಡಿಕೊಳ್ಳುವ ಸುಂದರ ನಡೆವಳಿಕೆಗಳು ಇಂದಿನ ಜರೂರ ಅಗತ್ಯ. ಬಹಳಷ್ಟು ಜನರ ಒಡನಾಟ, ಚಿಂತನೆ ಅಗತ್ಯ. ಇಲ್ಲಿನ ಕೆಲವು ಲೇಖನ, ಸಂದರ್ಶನದ ಭಾಗಗಳು ಮೇಲಿನ ಉತ್ತಮ ಕಾರ್ಯಗಳತ್ತ ಅಣಿಗೊಳಿಸಬಲ್ಲವು. ಮೋಹನ ನಾಗಮ್ಮನವರು ನಮಗೆಲ್ಲ ಒಂದು ಹೊಸ ಭಾಷೆ ಕಲಿಸಿದ್ದಾರೆನ್ನಬಹುದು. ಅದು ಅಕ್ಷರವಿಲ್ಲದ ಹೊಸ ಮಾನವೀಯ ಭಾಷೆ. ಕೃತಿಯ ಕೊನೆಯ ಭಾಗದಲ್ಲಿ ಕೆಲ ಪುಸ್ತಕಗಳ ಪರಿಚಯವಿದೆ.*

**ಮಾಯಾ ಪಾತಾಳ** (ಕವನಗಳು)

*ರಾಮಲಿಂಗಪ್ಪ ಟಿ. ಬೇಗೂರು*

**ಪುಟ : ೮೦** **ಬೆಲೆ : ರೂ. ೫೦**

**ಅಭಿನವ,** ಸಂ. ೪೧೪೮/ಎ, ಮೂರನೇ ಮುಖ್ಯರಸ್ತೆ, ೨ನೇ ಹಂತ, ರಾಜಾಜಿನಗರ 'ಬಿ' ವಿಭಾಗ, ಬೆಂಗಳೂರು - ೨೧

*ವ್ಯಕ್ತಿಗತ ಅನುಭವಗಳನ್ನೊಂದಿಷ್ಟು ಮಥಿಸಿದಾಗ ಸಿಕ್ಕ ಹಾಲಾಹಲವನ್ನು ತಾನುಂಡು ಅಮೃತವನ್ನು ನಮಗೂ ಒಂದಿಷ್ಟು ಉಣ್ಣಲೆಂದು ಕೊಟ್ಟಿರುವ ಕವಿ ಶ್ರೀ ರಾಮಲಿಂಗಪ್ಪ ಟಿ.ಬೇಗೂರರು. ಅವರ ಕಾವ್ಯಗಳಲ್ಲಿ ನಮಗೆ ದಕ್ಕುವುದು ಬಹಳ ಎಚ್ಚರದ ಕಟುಸತ್ಯದ ಮಾತುಗಳೊಳಗಿರುವ ವಿವೇಕದ ದನಿ ಮಾತ್ರ ! ಪದ-ಪ್ರಾಸಗಳಿಗಾಗಿ ತಡಕಾಡದೆ, ಭಾವನೆಗಳು ಜಾಗ ಬಿಟ್ಟು ಕದಲಲಾರದೆ ಕೂತಾಗ ಅರ್ಥವಂತಿಕೆಯನ್ನೇ ಮೆರೆಸಿದ ಕವನಗಳಿವು.*

**ಮಹಿಳೆ ಮತ್ತು ಆರೋಗ್ಯ** (ಅಧ್ಯಯನ)



*ಡಾ|| ಕೆ. ಸರೋಜ*

**ಪುಟ : ೧೮೬** **ಬೆಲೆ : ರೂ. ೭೫**

**ಪ್ರಸಾರಾಂಗ,** ಕನ್ನಡ ವಿಶ್ವವಿದ್ಯಾಲಯ, ಹಂಪಿ - ೫೮೩ ೨೭೬

*ಸ್ತ್ರೀ ಆರೋಗ್ಯ ಸಮಸ್ಯೆಗಳನ್ನು ಅಧ್ಯಯನ ಮಾಡಿ ಬರೆದಿರುವ ಒಂದು ಆಕರಗ್ರಂಥ. ಮಹಿಳೆಯರ ಆರೋಗ್ಯದ ವಿಷಯ ನಮ್ಮ ದೇಶಕ್ಕಷ್ಟೇ ಸೀಮಿತವಾಗಿರದೆ ವಿಶ್ವಮಟ್ಟದಲ್ಲಿ ಚಿಂತನೆ ನಡೆಸಬೇಕಾದಂತಹ ಒಂದು ಗಂಭೀರ ಸಮಸ್ಯೆ. ಆದರೂ ಸೀಮಿತ ವಲಯದಲ್ಲೆಂಬಂತೆ ಭಾರತೀಯ ಮಹಿಳೆಯ ಕುರಿತು ಇಲ್ಲಿ ಸಂಗ್ರಹಿಸಲಾದ ಅಂಕಿ ಅಂಶಗಳನ್ನು ಗಮನಿಸಿದಾಗ ಆಕೆ ಪೂರ್ಣ ಪ್ರಮಾಣದ ಮುಂದಿನ ಯೋಗ್ಯ ತಲೆಮಾರನ್ನು ಸೃಷ್ಟಿಸಬಲ್ಲಳೇ ಎಂಬ ಆತಂಕವಾಗುವುದು ಸಹಜ. ಅಂಥ ನ್ಯೂನ ಪೋಷಣೆ ಆಕೆಯದು.*



**ಗುಣ ಗೌರವ** (ಲೇಖನ ಸಂಗ್ರಹ)

*ಜಿ. ಎಚ್. ನಾಯಕ*

**ಪುಟ : ೧೮೬** **ಬೆಲೆ : ರೂ. ೭೫**

**ಲೋಹಿಯಾ ಪ್ರಕಾಶನ,** ''ಕ್ಷಿತಿಜ'', ಕಪ್ಪಗಲ್ಲು ರಸ್ತೆ,
ಬಳ್ಳಾರಿ - ೫೮೩ ೧೦೩

*ನವ್ಯೋತ್ತರ ಕಾಲದ ಹೆಚ್ಚಿನ ಸಾಹಿತಿಗಳೊಂದಿಗೆ ಒಡನಾಟ ಹೊಂದಿದ್ದ ಪ್ರೊ|| ಜಿ. ಹೆಚ್. ನಾಯಕ್ ಅವರು ಕಂಡಂತೆ ಕೆಲವು ಶ್ರೇಷ್ಠ ಸಾಹಿತಿಗಳ ವ್ಯಕ್ತಿ ಚಿತ್ರಣಗಳು ಇಲ್ಲಿವೆ. ಒಂದು ತಲೆಮಾರಿನ ಸಾಹಿತಿಗಳನ್ನು, ಕೃತಿಗಳನ್ನು ಅರ್ಥೈಸಲು ಈ ಲೇಖನಗಳು ಇಂದಿನ ಪೀಳಿಗೆಯ ಜನರಿಗೆ ಸಹಕಾರಿ ಹಾಗೂ ಮಾರ್ಗದರ್ಶಿ. ಕಟು ವಿಮರ್ಶಕರೆಂಬ ಖ್ಯಾತಿಯ ಲೇಖಕರು ಗುಣದೋಷಗಳ ಬಗ್ಗೆ ಪಕ್ಷಪಾತ ಮಾಡಿದವರಲ್ಲ.*



**ಅರ್ಥ ಶೋಧ** (ವೈಚಾರಿಕ ಪ್ರಬಂಧಗಳು)

*ಅರವಿಂದ ಚೊಕ್ಕಾಡಿ*

**ಪುಟ : ೧೦೮** **ಬೆಲೆ : ರೂ. ೫೫**

**ಸ್ವಂತಿಕಾ ಸಾಹಿತ್ಯ ಬಳಗ,** ಸುಳ್ಯ, ದ.ಕ. - ೫೭೪ ೨೩೯

*ಒಬ್ಬ ಶಿಕ್ಷಕರಾಗಿದ್ದು ತಮ್ಮ ವಿದ್ಯಾರ್ಥಿಗಳು ಆಗಾಗ್ಗೆ ಕೇಳುತ್ತಿದ್ದ ಪ್ರಶ್ನೆಗಳಿಗೆ ನಿಜ ಉತ್ತರ ಹೇಳಬೇಕೆಂಬ ಕಳಕಳಿಯಿಂದ ಸತ್ಯಾರ್ಥ ಶೋಧನೆಯ ಓದಿನ ಪರಿಣಾಮವಾಗಿ ರೂಪುಗೊಂಡ ಲೇಖನಗಳಿವು. ವೈಚಾರಿಕ ಮನಸ್ಸೊಂದು ಇಲ್ಲಿ ಬಹಳ ಕೆಲಸ ಮಾಡಿದೆ. ಹೇಳಿಕೆಗಳನ್ನು ತಕ್ಷಣವೇ ಒಪ್ಪದ ಲೇಖಕರು ದ್ವಿಮುಖ ನೀತಿಗಳನ್ನು ಏಕಪಕ್ಷೀಯ ಧೋರಣೆಗಳನ್ನು ಕಟುವಾಗಿ ಖಂಡಿಸುತ್ತಾರೆ. ಈ ದೇಶದ ಎಲ್ಲ ಕೆಟ್ಟ ಸಂಪ್ರದಾಯಗಳ ಕಡೆಗೂ ನಿರ್ದಯವಾಗಿ ಮಾತನಾಡಿ ಯುವ ಜನತೆಗೆ ಸ್ಫೂರ್ತಿ ತುಂಬಿದ್ದಾರೆ, ಧೈರ್ಯ ನೀಡಿದ್ದಾರೆ.*

**ತುಳುಕು** (ಕವನ ಸಂಕಲನ)

*ಎಂ. ಡಿ. ಒಕ್ಕುಂದ*

**ಪುಟ : ೫೨** **ಬೆಲೆ : ರೂ. ೩೫**

**ಲಡಾಯಿ ಪ್ರಕಾಶನ,** ೪೨, ಪ್ರಸಾದ್ ಲಾಡ್ಜ್, ಗದಗ

*ನಮ್ಮ ಬದುಕಿನಲ್ಲಿ ಆಗಾಗ ಬಂದು ಎಲ್ಲಿ ಬೇಕೋ ಅಲ್ಲಿ ಸಂತೈಸಬೇಕಾದ ಅದೆಷ್ಟೋ ಶಕ್ತಿ ಚೇತನಗಳನ್ನು ಕಳೆದುಕೊಂಡಿದ್ದೇವೆ. ಗಾಢ ಮೌನ ನಮ್ಮ ಮಿತ್ರನಾಗಿದ್ದಾನೆ. ನಿಸರ್ಗದ ಯಾವ ಕೊಡುಗೆಯೂ ನಮಗೆ ಪ್ರಿಯವಾಗದೆ ಕೃತಕತೆಗೆ ನಾವು ಶರಣಾಗಿದ್ದೇವೆ. ಇಂಥ ಕಡೆ ನಾವು ಆತ್ಮವಿಮರ್ಶೆ ಮಾಡಿಕೊಳ್ಳುವಂಥ ಕವನಗಳನ್ನು ಶ್ರೀ ಒಕ್ಕುಂದ ನಮಗೆ ಕೊಟ್ಟಿದ್ದಾರೆ. ಕಾವ್ಯದ ಪ್ರತಿಮೆಯಲ್ಲಿ ನಾವು ಮುಖ ನೋಡಿಕೊಂಡು ಗುರುತಿಸಬಹುದಾದ ನುಣುಪು ಹೊಳಪು ಕೊಟ್ಟಿದ್ದಾರೆ.*

- ಇಂದಿರಾಕುಮಾರಿ

# ಪ್ರಗತಿಗೆ ತಡೆಯಾದ ಶತಕೋಟಿ ಭಾರತೀಯರು

ನಮ್ಮ ಆರ್ಥಿಕ ಯೋಜನೆಗಳ ಸಾಧನೆ ಜನಸಂಖ್ಯಾ ಪ್ರವಾಹದಲ್ಲಿ ಕೊಚ್ಚಿಹೋಗಿದೆ. ಇಡೀ ದೇಶದ ಅರ್ಥ ವ್ಯವಸ್ಥೆ ಬುಡಮೇಲಾಗಿದೆ. ರಾಷ್ಟ್ರದ ಪ್ರಗತಿಯು ಮರೀಚಿಕೆಯಾಗಿದೆ. ಇದಕ್ಕೆ ಯಾರು ಹೊಣೆ ? ನಮ್ಮ ಅಪಾರ ಮಾನವ ಸಂಪನ್ಮೂಲ ಇಂದು ದೇಶದ ಉನ್ನತಿಗೆ ನೆರವಾಗುವ ಬದಲು ಶಾಪವಾಗಿದೆ.

ವಿಶ್ವದಲ್ಲಿ ಒಂದು ನೂರು ಕೋಟಿ ಜನಸಂಖ್ಯೆ ಮೀರಿದ ರಾಷ್ಟ್ರಗಳ ಪೈಕಿ ಭಾರತ ಎರಡನೆಯದು. ಚೀನಾ ಪ್ರಥಮ ಸ್ಥಾನದಲ್ಲಿದೆ. ದೇಶದ ಒಟ್ಟು ಜನಸಂಖ್ಯೆ ೮೪.೩೯ ಕೋಟಿ (೧೯೯೧)ಯಿಂದ ೧೦೨.೭೦ ಕೋಟಿ (೨೦೦೧) ಗೇರಿದೆ. ಪ್ರಸ್ತುತದ ಅಂದಾಜಿನ ಪ್ರಕಾರ ದೇಶದ ಒಟ್ಟು ಜನಸಂಖ್ಯೆ ೧೦೩.೧೩ ಕೋಟಿಗೂ ಹೆಚ್ಚಿದೆ. ಇಲ್ಲಿ ಪ್ರಪಂಚದ ಒಟ್ಟು ಜನಸಂಖ್ಯೆಯಲ್ಲಿ ಶೇ. ೧೬ರಷ್ಟು ಮಾನವ ಸಂಪನ್ಮೂಲವಿದೆ. ನಮ್ಮಲ್ಲಿ ಪ್ರತಿವರ್ಷ ೧.೮ ಕೋಟಿಯಂತೆ, ಕಳೆದ ಹತ್ತು ವರ್ಷಗಳಲ್ಲಿ ೧೮.೩೧ ಕೋಟಿಗೂ ಮೀರಿದ ಜನಸಂಖ್ಯೆ ಸೇರ್ಪಡೆಯಾಗಿದೆ. ಅಂದರೆ ಪ್ರತಿವರ್ಷ ಒಂದು ಆಸ್ಟ್ರೇಲಿಯಾ ದೇಶದಷ್ಟು ಜನರು ಹೆಚ್ಚಾಗುತ್ತಿದ್ದಾರೆ !!

ಜನಸಂಖ್ಯಾ ಸಮಸ್ಯೆ ಕೇವಲ ಭಾರತಕ್ಕೆ ಮಾತ್ರವಲ್ಲ. ಇಡೀ ವಿಶ್ವದ ಜನಸಂಖ್ಯೆಯೇ ಪ್ರತಿ ಸೆಕೆಂಡಿನಲ್ಲಿಯೂ ಅಧಿಕಗೊಳ್ಳುತ್ತಿದೆ. ವಿಶ್ವಸಂಸ್ಥೆಯ ವರದಿಗಳ ಪ್ರಕಾರ ವಿಶ್ವದ ಈಗಿನ ಜನಸಂಖ್ಯೆ ೬೦೦ ಕೋಟಿಗೂ ಅಧಿಕ. ಇನ್ನು ೫೦ ವರ್ಷಗಳಲ್ಲಿ ವಿಶ್ವದ ಜನಸಂಖ್ಯೆ ೧೧೨೦ ಕೋಟಿ ಆಗುವುದೆಂದು ಅಂದಾಜು ಮಾಡಲಾಗಿದೆ. ಭಾರತದಲ್ಲಿ ಕಳೆದ ಹತ್ತು ವರ್ಷಗಳಲ್ಲಿ ಹೆಚ್ಚಾಗಿರುವ ಜನಸಂಖ್ಯೆ ಗಾಯದ ಮೇಲೆ ಬರೆ ಎಳೆದಷ್ಟು ಮಾರಕವಾಗಿದೆ.

ಪರಮಾಣು ಇಲ್ಲವೆ ಇತರೆ ಬಾಂಬ್ ಸ್ಫೋಟದ ದುಷ್ಪರಿಣಾಮ ಸೀಮಿತ ಕ್ಷೇತ್ರಕ್ಕಾದರೆ, ಜನಸಂಖ್ಯಾ ಸ್ಫೋಟದ ಕರಾಳ ಛಾಯೆ ಇಡೀ ದೇಶದ ಮೇಲಾಗುತ್ತದೆ.

**ಸಮಸ್ಯೆಗಳ ಸುಳಿಯಲ್ಲಿ ದೇಶ** : ದೇಶದ ಎಲ್ಲೆಲ್ಲೂ ಬಡತನ ತಾಂಡವವಾಡುತ್ತಿದೆ. ಸುಮಾರು ೧/೩ ಭಾಗದಷ್ಟು ಜನರು ಬಡನತದ ರೇಖೆಯಿಂದ ಕೆಳಗಿದ್ದಾರೆ. ನವಜಾತ ಹೆಣ್ಣು ಶಿಶುಗಳ ಮಾರಾಟ ಬಡತನದ ಅತಿರೇಕವಾಗಿದೆ. ಜಾಗತೀಕರಣ ಮತ್ತು ಉದಾರೀಕರಣ ನೀತಿ ಹಾಗೂ ಪ್ರಕೃತಿ ವಿಕೋಪದಿಂದ ಕೃಷಿ ಚಟುವಟಿಕೆಗಳು ನೆಲಕಚ್ಚಿವೆ. ಕೃಷಿಕರು ಕಂಗಾಲಾಗಿದ್ದಾರೆ. ಭಯೋತ್ಪಾದನೆ ಮತ್ತು ಕೋಮು ಕಲಹಗಳಿಂದ ದೇಶದಲ್ಲಿ ಅಶಾಂತಿ ವಾತಾವರಣವಿದೆ.

ಎಲ್ಲಿಯೂ ಉದ್ಯೋಗ ಖಾಲಿ ಇಲ್ಲ. ಸ್ವಂತ ಉದ್ಯೋಗ ಮಾಡಲು ಹಲವು ತೊಂದರೆಗಳು. ಹೊಸ ತಂತ್ರಜ್ಞಾನ ಹಾಗೂ ಗಣಕವಿಜ್ಞಾನ ಮತ್ತಷ್ಟು ಉದ್ಯೋಗಾವಕಾಶವನ್ನು ಕಿತ್ತುಕೊಂಡಿದೆ. ಉದ್ಯೋಗ ಬಯಸಿ ನಗರಗಳಿಗೆ ವಲಸೆಯ ಪ್ರಮಾಣ ಹೆಚ್ಚಾಗುತ್ತಿದೆ. ಇದರಿಂದ ನಗರಗಳಲ್ಲಿ ಉದ್ಯೋಗ, ವಸತಿ, ನೀರಿನ ಸಮಸ್ಯೆಗಳು ಉಂಟಾಗುತ್ತವೆ. ಕೊಳಚೆ ಪ್ರದೇಶ, ರೌಡಿಗಳು, ಅಪರಾಧ, ಭಿಕ್ಷಾಟನೆ, ವೇಶ್ಯಾವೃತ್ತಿ ಇತ್ಯಾದಿಗಳು ಹುಟ್ಟಿ ಕೊಳ್ಳುತ್ತವೆ. ನಗರಗಳಲ್ಲಿ ಮಹಿಳೆಯರು ನಿರ್ಭೀತರಾಗಿ ಓಡಾಡುವಂತಿಲ್ಲ. ಅಪರಾಧಗಳ ಪಟ್ಟಿ ಉದ್ದವಾಗುತ್ತಿದ್ದು, ನ್ಯಾಯಾಲಯಗಳಲ್ಲಿ ಬಗೆಹರಿಯದ ವ್ಯಾಜ್ಯಗಳ ಮಹಾಪೂರವೇ ಇದೆ. ನ್ಯಾಯಕ್ಕಾಗಿ ದಶಕಗಳಷ್ಟು ಕಾಯಬೇಕಾಗಿದೆ.

ನಗರ ಮತ್ತು ಪಟ್ಟಣಗಳಲ್ಲಿ ಜನಸಂಖ್ಯೆ ಬೆಳೆದಂತೆ ವಾಹನಗಳ ಸಂಖ್ಯೆಯೂ ದ್ವಿಗುಣಗೊಳ್ಳುತ್ತಿದೆ. ಅಪಾರ ವಾಯು ಮತ್ತು ಶಬ್ದಮಾಲಿನ್ಯ ನಗರ ಜೀವನವನ್ನು ನರಕ ಸದೃಶವಾಗಿಸಿವೆ.

ಜಲ, ನೆಲ ಮತ್ತು ಅರಣ್ಯ ಸಂಪನ್ಮೂಲಗಳು ಕ್ಷಿಪ್ರ ಬಳಕೆಯಿಂದ ಮುಗಿದು ಬರಿದಾಗುತ್ತಿವೆ. ಸಸ್ಯ, ಪ್ರಾಣಿ ಮತ್ತು ಪಕ್ಷಿಗಳ ಸಾವು ಪರಿಸರ ಅಸಮತೋಲನೆಗೆ ಕಾರಣವಾಗಿದೆ. ಈ ಧರೆಯಲ್ಲಿ ಸಂಭವಿಸುತ್ತಿರುವ ಭೂಕಂಪ, ಕಾಡ್ಗಿಚ್ಚು, ಚಂಡಮಾರುತ, ಅಕಾಲಿಕ ಮಳೆ, ಹೆಚ್ಚುತ್ತಿರುವ ಉಷ್ಣಾಂಶ ಇವೆಲ್ಲಾ ಮಾನವ ಪೃಥ್ವಿಯನ್ನು ಅಸಮರ್ಪಕವಾಗಿ ಬಳಸುತ್ತಿರುವುದಕ್ಕೆ ನಿದರ್ಶನವಾಗಿದೆ.

ಎಲ್ಲೆಲ್ಲಿಯೂ ಎಲ್ಲದಕ್ಕೂ ಉದ್ದುದ್ದದ ಕ್ಯೂ. ಅದು ಆಸ್ಪತ್ರೆ, ಬಸ್ಸು, ರೈಲು, ಶಾಲಾ ಕಾಲೇಜು ಮತ್ತು

> *ಜುಲೈ ೧೧ ವಿಶ್ವ ಜನಸಂಖ್ಯಾ ದಿನ. ಜನರನ್ನು ಮಾನವ ಸಂಪನ್ಮೂಲವೆಂಬ ನೆಲೆಯಲ್ಲಿ ಯೋಜನೆ ಸಿದ್ಧಗೊಳಿಸಿ ಕಾರ್ಯ ಪ್ರವೃತ್ತರಾಗುವ ಬದಲು ಜನರು ದೊರೆಯೆಂಬ ಗ್ರಹಿಕೆ ನಮ್ಮಲ್ಲಿದೆ. ಜನರನ್ನು ಹೇಗೆ ಪರಿಭಾವಿಸಬೇಕೆಂಬುದನ್ನು ಸ್ವತಂತ್ರವಾಗಿ ವಿವೇಚಿಸುವ ಅಗತ್ಯವಿದೆ.*

ಯಾವುದೇ ಹಂಚಿಕೆಯಿರಬಹುದು. ಎಲ್ಲ ಕಡೆಯೂ ಜನರು ತುಂಬಿ ತುಳುಕುತ್ತಿದ್ದಾರೆ.

ನಮ್ಮ ಜನಸಂಖ್ಯೆ ಜ್ಯಾಮಿತಿಯ ಲೆಕ್ಕಾಚಾರದಲ್ಲಿ ಬೆಳೆದರೆ, ಸರಕು ಸೇವೆಗಳ ಉತ್ಪಾದನೆಯು ಅಂಕಗಣಿತದ ಲೆಕ್ಕಾಚಾರದಲ್ಲಿ ಆಗುತ್ತಿದೆ. ಆಹಾರದಲ್ಲಿ ಸತ್ವವಿಲ್ಲ, ರುಚಿಯಿಲ್ಲ. ರೈತರು ಬೆಳೆದ ಬೆಳೆಗೆ ಸರಿಯಾದ ಬೆಲೆ ಸಿಗುತ್ತಿಲ್ಲ. ಭೂ ಹಿಡುವಳಿಗಳು ಹಂಚಿಕೆಯಿಂದಾಗಿ ಛಿದ್ರೀಕರಣಗೊಂಡಿವೆ. ಗ್ರಾಮೀಣ ಬದುಕು ಸಂಕಷ್ಟದಲ್ಲಿದೆ.

ದೇಶದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪರಿಸ್ಥಿತಿಗಳೂ ಸಹ ಆಶಾದಾಯಕವಾಗಿಲ್ಲ. ಎಲ್ಲೆಲ್ಲೂ ಸಾಮಾಜಿಕ ಮತ್ತು ರಾಜಕೀಯ ಅಶಾಂತಿ ತಲೆದೋರಿದೆ. ಪರಸ್ಪರರಲ್ಲಿ ನಂಬಿಕೆಯಿಲ್ಲ. ಕೋಮುಗಲಭೆ ಸಾವಿರಾರು ಜನರ ಕಗ್ಗೊಲೆಗೆ ಕಾರಣವಾಗಿದೆ. ಭಯೋತ್ಪಾದನೆಯಿಂದ ಇಡೀ ಪ್ರಪಂಚ ತತ್ತರಿಸಿಹೋಗಿದೆ. ಕೊಲೆ-ಸುಲಿಗೆ, ವ್ಯಾಪಾರದಲ್ಲಿ ಮೋಸ, ಬೆಲೆ ಏರಿಕೆ, ಲಂಚ, ಕಪ್ಪು ಹಣ ಅನೈತಿಕತೆ, ಏಡ್ಸ್ ಮತ್ತು ಇತರ ಮಾರಕ ರೋಗಗಳು ಮನುಜ ಕುಲವನ್ನು ನಿರ್ನಾಮ ಮಾಡಲು ಕಂಕಣ ತೊಟ್ಟಿವೆ. ಹೆಚ್ಚುತ್ತಿರುವ ಮಕ್ಕಳು ಮತ್ತು ವಯೋವೃದ್ಧರ ಪ್ರಮಾಣ ಅವಲಂಬಿತರ ಸಂಖ್ಯೆಯನ್ನು ಹೆಚ್ಚಿಸುತ್ತಿದೆ. ದುಡಿಯುವವರ ಸಂಖ್ಯೆ ಇಳಿಮುಖವಾಗುತ್ತಿದೆ. ಇದರಿಂದ ಆದಾಯ ಕಡಿಮೆಯಾಗಿ ಕೌಟುಂಬಿಕ ನೆಮ್ಮದಿ ಹಾಳಾಗಿದೆ. ಜೀವನಮಟ್ಟ ಕುಸಿಯುತ್ತಿದೆ.

**ಡಾ|| ದಯಾನಂದ್**

ಸಮಾಜದ ಎಲ್ಲ ಕ್ಷೇತ್ರಗಳಲ್ಲಿನ ಸ್ವಜನ ಪಕ್ಷಪಾತ, ಪ್ರಾಂತೀಯತೆ, ಅಭದ್ರತೆ, ಏಕತೆ ಮತ್ತು ಒಗ್ಗಟ್ಟಿಗೆ ತಡೆಯುಂಟುಮಾಡಿವೆ. ಉತ್ಪಾದನೆ ಇಳಿಮುಖವಾಗುತ್ತಿದೆ. ಜನರ ಬೇಡಿಕೆ ಮಾತ್ರ ಏರುತ್ತಿದೆ !

**ಪ್ರಗತಿಗೆ ಸವಾಲು, ಸರ್ಕಾರಕ್ಕೆ ಹೊರೆ** : ನಾವು ಶಿಕ್ಷಣ, ಕೃಷಿ, ಕೈಗಾರಿಕೆ, ವೈದ್ಯಕೀಯ ಮುಂತಾದ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಿದ್ದೇವೆ. ಆದರೆ, ಅದನ್ನು ಜನಸಂಖ್ಯಾ ಬೆಳವಣಿಗೆಯ ಪ್ರಮಾಣಕ್ಕೆ ಹೋಲಿಸಿ ನೋಡಿದಾಗ ಬಹಳ ಕಡಿಮೆ ಎನಿಸುತ್ತದೆ. ಯೋಜನೆಗಳ ಫಲಶ್ರುತಿ ಜನಸಂಖ್ಯಾ ಪ್ರವಾಹದಲ್ಲಿ ಕೊಚ್ಚಿ ಹೋಗಿದೆ.

ಜನಸಂಖ್ಯೆ ಹೆಚ್ಚಾದಂತೆ ಎಲ್ಲಾ ವ್ಯವಸ್ಥೆಗಳ ಮೇಲೆ ಒತ್ತಡ ಹೆಚ್ಚಾಗುತ್ತಿದೆ. ಪ್ರತಿ ವರ್ಷ ಹೆಚ್ಚಾಗುವ ಜನರಿಗೆ ಹೆಚ್ಚು ಹೆಚ್ಚು ಆಹಾರ, ನೀರು, ಬಟ್ಟೆ, ವಸತಿ, ಆರೋಗ್ಯ, ಶಿಕ್ಷಣ ಭದ್ರತೆಗಳನ್ನು ಒದಗಿಸುವ ಹೊಣೆ ಕುಟುಂಬ ಮತ್ತು ಸರ್ಕಾರದ್ದಾಗುತ್ತದೆ. ಮಿತ ಸಂಪನ್ಮೂಲಗಳಿಂದ ಅಧಿಕ ಉತ್ಪಾದನೆಗೆ ವಿಜ್ಞಾನ ಮತ್ತು ತಂತ್ರಗಾರಿಕೆಯ ನೆರವಿಗೆ ಹೋಗಬೇಕು. ಸುಧಾರಿತ ಬೇಸಾಯ ಮತ್ತು ಕೈಗಾರಿಕೆಗಳು ಅಗತ್ಯಗಳನ್ನೇನೊ ಈಡೇರಿಸುತ್ತವೆ. ಆದರೆ, ಇದರಿಂದ ಭೂಮಿಯ ಶೋಷಣೆಯಾಗುತ್ತಿದೆ, ಪರಿಸರ ಹಾಳಾಗುತ್ತಿದೆ.

**ಋಣಭಾರದಲ್ಲಿ ದೇಶ** : ಅಭಿವೃದ್ಧಿ ಕಾರ್ಯಗಳಿಗೆ ನಮ್ಮ ಸರ್ಕಾರಗಳು ತೆರಿಗೆ ಮತ್ತು ಸಾಲದ ರೂಪದಲ್ಲಿ ಹಣ ಸಂಗ್ರಹಿಸುತ್ತಿವೆ. ಅಧಿಕ ಕರಭಾರದಿಂದ ಜನರ ಬದುಕು ಅಸಹನೀಯವಾಗಿದೆ. ಪ್ರಪಂಚ ಬ್ಯಾಂಕ್ ಮತ್ತು ಶ್ರೀಮಂತ ದೇಶಗಳಿಂದ ಸಾಲದ ರೂಪದಲ್ಲಿ ಹರಿದು ಬರುತ್ತಿರುವ ಬಿಲಿಯನ್‌ಗಟ್ಟಲೆಯ ಸಾಲದ ಹಣ ಪ್ರವಾಹದಲ್ಲಿ ನಮ್ಮ ಬದುಕು ಮತ್ತು ಅರ್ಥವ್ಯವಸ್ಥೆ ಏನಾಗಬಹುದು ? ಬಿಲಿಯನ್‌ಗಟ್ಟಲೆ ಸಾಲಕ್ಕೆ ಅದಕ್ಕೂ ಹೆಚ್ಚಿನ ಬಡ್ಡಿಯನ್ನು ಕೊಡಬೇಕಲ್ಲವೆ ? ಅದನ್ನು ಮರುಪಾವತಿ ಮಾಡುವುದ್ಯಾವಾಗ ? ಇದೆಲ್ಲವನ್ನು ಯೋಚಿಸಿದಾಗ ನಮ್ಮ ದೇಶಕ್ಕೆ ಭವಿಷ್ಯವಿದೆಯೇ ಎನಿಸುತ್ತದೆ. ದೇಶದ ಜನರೆಲ್ಲರೂ ಈ ಅಪಾರ ಋಣಭಾರದಲ್ಲಿ ಮುಳುಗಲೂ ಬಹುದು, ಬದುಕಲೂಬಹುದು. ಏನೇ ಆಗಲಿ ಈ ಎಲ್ಲ ಸ್ಥಿತಿಗೂ ನಮ್ಮ ಅಪಾರ ಜನ ಪ್ರಮಾಣ ಮತ್ತು ಅವರ ಗುಣಮಟ್ಟವೇ ಹೊಣೆಯಾಗಬೇಕು.

**ನಿಯಂತ್ರಣ ಕ್ರಮಗಳು**: ಜನಸಂಖ್ಯಾ ನಿಯಂತ್ರಣಕ್ಕೆ ಎಷ್ಟೇ ವ್ಯಾಪಕ ಪ್ರಚಾರ ಕಾರ್ಯಕ್ರಮಗಳಿದ್ದಾಗ್ಯೂ ಅದು ನಿರೀಕ್ಷಿತ ಫಲ ನೀಡಿಲ್ಲ. ಜನರ ಪ್ರಮಾಣ ಏನೇ ಇರಲಿ ಅವರು ಗುಣವಂತರಾಗಿ ಮಾರ್ಪಾಡಾಗುವುದು ಮುಖ್ಯ. ಎಲ್ಲಿಯವರೆಗೆ ಜನರು ಸುಶಿಕ್ಷಿತರಾಗುವುದಿಲ್ಲವೊ, ಜನಸಂಖ್ಯಾ ಶಿಕ್ಷಣವನ್ನು ಪಡೆಯುವುದಿಲ್ಲವೊ ಅಲ್ಲಿಯವರೆಗೆ ಜನಸಂಖ್ಯೆ ನಿಯಂತ್ರಣ ತ್ರಾಸದಾಯಕವಾದುದು. ಜನರೇ ಸ್ವಯಂ ನಿಯಂತ್ರಣ ಕ್ರಮಗಳನ್ನು ಸ್ವ ಇಚ್ಛೆಯಿಂದ ಪಾಲಿಸಿದಾಗ ನಿರೀಕ್ಷಿತ ಯಶಸ್ಸು ಸಾಧಿಸಬಹುದು. ಒಟ್ಟಾರೆ ಜನರ ಮನಃ ಪರಿವರ್ತನೆಯಾಗಬೇಕು

# ಪ್ರಾಕೃತಿಕ ನಿದ್ದೆ ಆರೋಗ್ಯಕ್ಕೆ ಆಧಾರ

ಔದ್ಯೋಗೀಕರಣದ ನಾಗಾಲೋಟ, ನಗರಗಳ ಗಲಾಟೆ ಗದ್ದಲ ತುಂಬಿದ ವಾತಾವರಣದಲ್ಲಿನ ಜೀವನ, ಹಣದ ಅಭಾವ ಹಾಗೂ ಮಾನಸಿಕ ಒತ್ತಡ – ಇವುಗಳಿಗೆ ಒಳಗಾದವರು ಈ ಶತಮಾನದಲ್ಲಿ ಎಷ್ಟು ಜನ ಸ್ವಾಭಾವಿಕ ಹಾಗೂ ಆಳವಾದ ನಿದ್ದೆ ಮಾಡುತ್ತಿದ್ದಾರೆಂಬುದು ಚರ್ಚಾಸ್ಪದ ವಿಚಾರವೇ.

ಇಂದಿನ ವೇಗವಾಗಿ ಓಡುತ್ತಿರುವ ಯುಗದಲ್ಲಿ ಮಾನವ ತನ್ನ ಸ್ವಾಭಾವಿಕ ನಿದ್ದೆಯನ್ನು ಮಾಡುತ್ತಿಲ್ಲವೆಂಬುದನ್ನು, ಹೆಚ್ಚಿನ ನಿದ್ದೆ ಗುಳಿಗೆಗಳಿಗೆ ಬೇಡಿಕೆ, ವಿಭಿನ್ನ ರೀತಿಯ ಮಾದಕ ದ್ರವ್ಯಗಳ ಸೇವನೆ – ಇವು ದೃಢೀಕರಿಸಿವೆ. ನಿದ್ದೆ ಮಾಡಲೋಸುಗ ಅನೇಕ ಕೃತ್ರಿಮ ವಿಧಾನಗಳ ಆಸರೆಗಳನ್ನು ಮಾನವ ಹುಡುಕುತ್ತಿದ್ದಾನೆ. ಈ ಕೃತ್ರಿಮ ವಿಧಾನಗಳು ಮಾನವನ ಚಿತ್ತಸ್ವಾಸ್ಥ್ಯವನ್ನು ಕ್ರಮೇಣ ಹಾಳುಮಾಡುತ್ತಿವೆ.

'ಪ್ರಥಮ ಸುಖ, ನಿರೋಗಿಯಾದ ದೇಹ' ಎಂಬುದು ಒಂದು ಗಾದೆ ಮಾತು. ದೇಹ ನಿರೋಗಿಯಾದರೆ ಅದೇ ಎಲ್ಲಕ್ಕಿಂತ ದೊಡ್ಡ ಸುಖ. ಸ್ವಸ್ಥ ವ್ಯಕ್ತಿಯ ನಿದ್ದೆ ಕೂಡ ಸುಖಕರವಾಗಿಯೂ ಆಳವಾಗಿಯೂ ಇರುತ್ತದೆ. ದಿನ ಪೂರ್ತಿ ಶ್ರಮದ ಕೆಲಸ ಮಾಡಿದ ಮೇಲೆ ಶರೀರ ಸುಸ್ತಾದ ಅನುಭವ ಪಡೆಯುತ್ತದೆ. ನಿದ್ದೆ ಶರೀರದ ಅಂಗಾಂಗಗಳನ್ನು ಮತ್ತು ಇಂದ್ರಿಯಗಳನ್ನು ಸಡಿಲಗೊಳಿಸುತ್ತದೆ. ನಿದ್ರಾವಸ್ಥೆಯಲ್ಲಿ ಮಾಂಸಖಂಡಗಳು ಸಡಿಲಗೊಳ್ಳುತ್ತವೆ. ಶರೀರದ ಉಷ್ಣಾಂಶ ಮತ್ತು ರಕ್ತದೊತ್ತಡ ಕಡಿಮೆಯಾಗುತ್ತವೆ. ಡಾಕ್ಟರುಗಳ ಅಭಿಪ್ರಾಯದಂತೆ ಇದೊಂದು ಪ್ರಕೃತಿ ಸಹಜವಾದ ಸ್ಥಿತಿ. ನಿದ್ದೆ ಮಾಡುತ್ತಿದ್ದಾಗ ಮುಂದೆ ಕೆಲಸ ಮಾಡಲು ಶರೀರ ಪುನಃಶಕ್ತಿಯನ್ನೂ, ಚೇತನವನ್ನೂ ಪಡೆದುಕೊಳ್ಳುತ್ತದೆ. ಇದಕ್ಕೆ ವಿರುದ್ಧವಾದ ಸ್ಥಿತಿ ಉತ್ಪನ್ನವಾದರೆ ದೇಹ ನಿರೋಗಿಯಾಗಲು ಸಾಧ್ಯವಾಗುವುದಿಲ್ಲ. ಇದು ಪ್ರಕೃತಿಯ ನಿಯಮ.

**ನಿದ್ದೆ ಕಡಿಮೆ ಮಾಡುವುದರಿಂದ ಅಸ್ವಸ್ಥತೆ**

ಅಗತ್ಯಕ್ಕೆ ತಕ್ಕಷ್ಟು ನಿದ್ದೆ ಮಾಡದಿದ್ದರೆ ಆರೋಗ್ಯ ಹಾಳಾಗುತ್ತಿರುತ್ತದೆ. ಮನುಷ್ಯ ಶಾರೀರಿಕವಾಗಿಯೂ ಹಾಗೂ ಮಾನಸಿಕವಾಗಿಯೂ ಎರಡು ರೀತಿಯಲ್ಲಿ ಅಸ್ವಸ್ಥನಾಗುತ್ತಾನೆ. ಆತನ ಸ್ವಭಾವ ಸಿಟ್ಟಿಗೇಳುವುದಾಗುತ್ತದೆ. ಹಾಗಾಗಿ ಒಳ್ಳೆಯ ಆರೋಗ್ಯಕ್ಕಾಗಿ ಸಾಕಷ್ಟು ಪ್ರಮಾಣದ ಹಾಗೂ ಸ್ವಾಭಾವಿಕವಾದ ನಿದ್ದೆಯ ಅವಶ್ಯಕತೆ ಇದೆ. ನಿದ್ದೆ ಮಾಡುವುದರಿಂದ ಮಾನಸಿಕ ಹಾಗೂ ಶಾರೀರಿಕ ಸುಸ್ತು ದೂರಾಗುತ್ತದೆ. ನೀವು ಬೆಳಿಗ್ಗೆ ನಿದ್ದೆ ಮಾಡಿದ ನಂತರ ಒಮ್ಮೊಮ್ಮೆ 'ಫ್ರೆಷ್' ಆಗಿರುವ ಅನುಭವ ಪಡೆದಿದ್ದರೆ, ಮತ್ತೊಮ್ಮೆ ಸುಸ್ತಾದ ಅನುಭವ ಪಡೆಯುತ್ತಿರುವುದು ಬಹುಶಃ ನಿಮ್ಮ ಗಮನಕ್ಕೆ ಬಂದಿದ್ದಿರಬಹುದು. ಎಲ್ಲೋ ಏನೋ ಕಡಿಮೆಯಾಗಿರುವುದರ ಲಕ್ಷಣವೇ ನಿದ್ದೆ ಮಾಡಿದ ನಂತರ ಸುಸ್ತಾದ ಸ್ಥಿತಿ ಉಂಟಾಗಲು ಕಾರಣ. ಅಂಥಾ ಸ್ಥಿತಿಯ ಅನುಭವವಾದರೆ ನೀವು ವೈದ್ಯರ ಸಲಹೆ ಪಡೆಯಿರಿ. ಸುಖಕರ ನಿದ್ದೆ ಪಡೆಯಲು ಕೆಳಗಿನ ಉಪಾಯಗಳನ್ನು ಆಚರಣೆಗೆ ತನ್ನಿ :

- ❒ ಮಲಗುವ ಕೊಠಡಿ ಸ್ವಚ್ಛ ಹಾಗೂ ಶಾಂತ ವಾತಾವರಣದಲ್ಲಿರಬೇಕು.
- ❒ ದನದ ಕೊಟ್ಟಿಗೆ ಮತ್ತು ಶೌಚಾಲಯಗಳಂಥ ಪ್ರದೇಶಗಳಿಂದ ದೂರವಿರಬೇಕು.
- ❒ ಕೊಠಡಿಯೊಳಕ್ಕೆ ಶುದ್ಧವಾದ ಗಾಳಿ ಅನಿರ್ಬಂಧಿತವಾಗಿ ಪ್ರವೇಶ ಮಾಡುವಂತಿರಬೇಕು.
- ❒ ಮಲಗುವಾಗ ಕಿಟಕಿ ಮತ್ತು ವಾತಾಯನಗಳನ್ನು ತೆರೆದಿರಬೇಕು.
- ❒ ಮಲಗುವಾಗ ಅಗರಬತ್ತಿ, ಕರ್ಪೂರ ಅಥವಾ ಸಾಂಬ್ರಾಣಿ ಮುಂತಾದ ಯಾವುದೇ ತರಹದ ಸುಗಂಧ ವಸ್ತುಗಳೂ ಉರಿಯುತ್ತಿರಬಾರದು. ಇವುಗಳಿಂದ ನಿದ್ದೆ ಕೆಡುವ ಸಂಭವವಿರುತ್ತದೆ.
- ❒ ಮಲಗುವ ಹಾಸಿಗೆ ಸ್ವಚ್ಛವಾಗಿರಬೇಕು.
- ❒ ಹಾಸಿಗೆ ಹೆಚ್ಚು ಮೃದುವಾಗಿಯೂ ಇರಬಾರದು; ಅಥವಾ ಹೆಚ್ಚು ಕಾಠಿಣ್ಯತೆಯಿಂದಲೂ ಇರಬಾರದು. ಮಧ್ಯಸ್ತ ಸ್ಥಿತಿಯಲ್ಲಿರಬೇಕು.
- ❒ ಹೊದ್ದುಕೊಳ್ಳಲು ಮತ್ತು ಹಾಸಿಕೊಳ್ಳಲು ಎಷ್ಟು ಅತ್ಯಗತ್ಯದ ಬಟ್ಟೆ ಬೇಕೋ ಅಷ್ಟೇ ಸಾಕು.
- ❒ ಬೆಡ್‌ಶೀಟು ಹೆಚ್ಚು ಉದ್ದವಾಗಿರುವುದೇ ಆಗಲಿ ಅಥವಾ ಹೆಚ್ಚು ಒರಟಾಗಿರುವುದೇ ಆಗಲಿ ಇರಬಾರದು.
- ❒ ಸೊಳ್ಳೆಗಳ ಬಾಧೆ ಇರದಂತೆ ನೋಡಿಕೊಳ್ಳಬೇಕು.
- ❒ ತಿಗಣೆಗಳಿದ್ದರೆ ಅವುಗಳ ಹಾವಳಿಯಿಂದ ಮುಕ್ತರಾಗಲು ಕ್ರಮ ತೆಗೆದುಕೊಳ್ಳಬೇಕು.
- ❒ ಹಾಸಿಗೆಗಳನ್ನು ಸ್ವಚ್ಛ ಮಾಡುವುದರ ಜೊತೆಗೆ ಆಗಾಗ್ಗೆ ಅವನ್ನು ಬಿಸಿಲಿನಲ್ಲಿ ಹರಡಿ ಒಣಗಿಸುತ್ತಿರಬೇಕು.

ಮಲಗುವ ಮೊದಲಿನ ಶಾರೀರಕ ಹಾಗೂ ಮಾನಸಿಕ ಸ್ಥಿತಿಗಳು ಮತ್ತು ಮಾಡಿದ ಕೆಲಸಗಳು ನಿದ್ರೆಯ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತವೆ. ಮಲಗುವ ಮೊದಲು ಯಾವುದೇ ವ್ಯಕ್ತಿ ಚಿಂತಿತನಾಗಿದ್ದರೆ ಮಲಗಿದ ಮೇಲೆ ಆತ ಸಾಕಷ್ಟು ನಿದ್ದೆ ಪಡೆಯಲು ಅಸಮರ್ಥನಾಗಬಹುದು. ಆದುದರಿಂದ ಮಲಗುವ ಮೊದಲು ತನ್ನ ಎಲ್ಲ ಚಿಂತೆಗಳಿಂದ ಮುಕ್ತನಾಗಿರಬೇಕು. ಮನಸ್ಸಿನಲ್ಲಿ ಉದ್ರಿಕ್ತ ಸ್ಥಿತಿಯೋ, ಒತ್ತಡದ ಸ್ಥಿತಿಯೋ ಇರಬಾರದು. ಐದರಿಂದ ೨೦ ನಿಮಿಷಗಳಷ್ಟು ಕಾಲ ಮಲಗಿಕೊಂಡು ದೀರ್ಘವಾಗಿ ಹಾಗೂ ಆಳವಾಗಿ ಶ್ವಾಸೋಚ್ಛ್ವಾಸ ಮಾಡುತ್ತ, 'ನನ್ನ ಮನಸ್ಸು ಶಾಂತವಾಗಿದೆ, ಆರೋಗ್ಯದಿಂದಿದೆ' ಎಂದು ಯೋಚಿಸಬೇಕು.

ಮಲಗುವ ಮೊದಲು ಹೆಚ್ಚಿನ ಶ್ರಮದ ಕೆಲಸವನ್ನು ಕೂಡಾ ಮಾಡಬಾರದು. ಹಾಗೆ ಮಾಡಿದರೆ ಆಳವಾದ ನಿದ್ದೆ ಬರುವುದಿಲ್ಲ. ಹೆಚ್ಚು ಪ್ರಮಾಣದ ಊಟ ಮಾಡಬಾರದು ಅಥವಾ ಊಟ ಮಾಡಿದ ಮೇಲೆ ಮತ್ತು ಮಲಗುವ ಮೊದಲಿನ ಅಂತರ ಕನಿಷ್ಠ ಪಕ್ಷ ೨-೩ ಗಂಟೆಗಳಿರಬೇಕು.

ಮಲಗುವ ಹೊತ್ತು ಋತುವಿಗೆ ಅನುಸಾರ ತಣ್ಣೀರು ಅಥವಾ ಬಿಸಿ ನೀರಿನಿಂದ ಮುಖ ಕೈಕಾಲುಗಳನ್ನು ತೊಳೆದುಕೊಂಡರೆ ಆಳವಾದ ನಿದ್ದೆ ಬರುತ್ತದೆ. ಸಾಧ್ಯವಾದಷ್ಟೂ ನಿದ್ದೆ ಬರಿಸುವ ಯಾವ ರೀತಿಯ ಔಷಧಿಗಳನ್ನೇ ಆಗಲಿ ಅಥವಾ ಮಾದಕ ದ್ರವ್ಯಗಳ ಸೇವನೆಯನ್ನೇ ಆಗಲಿ ಮಾಡಬಾರದು; ಇವು ಸ್ವಾಸ್ಥ್ಯದ ಮೇಲೆ ಹಾನಿಕಾರಕ ಪ್ರಭಾವವನ್ನು ಬೀರುತ್ತವೆ.

ಮಲಗುವಾಗ ನಾವು ತೊಡುವ ಬಟ್ಟೆಗಳಿಗೂ ನಿದ್ದೆಗೂ ಗಾಢವಾದ ಸಂಬಂಧವಿದೆ. ಹೆಚ್ಚು ಬಿಗಿಯಾದ ಮತ್ತು ಒರಟಾದ ಬಟ್ಟೆಗಳನ್ನು ತೊಟ್ಟು ಮಲಗುವುದರಿಂದ ಸಹಜವಾಗಿ ಉಸಿರಾಡಲು ಕಷ್ಟವಾಗುತ್ತದೆ. ಹಾಗಾಗಿ ಆಳವಾದ ಉಸಿರು ತೆಗೆದುಕೊಳ್ಳಲು ಕಷ್ಟವಾಗುತ್ತದೆ. ಆದುದರಿಂದ ನಾವು ನಿದ್ರಿಸುವಾಗ ತೊಡುವ ಬಟ್ಟೆ ಯಾವಾಗಲೂ ಸಡಿಲವಾಗಿರಬೇಕು.

ಮಲಗುವ ಮೊದಲು ಬಟ್ಟೆಗಳನ್ನು ಅತ್ಯಗತ್ಯವಾಗಿ ಬದಲಿಸಿ ಮಲಗಬೇಕು. ಇಡೀ ದಿನ ತೊಟ್ಟ ಬಟ್ಟೆಗಳನ್ನೇ ತೊಟ್ಟು ಮಲಗುವುದರಿಂದ ಬೆವರಿನ ವಾಸನೆ ಬರುತ್ತಿರುತ್ತದೆ. ಆ ಬಟ್ಟೆಗಳನ್ನು ತೊಟ್ಟ ವ್ಯಕ್ತಿಗೆ 'ಸ್ವಚ್ಛತೆ ಇಲ್ಲ' ಎಂಬ ಅನುಭವವಾಗಿ ಆತನಿಗೆ ಆಳವಾದ ನಿದ್ದೆ ಪಡೆಯುವಲ್ಲಿ ಬಾಧಕವುಂಟಾಗುತ್ತದೆ.

ಎಸ್. ವಿಶ್ವನಾಥ
ಕೆ-೨೪೬, ಬಸ್‌ಸ್ಟಾಪ್ ಎದುರು, ಕಲ್ಲಹಳ್ಳಿ, ಮಂಡ್ಯ-೫೭೧ ೪೦೧

*ಹಿಂದಿನ ಪುಟದಿಂದ*

ಇಲ್ಲದಿದ್ದರೆ ನಿಸರ್ಗದಲ್ಲಿ ಸಮತೋಲನ ತಪ್ಪಿ ನಿಸರ್ಗವೇ ತನ್ನ ವಿಕೋಪಗಳಿಂದ ಜನರನ್ನು ನಿಗ್ರಹಿಸಬೇಕಾದೀತು !

ಅದು ಹೆಣ್ಣಿರಲಿ-ಗಂಡಿರಲಿ ಒಂದು ಕುಟುಂಬಕ್ಕೆ ಒಂದು ಮಗು ಸಾಕೆಂದು ಎಲ್ಲರೂ ನಿರ್ಧರಿಸಬೇಕು. ಒಂದು ಮಗುವನ್ನು ಮಾತ್ರ ಹೊಂದುವವರಿಗೆ ಸರ್ಕಾರ ಹೆಚ್ಚು ಪುರಸ್ಕಾರ ನೀಡಬೇಕು. ದೇಶದ ಹಿತದೃಷ್ಟಿಯಿಂದ ಸರ್ವಧರ್ಮೀಯರೂ ಕಡ್ಡಾಯ ಕುಟುಂಬ ಯೋಜನೆಯನ್ನು ಪಾಲಿಸಬೇಕು. ಈ ನಿಟ್ಟಿನಲ್ಲಿ ಚೈನಾ ದೇಶವು ನಮಗೆ ಮಾದರಿಯಾಗಬಹುದು. ಆದರೆ ಅಲ್ಲೂ ಹೆಣ್ಣುಮಕ್ಕಳ ಜನನವನ್ನು ತಡೆಯುವ ಪ್ರಕ್ರಿಯೆ ಜಾರಿಯಲ್ಲಿದೆ; ಅಂತಹ ಹಿಂಸಾ ಕ್ರಮ ನಮ್ಮದಾಗಬಾರದು, ಅಷ್ಟೆ. ಕಳೆದೆರಡು ದಶಕಗಳಿಂದ ದೇಶದ ಜನಸಂಖ್ಯೆ ಬೆಳವಣಿಗೆ ದರ ಸ್ವಲ್ಪ ಪ್ರಮಾಣದಲ್ಲಿ ಇಳಿಕೆಯಾಗುತ್ತಿರುವುದಷ್ಟೆ (೧೯೭೧-೮೧ ಶೇ. + ೨೪.೬೬, ೧೯೮೧-೯೧ ಶೇ. + ೨೩.೫೦ ಮತ್ತು ೧೯೯೧-೨೦೦೧ ಶೇ. + ೨೧.೬೯) ಸಮಾಧಾನದ ವಿಷಯ.

ಅಂಕಿ ಅಂಶಗಳು ಆಧಾರ : Census of India 1981, 1991 and provisionals for 2001.

ಡಾ|| ದಯಾನಂದ
ಉಪನ್ಯಾಸಕ, ಮಹಾರಾಣಿ ಸರ್ಕಾರಿ ಪದವಿ ಪೂರ್ವ ಕಾಲೇಜು, ನಾರಾಯಣಶಾಸ್ತ್ರಿ ರಸ್ತೆ, ಮೈಸೂರು - ೫೭೦ ೦೨೪

# ಪ್ರಾಥಮಿಕ ಶಿಕ್ಷಣ
# ಕೆಲವು ಮೂಲಭೂತ ಪ್ರಶ್ನೆಗಳು

ಶಿಕ್ಷಣ ಮೂಲಭೂತ ಹಕ್ಕು, ಹೌದೇ ? ಹೌದು, ಎನ್ನುತ್ತಾರೆ ಹೆಚ್ಚಿನವರು. ಆದರೆ ವಾಸ್ತವದಲ್ಲಿ ಶಿಕ್ಷಣ ಇನ್ನೂ ಮೂಲಭೂತ ಹಕ್ಕಾಗಿಲ್ಲ. ಇದಕ್ಕೆ ಸಂಬಂಧಿಸಿದಂತೆ ಸರ್ಕಾರ ಸಂವಿಧಾನ ತಿದ್ದುಪಡಿಯನ್ನು ಲೋಕಸಭೆಯಲ್ಲಿ ಪ್ರಸ್ತಾಪಿಸಿದೆ. ಸಭೆಯಲ್ಲಿ ಹಾಜರಿದ್ದ ೩೬೦ ಮಂದಿ ಸಂಸದರೂ ಪಕ್ಷ ಭೇದವಿಲ್ಲದೆ ಈ ತಿದ್ದುಪಡಿ ಮಸೂದೆಯನ್ನು ಅನು ಮೋದಿಸಿ ಮತ ಚಲಾಯಿಸಿದ್ದಾರೆ. ಸದ್ಯಕ್ಕೆ ಮಸೂದೆ ರಾಜ್ಯ ಸಭೆಯಲ್ಲಿದೆ. ಈ ಬಾರಿಯ ಬಜೆಟ್ ಅಧಿವೇಶನದ ನಡುವೆ ಮಸೂದೆ ಅಂಗೀಕರಿಸಲ್ಪಡುವ ಸಾಧ್ಯತೆಗಳು ಹೆಚ್ಚಾಗಿವೆ. ಮಸೂದೆ ಅಂಗೀಕರಿಸಲ್ಪಟ್ಟು ರಾಷ್ಟ್ರಪತಿಯವರ ಸಹಿ ಬಿದ್ದೊಡನೆ ಶಿಕ್ಷಣ ಮೂಲಭೂತ ಹಕ್ಕು ಎಂದಾಗುತ್ತದೆ.

ಇದಕ್ಕೆ ಸಂಬಂಧಿಸಿದಂತೆ ಮೊದಲ ಮಸೂದೆಯನ್ನು (೮೩ರ ತಿದ್ದುಪಡಿ) ಲೋಕಸಭೆಯಲ್ಲಿ ಮಂಡಿಸಲಾಗಿತ್ತು. ದೇವೇಗೌಡರ ಸರ್ಕಾರದ ಕಾಲದಲ್ಲಿ ಅಂದಿನ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವರಾಗಿದ್ದ ಎಸ್.ಆರ್.ಬೊಮ್ಮಾಯಿ ಮಸೂದೆಯನ್ನು ಮಂಡಿಸಿದ್ದರು. ಆದರೆ ಮಸೂದೆ ಅಂಗೀಕಾರವಾಗದೆ ಧೂಳು ತಿನ್ನತೊಡಗಿತು. ೨೦೦೧ರಲ್ಲಿ ಈಗಿನ ಸಮ್ಮಿಶ್ರ ಸರ್ಕಾರ ಇದೇ ಮಸೂದೆಗೆ ಅಲ್ಲಲ್ಲಿ ಕೆಲವು ಬದಲಾವಣೆಗಳನ್ನು ಮಾಡಿ ಮತ್ತೆ ಲೋಕಸಭೆಯಲ್ಲಿ ಮಂಡಿಸಿದೆ.

೧೯೯೭ರಲ್ಲಿ ಮಸೂದೆಯನ್ನು ಮಂಡಿಸುತ್ತಿದ್ದಂತೆಯೇ ಮಸೂದೆಗೆ ವಿರುದ್ಧವಾಗಿ ಹಲವು ಭಿನ್ನಾಭಿಪ್ರಾಯಗಳು, ಟೀಕೆ ವಿಮರ್ಶೆಗಳು ಎದ್ದಿದ್ದವು. ಶಿಕ್ಷಣ ತಜ್ಞರು, ಶಿಕ್ಷಣಕ್ಕೆ ಸಂಬಂಧಿಸಿದಂತೆ ಕೆಲಸ ಮಾಡುತ್ತಿರುವ ಹಲವು ಸಂಸ್ಥೆಗಳು, ಸಂಘಟನೆಗಳು, ಗುಂಪುಗಳು, ವ್ಯಕ್ತಿಗಳು, ಬಾಲಕಾರ್ಮಿಕ ವಿರೋಧಿ ಸಂಘಟನೆಗಳು ಈ ಮಸೂದೆಯಲ್ಲಿನ ಕೊರತೆಗಳನ್ನು ಎತ್ತಿ ತೋರಿಸಿದ್ದವು. ಬದಲಾವಣೆ ಬಯಸಿ ಒತ್ತಡ ತಂದಿದ್ದವು. ಈ ಬೇಡಿಕೆಗಳು ಈಗಲೂ ಪ್ರಸ್ತುತವಾಗಿದ್ದು ಮುಂದುವರೆದಿರುವುದರಿಂದ ಈ ವಿಚಾರ ಪ್ರಾಥಮಿಕ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಅತ್ಯಂತ ಕಾಳಜಿಯ ಒಂದು ಸಂಗತಿಯಾಗಿದೆ.

ಸಂವಿಧಾನದ ೪ನೇ ಅಧ್ಯಾಯ ೪೫ನೇ ಪರಿಚ್ಛೇದ ಉಚಿತ ಕಡ್ಡಾಯ ಶಿಕ್ಷಣದ ಬಗ್ಗೆ ಪ್ರಸ್ತಾಪಿಸುತ್ತದೆ.೧೪ ವರ್ಷದೊಳಗಿನ ಮಕ್ಕಳೆಲ್ಲರಿಗೂ ಮುಂದಿನ ೧೦ ವರ್ಷದೊಳಗೆ (ಅಂದರೆ ೧೯೬೦ನೆಯ ಇಸವಿಯ ಒಳಗೆ) ಉಚಿತ ಕಡ್ಡಾಯ ಶಿಕ್ಷಣ ಒದಗಿಸುವ ಕೆಲಸ ಸರ್ಕಾರ ಮಾಡುವುದೆಂದು ಅದು ಹೇಳುತ್ತದೆ. ಸಂವಿಧಾನದ ಈ ಆಶಯವನ್ನು ಪರಿಗಣಿಸಿ ನಿರ್ದಿಷ್ಟ ಸಮಯದೊಳಗೆ ದೇಶದ ಮಕ್ಕಳೆಲ್ಲರಿಗೆ ಶಿಕ್ಷಣ ನೀಡುವು ದಕ್ಕೆ ಸರ್ಕಾರ ತನ್ನ ಎಲ್ಲ ಸಾಮರ್ಥ್ಯವನ್ನು ಬಳಸಿಕೊಳ್ಳಬೇಕಾಗಿತ್ತು. ಆದರೆ ೫ ದಶಕಗಳೇ ಕಳೆದುಹೋದರೂ ಈ ಸಂವಿಧಾನ ಬದ್ಧತೆ ಕೇವಲ ಕಾಗದದ ಮೇಲೆ ಮಾತ್ರ ಉಳಿಯುವಂತಾಗಿದೆ.

ನಿರ್ಗತಿಕರ, ನಿರಾಶ್ರಿತರ, ದಲಿತರ, ಹಿಂದುಳಿದ ಜಾತಿ ವರ್ಗಗಳವರ ಹಾಗೂ ಹೆಣ್ಣುಮಕ್ಕಳ ದಶಕಗಳ ಕನಸು ಉಚಿತ ಕಡ್ಡಾಯ ಶಿಕ್ಷಣ. ಭಾರತ ಉಸಿರಾಡುತ್ತಿರುವುದು ಗ್ರಾಮಗಳಲ್ಲಿ ಎಂದು ಮಹಾತ್ಮ ಹೇಳಿದ ನಾಡಿನ ಹಳ್ಳಿಹಳ್ಳಿಗಳ ಮೂಲೆ ಮೂಲೆಗಳಿಗೆ ಶಾಲೆ ಎಂಬುದು ಇಂದಿಗೂ ಗಗನ ಕುಸುಮವೇ. ಆದರೆ ಈ ಮಸೂದೆಯನ್ನು ಜಾರಿಗೆ ತರುವುದರಿಂದ ಮಾತ್ರವೇ ಎಲ್ಲವೂ ಸರಿಯಾಗಿಬಿಡುತ್ತದೆಯೇ ?

ಖಂಡಿತ ಇಲ್ಲ. ಕಾರಣ, ಈ ಮಸೂದೆಯಲ್ಲಿ ಕೊರತೆಗಳು ಅನೇಕ. ಈ ಕೊರತೆಗಳು ದೂರವ್ಯಾಪಕವಾದ ಹಲವು ಸಮಸ್ಯೆಗಳನ್ನು ತಂದೊಡ್ಡುವಂತಹವು. ಇವೆಲ್ಲ ಕೊರತೆಗಳು ಸರ್ಕಾರದ ಗಮನಕ್ಕೆ ಬಂದಿಲ್ಲವೆಂತಲ್ಲ. ಆದರೂ ಅದನ್ನು ಜಾರಿಗೊಳಿಸಲೇಬೇಕೆಂಬ ಹಠವನ್ನು ಅದು ಹೊಂದಿದೆ.

**ಕೊರತೆಗಳು**

ಸಂವಿಧಾನದ ೪೫ನೇ ಪರಿಚ್ಛೇದದ ಪ್ರಕಾರ ೧೪ ವರ್ಷದ ಕೆಳಗಿನ ಎಲ್ಲ ಮಕ್ಕಳಿಗೂ ಉಚಿತ ಕಡ್ಡಾಯ ಶಿಕ್ಷಣ ನಿಶ್ಚಿತಗೊಳಿಸಬೇಕೆಂದು ಸಂವಿಧಾನ ಹೇಳುತ್ತದೆ. ೧೯೯೩ರ ಉಣ್ಣಿಕೃಷ್ಣನ್ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯ ನೀಡಿದ ಪ್ರಮುಖವಾದ ತೀರ್ಪಿನ ಪ್ರಕಾರ ಶಿಕ್ಷಣ ಎಲ್ಲ ಮಕ್ಕಳ ಮೂಲಭೂತ ಹಕ್ಕಾಗಿದೆ.

- ಆದರೆ ಮಸೂದೆಯ ಪ್ರಕಾರ ೬-೧೪ರ ನಡುವೆ ಇರುವ ಮಕ್ಕಳಿಗೆ ಮಾತ್ರ ಶಿಕ್ಷಣ ಮೂಲಭೂತ ಹಕ್ಕಾಗುತ್ತದೆ. ೬ ವರ್ಷದ ಕೆಳಗಿನ ಮಕ್ಕಳಿಗೆ ಯಾವುದೇ ಬಗೆಯ ಶಿಕ್ಷಣದ ಹಕ್ಕು ಅವಕಾಶಗಳು ಇದರಲ್ಲಿ ಇರುವುದಿಲ್ಲ. ೧೬ ಕೋಟಿ ಮಕ್ಕಳು ಈ ಮಸೂದೆಯ ಪ್ರಕಾರ ಇದರಿಂದ ಹೊರಗುಳಿಯುತ್ತಾರೆ.
- ಮಕ್ಕಳನ್ನು ಶಾಲೆಗೆ ಕಳುಹಿಸಬೇಕಾಗಿರುವುದು ತಂದೆ-ತಾಯಿಗಳ ಕರ್ತವ್ಯ ಎಂದು ಮಸೂದೆ ಹೇಳುತ್ತದೆ. (ಉಪವಿಭಾಗ ೫೧ A {k}. ಮಕ್ಕಳನ್ನು ಕಳುಹಿಸದಿದ್ದರೆ ಅದು ಶಿಕ್ಷಾರ್ಹ ಎಂಬುದು ಪರೋಕ್ಷವಾಗಿ ಇದರರ್ಥ.
- ಉಚಿತ ಶಿಕ್ಷಣ ಎಂದರೆ ಏನು ಎಂಬುದು ಇಲ್ಲಿ ನಿರ್ವಚಿಸಲ್ಪಟ್ಟಿಲ್ಲ.
- ಮೂಲಭೂತ ಹಕ್ಕು ಯಾವ ಅವಧಿಯ ಒಳಗೆ ಜಾರಿಗೆ ಬರುವುದೆಂಬುದನ್ನು ಮಸೂದೆಯಲ್ಲಿ ಹೇಳಲಾಗಿಲ್ಲ.
- ಗುಣಮಟ್ಟ, ಸಮಾನತೆ ಎಂಬ ಪರಿಕಲ್ಪನೆಗಳು ಮಸೂದೆಯಿಂದ ದೂರದಲ್ಲೇ ಉಳಿದಿವೆ.
- ಸಂಯುಕ್ತ ರಾಷ್ಟ್ರ ಸಂಘದ ಮಕ್ಕಳ ಹಕ್ಕುಗಳ ಒಡಂಬಡಿಕೆಗೆ ೧೯೯೨ರಲ್ಲಿ ಸಹಿ ಹಾಕಿದ ಭಾರತ ಅದರ ಪರಿಚ್ಛೇದಗಳನ್ನು ಈ ಮಸೂದೆಯ ಮೂಲಕ ಉಲ್ಲಂಘಿಸುತ್ತದೆ. ೧೮ ವರ್ಷದೊಳಗಿನ ಎಲ್ಲರೂ ಮಕ್ಕಳು ಎಂದು ಮಕ್ಕಳ ಹಕ್ಕುಗಳ ಒಡಂಬಡಿಕೆ ಹೇಳುತ್ತದೆ. ಆದರೆ ೧೫-೧೮ ವರ್ಷದೊಳಗಿನ ಮಕ್ಕಳನ್ನು ಈ ಮಸೂದೆ ಹೊರಗಿಟ್ಟಿದೆ.

೧೯೯೨ರ ಮೋಹಿನಿ ಜೈನ್ ಪ್ರಕರಣದ ತೀರ್ಪಿನಲ್ಲೂ, ೧೯೯೩ರ ಉಣ್ಣಿಕೃಷ್ಣನ್ ತೀರ್ಪಿನಲ್ಲೂ ಸರ್ವೋಚ್ಚ ನ್ಯಾಯಾಲಯ ಶಿಕ್ಷಣ ಮೂಲಭೂತ ಹಕ್ಕು ಎಂದು ಒತ್ತಿ ಹೇಳಿದೆ. ಸಂವಿಧಾನದ ೧೪೧ನೇ ಪರಿಚ್ಛೇದದಲ್ಲಿ ಸರ್ವೋಚ್ಚ ನ್ಯಾಯಾಲಯದ ತೀರ್ಪು ಅಂತಿಮ ಎಂದು ಹೇಳಲಾಗಿದೆ. ಇದರ ಪ್ರಕಾರ ೧೪ ವರ್ಷದೊಳಗಿನ ಮಕ್ಕಳಿಗೆ ಉಚಿತ ಕಡ್ಡಾಯ ಶಿಕ್ಷಣ ಮೂಲಭೂತ ಹಕ್ಕು ಎಂದು ಸರ್ವೋಚ್ಚ ನ್ಯಾಯಾಲಯ

*ಭಾರತದ ಶೇ. ೨೦ರಷ್ಟು ಗ್ರಾಮಗಳಲ್ಲಿ ಇನ್ನೂ ಶಾಲೆಗಳಿಲ್ಲ. ಮಕ್ಕಳನ್ನು ಶಾಲೆಗೆ ಕಳುಹಿಸುವುದು ತಂದೆ-ತಾಯಿಗಳ ಕರ್ತವ್ಯವೆಂದಾದಲ್ಲಿ ಅವರು ಶಾಲೆಗಳನ್ನು ಹುಡುಕಿಕೊಂಡು ಹೋಗುವುದಾದರೂ ಎಲ್ಲಿಗೆ ?*

ಪಿ. ಪಿ. ಬಾಬುರಾಜ್

ತೀರ್ಪು ಹೇಳಿದೆ. ಸರಕಾರ ತಂದಿರುವ ಸಂವಿಧಾನ ತಿದ್ದುಪಡಿ ಮಸೂದೆ (ಪರಿಚ್ಛೇದ ೨೧ A) ಈ ತೀರ್ಪುಗಳನ್ನು ಉಲ್ಲಂಘಿಸುತ್ತದೆ. ಸಂವಿಧಾನದ ೪೫ನೇ ಪರಿಚ್ಛೇದದ ಆಶಯವನ್ನು ಮತ್ತೊಂದು ಅರ್ಥದಲ್ಲಿ ಹೇಳುವುದಾದರೆ ಸರ್ವೋಚ್ಚ ನ್ಯಾಯಾಲಯ ನೀಡಿದ್ದನ್ನು ಸರಕಾರ ಶಾಸಕಾಂಗದ ಮುಖಾಂತರ ಕಿತ್ತುಕೊಳ್ಳುತ್ತಿದೆ.

೬ ವರ್ಷದೊಳಗಿನ ಮಕ್ಕಳನ್ನು ಸರಕಾರ ಕೈಬಿಟ್ಟಿರುವುದು ನ್ಯಾಯಸಮ್ಮತವಲ್ಲ. ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಈ ವಿಭಾಗವನ್ನು ಪ್ರಾಥಮಿಕ ವಿದ್ಯಾಭ್ಯಾಸದ ವ್ಯಾಪ್ತಿಯಲ್ಲಿ ಒಳಪಡಿಸುವ ಶಿಫಾರಸ್ಸು ಇದೆ. ಮಗುವೊಂದರ ಶಾರೀರಿಕ, ಬೌದ್ಧಿಕ, ಮಾನಸಿಕ ವಿಕಾಸ ಹಾಗೂ ಬೆಳವಣಿಗೆಯ ಸಮಯವಿದು. ಮಕ್ಕಳ ಪೌಷ್ಟಿಕ ಆಹಾರ ವಿತರಣೆ ಇದರಲ್ಲಿ ಒಳಪಡುತ್ತದೆ. ಶಿಕ್ಷಣ ನೀತಿಯನ್ನು ಪರಿಶೀಲಿಸಲು ನೇಮಕವಾದ ಆಚಾರ್ಯ ರಾಮಮೂರ್ತಿ ಸಮಿತಿ (೧೯೯೨) ಕ್ರೆಶ್‌ಗಳು, ಶಿಶು ಸಂರಕ್ಷಣ ಕೇಂದ್ರಗಳು ಪ್ರಾಥಮಿಕ ಪಾಠಶಾಲೆಗಳೊಂದಿಗೆ ಸೇರ್ಪಡೆಗೊಳ್ಳಬೇಕೆಂದು ಶಿಫಾರಸು ಮಾಡಿದೆ. ೬ ವರ್ಷದ ಕೆಳಗಿರುವ ಮಕ್ಕಳ ಹಕ್ಕು ಅವಕಾಶಗಳನ್ನು ಮೂಲಭೂತ ಹಕ್ಕುಗಳಲ್ಲಿ ಸೇರಿಸಬೇಕೆಂದು ಸಮಿತಿ ಹೇಳಿದೆ. ಆದರೆ ಮಸೂದೆ ೧೬ ಕೋಟಿ ಜನಸಂಖ್ಯೆಯಿರುವ ಈ ವಿಭಾಗವನ್ನು ಸಂಪೂರ್ಣವಾಗಿ ಬದಿಗೆ ಸರಿಸಿಬಿಟ್ಟಿದೆ.

ಮಸೂದೆಯಲ್ಲಿ ಸೇರ್ಪಡೆಯಾಗಿರುವ ಮತ್ತೊಂದು ಬಹುಮುಖ್ಯ ಅಂಶವೆಂದರೆ ಪೋಷಕರ ಕರ್ತವ್ಯವನ್ನು ಕುರಿತಾಗಿರುವುದು. ಪೋಷಕರು ಮಕ್ಕಳನ್ನು ಶಾಲೆಗೆ ಸೇರಿಸದಿದ್ದರೆ ಅವರು ಸೆರೆವಾಸ ಅನುಭವಿಸ ಬೇಕಾದೀತೆಂಬ ಭೀತಿಯನ್ನು ಅವರಲ್ಲಿ ಹುಟ್ಟಿಸುತ್ತದೆ. ಶಿಕ್ಷಣ ನೀಡುವುದು ಸರಕಾರದ ಜವಾಬ್ದಾರಿಯಾಗಿರುವಾಗ ಆ ಭಾರವನ್ನು ಪೋಷಕರ ಮೇಲೆ ಹೇರುವುದೇಕೆ ? ಸಂವಿಧಾನದ ಪರಿಚ್ಛೇದದ ಪ್ರಕಾರ ಸಂವಿಧಾನದಲ್ಲಿ ನೀಡಲಾಗಿರುವ ಭರವಸೆಯನ್ನು ಈಡೇರಿಸಲಾಗದೆ, ಶಿಕ್ಷಣ ನೀತಿ ನೆಲಕಚ್ಚಿರುವ ೫೪ನೇ ವರ್ಷದಲ್ಲಿ ಶಿಕ್ಷಣ ನೀಡಲಿಲ್ಲವೆಂದು ಪೋಷಕರ ಮೇಲೆ ಕಾನೂನು ಕ್ರಮ ಕೈಗೊಳ್ಳಲು ಸರಕಾರಕ್ಕೆ ಯಾವ ನೈತಿಕ ಹಕ್ಕಿದೆ ?

## ವಾಸ್ತವ

ಹೊಳೆವ ಕರಿಯನ ಮೈಯ  
ಬೆವರ ಬಿಂದುಗಳಲ್ಲಿ  
ಝಗಮಗಿಸುತ್ತಿತ್ತು ಕೋಟಿ ಸೂರ್ಯರ ದಂಡು  
ಮಟಮಟ ಮಧ್ಯಾಹ್ನ ಮಾಮರದ ಕೆಳಗೆ  
ನೀರೆಲ್ಲ ಹೀರಿದರೂ ಶಮನವಾಗದ  
ಬಿಸಿಲ ಭೀಕರ ಕಿಚ್ಚು ಭುವಿಯ ಮೇಲೆ

ಕರಿಯನ ಕಣ್ಣಲ್ಲಿ ಹಿಡಿಸದಷ್ಟೂ ಕನಸು  
ಎಂದೋ ನೋಡಿದ್ದ ಚಲನಚಿತ್ರದೊಳಗಿಂದ  
ಕತೆಯಲ್ಲಿ ಕೇಳಿದ್ದ ಸ್ವರ್ಗದಾ ಸಭೆಯಿಂದ  
ಬಂದಳಾ ರಾಜಕುಮಾರಿ ಅವನ ಬಳಿಗೆ

ಬಳಿ ಬಂದವಳೆ ಸೂರ್ಯನ ಕೆಕ್ಕರಿಸಿ ನೋಡಿ  
ಗುಡಿಸಲ ಒಲೆಯೊಳಗೆ ಉರಿ ಎಂದು  
ಕರಿಯನ ಮೈಯೊರೆಸಿ, ಸೆರಗಲ್ಲೆ ಗಾಳಿ ಬೀಸಿ  
ಉಳುವಾಗ ಬಿರಿವ ಮಣ್ಣಂತೆ ನಕ್ಕಾಗ  
ಕರಿಯ ಕಣ್ಮುಚ್ಚಿ ಇಷ್ಟದೇವರ ಪ್ರಾರ್ಥಿಸಿ

ಇನ್ನೇನು ಕೊಡಬೇಕು, ಬರಸೆಳೆದು ಬಿಗಿದಪ್ಪಿ  
ಅಷ್ಟೂ ಹೊತ್ತು ಭಣಗುಡುವ ನೀಲಾಕಾಶದಲಿ  
ಕೂಗದೆ, ರೆಕ್ಕೆ ಬಡಿಯದೆ, ಏನನ್ನೂ ತೋರದೆ  
ಹಾರುತ್ತಿದ್ದ ಗಿಡುಗ ಕೆಳಗಿಳಿದು ಬೃಹದಾಕಾರ  
ರಾಜಕುಮಾರಿಯ ಉಗುರಲ್ಲೆ ಬಿಗಿಹಿಡಿದು  
ಸೂರ್ಯನತ್ತಲೇ ಹಾರಿತು.

**ಸುಧನ್ವಾ ದೇರಾಜೆ**  
ಅಂಚೆ : ಐವರ್ನಾಡು, ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ-೫೭೪ ೨೪೫



ಭಾರತದ ಶೇ. ೨೦ರಷ್ಟು ಗ್ರಾಮಗಳಲ್ಲಿ ಇನ್ನೂ ಶಾಲೆಗಳಿಲ್ಲ. ಮಕ್ಕಳನ್ನು ಶಾಲೆಗೆ ಕಳುಹಿಸುವುದು ತಂದೆ- ತಾಯಿಗಳ ಕರ್ತವ್ಯವೆಂದಾದಲ್ಲಿ ಅವರು ಶಾಲೆಗಳನ್ನು ಹುಡುಕಿಕೊಂಡು ಹೋಗುವುದಾದರೂ ಎಲ್ಲಿಗೆ ? ಒಂದು ವೇಳೆ ಶಾಲೆಗಳು ಇದ್ದರೂ ಅಲ್ಲಿ ಶಿಕ್ಷಕರಿರುವುದಿಲ್ಲ. ಶಾಲಾ ಕಟ್ಟಡವೇ ಸರಿಯಾಗಿ ಇರುವುದಿಲ್ಲ. ಶೌಚಾಲಯ (ಅದರಲ್ಲೂ ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಶೌಚಾಲಯ) ವ್ಯವಸ್ಥೆ ಇರುವುದಿಲ್ಲ. ಪೀಠೋಪಕರಣಗಳಾಗಲಿ, ಕಲಿಕಾ ಸಾಮಗ್ರಿಗಳಾಗಲಿ, ಗ್ರಂಥಾಲಯ, ಪ್ರಯೋಗಶಾಲೆಗಳೇ ಆಗಲಿ, ಆಟದ ಮೈದಾನ, ಆಟದ ವಸ್ತುಗಳಾಗಲಿ ಇರುವುದಿಲ್ಲ. ಮಕ್ಕಳ ಬದುಕಿನ ವಾಸ್ತವತೆಯೊಂದಿಗೆ ತಾಳೆಯಾಗದ, ಅವರ ಭವಿಷ್ಯ ರೂಪಿಸಲು ನೆರವಾಗದ ಪಠ್ಯ ವಿಷಯಗಳು ಹಾಗೂ ಬೋಧನಾ ವಿಧಾನಗಳು. ಇದರೊಂದಿಗೆ ಅಧ್ಯಾಪಕರ ವರ್ತನೆ, ಮಕ್ಕಳೊಂದಿಗಿನ ಅವರ ಧೋರಣೆ, ಪೀಡನೆ ಇವೆಲ್ಲ ಸೇರಿ ಮಕ್ಕಳನ್ನು ಶಾಲೆಗಳಿಂದ ಹೊರಗೆ ಉಳಿಯುವಂತೆ ಮಾಡುತ್ತವೆ. ಕೆಳಜಾತಿ, ಕೆಳವರ್ಗಕ್ಕೆ ಸೇರಿದ ಮಕ್ಕಳನ್ನು ಉಳಿದವರು ನೋಡುವ ರೀತಿ ಇವುಗಳು ಮಕ್ಕಳಲ್ಲಿ ಕೀಳರಿಮೆಯನ್ನು ಬಿತ್ತುವುದರ ಮೂಲಕ ಮಕ್ಕಳನ್ನು ಶಾಲೆಯಿಂದ ದೂರ ಸರಿಯುವಂತೆ ಮಾಡುತ್ತವೆ. ಖಾಸಗಿ ಶಾಲೆಗಳ ಮೇಲೆ ಮಧ್ಯಮ ವರ್ಗದಲ್ಲಿರುವ ಅಮಿತವಾದ ಆಕರ್ಷಣೆ ನಮ್ಮ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಗೆ ಕನ್ನಡಿ ಹಿಡಿಯುವುದರೊಂದಿಗೆ ಒಟ್ಟು ವ್ಯವಸ್ಥೆಯ ಮೇಲೆಯೇ ಕೆಟ್ಟ ಪರಿಣಾಮಗಳನ್ನು ಬೀರುತ್ತವೆ. ಇದು ಉಂಟುಮಾಡುವ ಸಮಸ್ಯೆಗಳನ್ನು ಎದುರಿಸಬೇಕಾದವರು ಕೆಳ ಮಧ್ಯಮ ವರ್ಗದ ಜನರು. ಇಂತಹ ಸಾಕಷ್ಟು ವಿಚಾರಗಳನ್ನು ಗಮನಕ್ಕೆ ತೆಗೆದುಕೊಳ್ಳದೆ ಕೇವಲ ಪೋಷಕರ ಮೇಲೆ ಕ್ರಮ ಕೈಗೊಳ್ಳಬೇಕೆನ್ನುವ ಸರಕಾರದ ಕ್ರಮ ಅನುಚಿತವಾಗಿದೆ. ಶೈಕ್ಷಣಿಕ ವರ್ಷದ ಆರಂಭದಲ್ಲಿ ಶಾಲಾ ದಾಖಲಾತಿಯಲ್ಲಿ ಹೆಚ್ಚಳವಿದ್ದರೂ ಕ್ರಮೇಣ ಹಾಜರಾತಿಯಲ್ಲಿ ಗಣನೀಯ ಪ್ರಮಾಣದಲ್ಲಿ ಇಳಿತ ಕಂಡುಬರುತ್ತದೆ. ಇದು ವಾಸ್ತವತೆ. ಮಕ್ಕಳು ವರ್ಷಪೂರ್ತಿ ಶಾಲೆಯಲ್ಲಿ ಉಳಿಯುವಂತಹ ವಾತಾವರಣ, ಪಠ್ಯಕ್ರಮ, ಬೋಧನಾ ವಿಧಾನ ಇವುಗಳನ್ನೆಲ್ಲ ವಿಶೇಷವಾಗಿ ವಿನ್ಯಾಸಗೊಳಿಸಿದಲ್ಲಿ ಮಕ್ಕಳು ಶಾಲೆಯಲ್ಲಿ ಉಳಿಯುವಂತಾಗುತ್ತದೆ.

ಮಸೂದೆಯಲ್ಲಿನ ಮತ್ತೊಂದು ಕೊರತೆಯೆಂದರೆ, 'ಉಚಿತ ಶಿಕ್ಷಣ' ಎಂದಿರುವಲ್ಲಿ 'ಉಚಿತ' ಎಂದರೆ ಏನೆಂದು ನಿರ್ವಚಿಸದಿರುವುದು. ಪಠ್ಯಸಾಮಗ್ರಿಗಳು, ಸಮವಸ್ತ್ರ, ಪುಸ್ತಕದ ಚೀಲ, ಆಹಾರದ ವ್ಯವಸ್ಥೆ, ಸಾರಿಗೆ ವ್ಯವಸ್ಥೆ ಮುಂತಾದುವುಗಳು ಇದರಡಿಯಲ್ಲಿ ಬರುತ್ತವೆಯೇ ಎನ್ನುವುದರ ಬಗೆಗೆ ಸ್ಪಷ್ಟತೆಯಿಲ್ಲ. 'ಉಚಿತ' ಎಂಬುದರ ವ್ಯಾಪ್ತಿ - ಪರಿಮಿತಿಗಳನ್ನು ಇಲ್ಲಿ ಸೂಚಿಸಲಾಗಿಲ್ಲ. ಇದರ ಕುರಿತು ಸ್ಪಷ್ಟತೆಯಿಲ್ಲವೆಂದಾದರೆ ಅದು ಭವಿಷ್ಯದಲ್ಲಿ ಸಾಕಷ್ಟು ತೊಂದರೆಗಳನ್ನು ತಂದೊಡ್ಡಬಹುದು. ಪ್ರಸ್ತುತ ಶಿಕ್ಷಣ ಪದ್ಧತಿ ಕುರಿತು ಸಾಕಷ್ಟು ಟೀಕೆ ವಿಮರ್ಶೆಗಳು ಕೇಳಿಬರುತ್ತಿರುವ ಸಂದರ್ಭದಲ್ಲಿ ಶಿಕ್ಷಣದ ಗುಣಮಟ್ಟದ ನಿರ್ವಚನೆಯೂ ಇರಬೇಕಾಗುತ್ತದೆ. ಉತ್ತಮ ಗುಣ ಮಟ್ಟದ ಶಿಕ್ಷಣವನ್ನು ದೇಶದ ಎಲ್ಲ ಮಕ್ಕಳಿಗೂ ನೀಡುವುದಕ್ಕೆ ಬೇಕಾದ ಬದ್ಧತೆ ಮುಖ್ಯವಾಗಿ ಇರಬೇಕು. ಇದರೊಂದಿಗೆ ಎಲ್ಲ ಮಕ್ಕಳಿಗೂ ಸಮಾನವಾದ ಶಿಕ್ಷಣದ ಅವಕಾಶಗಳು ದೊರೆಯುವಂತಾಗಬೇಕು. ಜಾತಿ, ಧರ್ಮ, ಲಿಂಗ ತಾರತಮ್ಯಗಳೊಂದಿಗೆ, ಆರ್ಥಿಕ ಅಸಮಾನತೆ ಬಹಳ ಆಳವಾಗಿ ಬೇರೂರಿರುವ ಭಾರತೀಯ ಸಂದರ್ಭದಲ್ಲಿ ಈ ತಾರತಮ್ಯಗಳನ್ನೆಲ್ಲ ಮೀರಿ ಸಮನಾದ ಅವಕಾಶಗಳು ಎಲ್ಲರಿಗೂ ಸಿಗಬೇಕಾದುದು ಅನಿವಾರ್ಯ.

ಮಸೂದೆಯ ಮತ್ತೊಂದು ಕೊರತೆಯೇನೆಂದರೆ, ಅದು ಸಂಯುಕ್ತ ರಾಷ್ಟ್ರ ಸಂಸ್ಥೆಯ ಮಕ್ಕಳ ಹಕ್ಕುಗಳ ಒಡಂಬಡಿಕೆಯನ್ನು ಒಳಗೊಳಿಸಿಕೊಳ್ಳದಿರುವುದು. ಸಂಯುಕ್ತ ರಾಷ್ಟ್ರ ಸಂಘದ ಮಕ್ಕಳ ಹಕ್ಕುಗಳ ಸಮ್ಮೇಳನ ೧೯೮೯ರಲ್ಲಿ ಮಕ್ಕಳ ೫೪ ಹಕ್ಕುಗಳನ್ನೊಳಗೊಂಡ ಘೋಷಣಾ ಪತ್ರವನ್ನು ಬಿಡುಗಡೆ ಮಾಡಿತು. ೧೯೯೨ರಲ್ಲಿ ಈ ಒಡಂಬಡಿಕೆಗೆ ಭಾರತವೂ ಸಹಿ ಮಾಡಿತು. ಸಹಿ ಮಾಡಿದ ನಂತರ ಆ ದಾಖಲೆಯ ಪರಿಚ್ಛೇದಗಳನ್ನು ರಾಷ್ಟ್ರದಲ್ಲಿ ಜಾರಿಗೆ ತರುವುದಕ್ಕೆ ಅದು ಬದ್ಧವಾಗಿರುತ್ತದೆ. ಮಕ್ಕಳ ಹಕ್ಕುಗಳ ಒಡಂಬಡಿಕೆಯ ಪ್ರಕಾರ ೧೮ ವರ್ಷದೊಳಗಿನ ಎಲ್ಲರೂ ಮಕ್ಕಳು. ಹೊಸ ಶಾಸನಗಳನ್ನು ರೂಪಿಸಿ ಜಾರಿಗೆ ತರುವಾಗ ಭಾರತ ಸರಕಾರ ಇದನ್ನು ಗಮನದಲ್ಲಿಟ್ಟುಕೊಳ್ಳ ಬೇಕಾಗಿತ್ತು. ಆದರೆ ಅಂತಹ ಒಂದು ಪ್ರಯತ್ನ ಈ ಮಸೂದೆಯಲ್ಲಿಲ್ಲ.

೬-೧೪ ವರ್ಷ ವಯಸ್ಸಿನೊಳಗಿನ ಮಕ್ಕಳಿಗೆ ಶಿಕ್ಷಣ ಮೂಲಭೂತ ಹಕ್ಕು ಎನ್ನುವಾಗ ಅದು ಹೇಗೆ ಮಕ್ಕಳ ಭವಿಷ್ಯ ರೂಪಿಸುವಲ್ಲಿ ನೆರವಾಗುತ್ತದೆ ಎಂಬುದನ್ನು ಪರಿಶೀಲಿಸೋಣ. ೧೪ ವರ್ಷ ವಯಸ್ಸಾಗುವ ಹೊತ್ತಿಗೆ ಮಗುವೊಂದು ೮ ಅಥವಾ ೯ನೇ ತರಗತಿಗೆ ಬಂದಿರುತ್ತದೆ. ಕೊನೇಪಕ್ಷ ೧೦ನೆಯ ತರಗತಿ ಅಥವಾ ಎಸ್.ಎಸ್.ಎಲ್.ಸಿ. ಶಿಕ್ಷಣ ಮುಗಿಸಲು ಸಾಧ್ಯವಾಗದೆ ಹೋದರೆ ಆ ಹಂತದಲ್ಲಿ ಯಾವುದಾದರೊಂದು ವೃತ್ತಿ ಶಿಕ್ಷಣಕ್ಕೆ ಹೋಗುವುದಾಗಲಿ ಉದ್ಯೋಗದ ಮಾರ್ಗ ಕಂಡುಕೊಳ್ಳುವುದಾಗಲಿ ಸಾಧ್ಯವಾಗುವುದಿಲ್ಲ. ಆದ್ದರಿಂದ ಉಚಿತ ಶಿಕ್ಷಣ ಎಂದಿರುವುದು ೧೪ ವರ್ಷ ವಯಸ್ಸಿನವರೆಗೆ ಎನ್ನುವುದರ ಬದಲು ೧೦ನೆಯ ತರಗತಿಯವರೆಗೆ ಅಥವಾ ೧೮ ವರ್ಷ ವಯಸ್ಸಿನವರೆಗೆ ಎಂದಿರಬೇಕು. ಇಲ್ಲದಿದ್ದರೆ ಈ ಮಸೂದೆಯ ಮೂಲ ಉದ್ದೇಶಕ್ಕೇ ಅರ್ಥವಿಲ್ಲದಂತಾಗುತ್ತದೆ.

ಐದು ದಶಕಗಳ ಒಂದು ಸಂವಿಧಾನಾತ್ಮಕವಾದ ಭರವಸೆಯನ್ನು ಈ ಸರಕಾರ ಯಾರಿಗೂ ಪ್ರಯೋಜನಕರವಲ್ಲದ ರೀತಿಯಲ್ಲಿ ಜಾರಿಗೆ ತರಲು ಪ್ರಯತ್ನಿಸುತ್ತಿದೆ. ಒಟ್ಟಿನಲ್ಲಿ ಕಾನೂನೊಂದನ್ನು ತಂದು ಜನತೆಯ ಕಣ್ಣಿನಲ್ಲಿ ಒಳ್ಳೆಯ ಸರಕಾರ ಎನ್ನುವ ಹೆಸರು ಪಡೆದುಕೊಳ್ಳುವ ಹುನ್ನಾರ ಸರಕಾರದ್ದು ಎನ್ನುವುದು ಇಲ್ಲಿ ಸ್ಪಷ್ಟ. ಲೋಕಸಭೆಯಲ್ಲಿ ಕಾಂಗ್ರೆಸ್ ಹಾಗೂ ಸಿ.ಪಿ.ಎಂ.ನ ಮುಖಂಡರು ಈ ಮಸೂದೆಯಲ್ಲಿರುವ ಕೊರತೆಗಳೇನು ಎಂಬುದನ್ನು ಎತ್ತಿ ತೋರಿಸಿ ಅದರಲ್ಲಿ ಬದಲಾವಣೆ ತರಬೇಕೆಂದು ಮಸೂದೆಯ ಮತದಾನದ ಸಂದರ್ಭದಲ್ಲಿ ಸೂಚಿಸಿದ್ದರು. ಆದರೆ ಮತದಾನದ ಸಂದರ್ಭದಲ್ಲಿ ಈ ಎರಡು ಪಕ್ಷಗಳು ಮಸೂದೆಯ ವಿರುದ್ಧವಾಗಿ ಮತ ಚಲಾಯಿಸಿದರೆ ದೇಶದ ಜನತೆ ಎಲ್ಲಿ ಅಪಾರ್ಥಮಾಡಿಕೊಳ್ಳುತ್ತಾರೋ ಎಂಬ ಆತಂಕ ಅನುಭವಿಸಿದರು ! ತಮ್ಮ ಪಕ್ಷ ಶಿಕ್ಷಣ ಮೂಲಭೂತ ಹಕ್ಕು ಎನ್ನುವ ವಿಚಾರಕ್ಕೆ ವಿರುದ್ಧವಾಗಿದೆ ಎಂದು ಜನತೆ ಭಾವಿಸಿದರೆ ತಮ್ಮ ಪಕ್ಷ ಎಲ್ಲಿ ಜನತೆಯಿಂದ ದೂರ ಸರಿದಿದೆ ಎಂದು ಭಾವಿಸಲಾಗುತ್ತದೋ ಎನ್ನುವ ಭೀತಿ ಅವರದು. ಆದರೆ ವಾಸ್ತವದಲ್ಲಿ ಮಸೂದೆಯಲ್ಲಿರುವ ಕೊರತೆಗಳು ಮತ್ತು ಅದು ತಂದೊಡ್ಡಬಹುದಾದ ಸಮಸ್ಯೆಗಳ ಕುರಿತು ಸಾರ್ವಜನಿಕರಿಗೆ ತಿಳಿಸಬೇಕಾದುದು ಪ್ರತಿಪಕ್ಷಗಳ ಜವಾಬ್ದಾರಿಯಾಗಿದೆ. ಈ ಮಸೂದೆಯನ್ನು ಲೋಕಸಭೆಯಲ್ಲಿ ಮಂಡಿಸುವುದಕ್ಕೆ ಬಹಳ ಹಿಂದೆಯೇ ಅರ್ಥ ಸಚಿವರು ದೆಹಲಿಯ ಹಿರಿಯ ಅಧಿಕಾರಿಯೊಬ್ಬರೊಂದಿಗೆ ಕೇಳಿದರಂತೆ : '೩-೬ರ ನಡುವಿನ ಮಕ್ಕಳನ್ನು ಈ ಮಸೂದೆಯ ವ್ಯಾಪ್ತಿಗೆ ಒಳಪಡಿಸಿದರೆ ಖರ್ಚು ವೆಚ್ಚದ ಒಟ್ಟು ಮೊತ್ತದಲ್ಲಾಗುವ ಹೆಚ್ಚಳವೆಷ್ಟು ?' ಎಂದು. ಇಂತಹ ಲೆಕ್ಕಾಚಾರಗಳೊಂದಿಗೆ ಸರಕಾರ ಮೂಲಭೂತ ಹಕ್ಕನ್ನು ಜಾರಿಗೆ ತರುತ್ತಿದೆ. ಶಿಕ್ಷಣಕ್ಕೆ ವಿನಿಯೋಗವಾಗುವ ಮೊತ್ತ ಒಂದು ರಾಷ್ಟ್ರದ ಹಿತದೃಷ್ಟಿಯಿಂದ ನಷ್ಟವೇನಲ್ಲ. ಪ್ರಖ್ಯಾತ ಆರ್ಥಿಕ ಚಿಂತಕರಾದ ಪ್ರೊ. ಅಮರ್ತ್ಯ ಸೇನ್ ಹೇಳಿದ್ದರು 'ಮಕ್ಕಳ ಮೇಲೆ ಹಣ ತೊಡಗಿಸುವುದು ರಾಷ್ಟ್ರವೊಂದಕ್ಕೆ ಹೊರೆಯೇನಾಗದು' ಎಂದು.

ಬಜೆಟ್ಟಿನ ಸಿಂಹಪಾಲು ರಕ್ಷಣೆ ಹಾಗೂ ಅಣುಬಾಂಬಿಗೆಂದು ತೆಗೆದಿರಿಸುವ ಸರಕಾರ ಶಿಕ್ಷಣ, ಆರೋಗ್ಯ, ಪೌಷ್ಟಿಕ ಆಹಾರ, ಸಂರಕ್ಷಣೆ, ಸಾರ್ವಜನಿಕ ವಿತರಣಾ ವ್ಯವಸ್ಥೆ ಮೊದಲಾದ ಕ್ಷೇತ್ರಗಳಿಂದ ನಿಧಾನವಾಗಿ ಹಿಂದಕ್ಕೆ ಸರಿಯುತ್ತಿದೆ. ಶಿಕ್ಷಣ ಮೂಲಭೂತ ಹಕ್ಕೆಂದು ಶಾಸನ ರೂಪಿಸುತ್ತಿರುವಾಗ ಮತ್ತೊಂದೆಡೆ 'ಶಾಲೆಗಳು ಮಾರಾಟಕ್ಕಿವೆ' ಎಂಬ ಫಲಕಗಳು ರಾರಾಜಿಸುತ್ತಿವೆ. ದೆಹಲಿಯ ೧೦೦ ಪಬ್ಲಿಕ್ ಸ್ಕೂಲ್‌ಗಳನ್ನು ಸರಕಾರ ಖಾಸಗೀಕರಣಗೊಳಿಸಲು ತೀರ್ಮಾನಿಸಿದೆ. ಕೇರಳದ ೪೮ ಶಾಲೆಗಳಿಗೆ ಬೀಗ ಜಡಿಯಲು ಈಗಾಗಲೇ ಆದೇಶ ನೀಡಲಾಗಿದೆ. ಈ ಶಾಲೆಗಳು ಸರಕಾರದ ದೃಷ್ಟಿಯಲ್ಲಿ ಲಾಭಕರವಲ್ಲ. ಶಿಕ್ಷಣ ಮೂಲಭೂತ ಅವಕಾಶವಾಗುವುದರ ಉದ್ದೇಶ ಆದಿವಾಸಿಗಳು, ದಲಿತರು, ಹಿಂದುಳಿದ ಜಾತಿ-ವರ್ಗಗಳವರು, ಹೆಣ್ಣು ಮಕ್ಕಳು ಮುಂತಾದ ಅವಕಾಶ ವಂಚಿತರು ಕಡ್ಡಾಯವಾಗಿ ಶಿಕ್ಷಣ ಪಡೆಯುವಂತಾಗಬೇಕು ಎಂಬುದು. ಶಾಲೆಗಳನ್ನು ಖಾಸಗೀಕರಿಸುತ್ತಿರುವ, ಶಾಲೆಗಳಿಗೆ ಬೀಗ ಜಡಿಯುತ್ತಿರುವ ಈ ಸಂದರ್ಭದಲ್ಲಿ ಯಾವ ವ್ಯವಸ್ಥೆಯನ್ನು ಬಳಸಿ ಸರಕಾರ ಈ ಮೂಲಭೂತ ಹಕ್ಕನ್ನು ಜಾರಿಗೊಳಿಸಲು ಸಾಧ್ಯ ?

ಈ ಆರ್ಥಿಕ ವರ್ಷದಲ್ಲಿ ೩೮೦೦ ಕೋಟಿ ರೂಪಾಯಿಗಳನ್ನು ಶಿಕ್ಷಣಕ್ಕಾಗಿ ತೆಗೆದಿರಿಸಲಾಗಿದೆ. ಮಸೂದೆ ಜಾರಿಗೆ ತರಲು ಪ್ರತಿ ವರ್ಷ ಬೇಕಾಗುವ ಹೆಚ್ಚುವರಿ ಮೊತ್ತ ೯೮೦೦ ಕೋಟಿ ರೂಪಾಯಿಗಳು ಎಂದು ಮಸೂದೆಯ ಜೊತೆಗಿರುವ ಆರ್ಥಿಕ ಜ್ಞಾಪನಾಪತ್ರದಲ್ಲಿ ಹೇಳಿದೆ. ಆದರೆ ಬಜೆಟ್‌ನಲ್ಲಿ ಹಂಚಿಕೆಯಾಗಿರುವುದು ೬೦೦ ಕೋಟಿ ರೂಪಾಯಿಗಳು ಮಾತ್ರ. ಅಂದರೆ ರಾಷ್ಟ್ರೀಯ ಉತ್ಪನ್ನದ ಶೇ. ೦.೩೫ ಮಾತ್ರ. ಆದರೆ ೧೯೯೯ರಲ್ಲಿ ತಪಸ್ ಮಜುಂದಾರ್ ಸಮಿತಿ ಸಲಹೆ ನೀಡಿದ ವರದಿಯ ಪ್ರಕಾರ ಪ್ರತಿವರ್ಷ ಇದು ೧೪,೦೦೦ ಕೋಟಿ ರೂಪಾಯಿಗಳಷ್ಟಾಗುತ್ತದೆ. ಈ ಹೆಚ್ಚುವರಿ ಮೊತ್ತ ರಾಷ್ಟ್ರೀಯ ಉತ್ಪನ್ನದ ಶೇ. ೦.೭೮ರಷ್ಟು ಮಾತ್ರವೇ ಆಗಿರುತ್ತದೆ. ಅಂದರೆ ೧೦೦ ರೂಪಾಯಿಗೆ ೭೮ ಪೈಸೆ ಮಾತ್ರ. ಈಗಿರುವ ರೀತಿಯಲ್ಲಿ ಶಿಕ್ಷಣ ನೀಡುವುದಕ್ಕೆ ಅಗತ್ಯವಾಗಿರುವ ಮೊತ್ತಕ್ಕಿಂತ ಕಡಿಮೆ ಮೊತ್ತವನ್ನು ಬಜೆಟ್‌ನಲ್ಲಿ ಹಂಚಿಕೆ ಮಾಡಲಾಗಿದೆ. ಸರಕಾರ ಹೀಗೆ ತನ್ನ ಜವಾಬ್ದಾರಿಗಳಿಂದ ನುಣುಚಿಕೊಳ್ಳುತ್ತಾ ಎಲ್ಲರಿಗೂ ಶಿಕ್ಷಣ ಎಂಬ ಹೊಸ ವೇಷದೊಂದಿಗೆ ರಂಗಪ್ರವೇಶ ಮಾಡಲಿದೆ. ತರಬೇತಿ ಪಡೆಯದ, ಸಮರ್ಥರಲ್ಲದ, ಕಡಿಮೆ ಸಂಬಳಕ್ಕೆ (ಸಾಧಾರಣ ಶಿಕ್ಷಕರಿಗೆ ದೊರೆಯುತ್ತಿರುವ ವೇತನದ ೧೫-೧೬ ಪಟ್ಟು ಕಡಿಮೆ) ಕೆಲಸ ಮಾಡಬಲ್ಲ ಸ್ಥಳೀಯ ಯುವಕ ಯುವತಿಯರನ್ನು ಗುತ್ತಿಗೆ ಆಧಾರದಲ್ಲಿ ನೇಮಕ ಮಾಡಿಕೊಳ್ಳುವುದು ಈಚಿನ ಇನ್ನೊಂದು ಕ್ರಮ. ಹಲವು ರಾಜ್ಯಗಳಲ್ಲಿ ಇದನ್ನು ಈಗಾಗಲೇ ಜಾರಿಗೆ ತರಲಾಗಿದೆ. ಕಳೆದ ೫೪ ವರ್ಷಗಳ ದೀರ್ಘ ಅವಧಿಯಲ್ಲಿ ಸರಕಾರ ೪೦ ಲಕ್ಷ ಶಿಕ್ಷಕರನ್ನು ನೇಮಿಸಿದ್ದರೆ ಕಳೆದ ಕೇವಲ ೪ ವರ್ಷಗಳಲ್ಲೇ ೫ ಲಕ್ಷ ಸ್ಥಳೀಯ ಅರೆ-ಶಿಕ್ಷಕರನ್ನು ಈ ರೀತಿಯಲ್ಲಿ ನೇಮಕ ಮಾಡಿಕೊಳ್ಳಲಾಗಿದೆ. ಮಧ್ಯಪ್ರದೇಶದಲ್ಲಿ ಈಗಾಗಲೇ ಶಿಕ್ಷಕರ ನೇಮಕಾತಿಯನ್ನು ತಡೆಹಿಡಿಯಲಾಗಿದೆ. ಇದು ಪ್ರಾಥಮಿಕ ಶಾಲೆಗಳ ಸ್ಥಿತಿ ಮಾತ್ರವಲ್ಲ, ಕಾಲೇಜು ಶಿಕ್ಷಕರ ನೇಮಕಾತಿಯಲ್ಲೂ ಇದೇ ಪರಿಸ್ಥಿತಿ ಇದೆ. ಎನ್‌ಸಿಇಆರ್‌ಟಿಯ ಪ್ರಕಾರ ೬-೧೪ ವರ್ಷದ ಒಳಗಿನವರಿಗೆ ಶಿಕ್ಷಣವನ್ನು ಅಂಚೆಯ ಮೂಲಕ ನೀಡುವುದು ಸರಕಾರದ ಉದ್ದೇಶವಾಗಿದೆ. ಇದಕ್ಕೆ ಶಿಕ್ಷಕ ಶಿಕ್ಷಕಿಯರು ಬೇಕಾಗಿಲ್ಲ. ಒಬ್ಬ ಅಂಚೆ ಪೇದೆ ಇದ್ದರೆ ಸಾಕು.

೨೦೦೦ನೇ ಇಸವಿಯಿಂದ ಮುಂದಿನ ೧೦ ವರ್ಷಗಳವರೆಗೆ ೬೦,೦೦೦ ಕೋಟಿ ರೂಪಾಯಿಗಳು ಪ್ರಾಥಮಿಕ ಶಿಕ್ಷಣಕ್ಕೆ ಅಗತ್ಯವಾಗಿ ಬೇಕಾಗುತ್ತದೆ. 'ಎಲ್ಲರಿಗೂ ಶಿಕ್ಷಣ' ಎಂಬ ಕಾರ್ಯಸೂಚಿ ಪ್ರಾರಂಭವಾದರೆ ಈ ಆರ್ಥಿಕ ಬದ್ಧತೆಯಿಂದ ಪಾರಾಗಬಹುದೆಂಬುದು ಸರಕಾರದ ಲೆಕ್ಕಾಚಾರ. ಶಾಲಾ ಶಿಕ್ಷಣ ಅಥವಾ ಪ್ರಾಥಮಿಕ ಶಿಕ್ಷಣ ನಮ್ಮ ದೇಶದ ಬಡಮಕ್ಕಳಿಗೆ ಬೇರೆ ಬೇರೆ ದೃಷ್ಟಿಯಿಂದ ಅತ್ಯಗತ್ಯ.

ಮುಖ್ಯವಾಗಿ ರಾಷ್ಟ್ರದ ಎಲ್ಲ ವರ್ಗಗಳ ಮಕ್ಕಳು ಶಾಲೆಗೆ ಹೋಗಿ ಶಿಕ್ಷಣ ಪಡೆಯತೊಡಗಿದರೆ ಬಾಲಕಾರ್ಮಿಕರ ಸಂಖ್ಯೆ ಗಣನೀಯ ಪ್ರಮಾಣದಲ್ಲಿ ಕಡಿಮೆಯಾಗುತ್ತದೆ. ಶಾಲೆ ಅನಾಕರ್ಷಣೀಯವೂ, ಅಸಮರ್ಥವೂ ಆದಲ್ಲಿ ಶಾಲೆ ಬಿಡುವ ಮಕ್ಕಳ ಸಂಖ್ಯೆ ಜಾಸ್ತಿಯಾಗುತ್ತಲೇ ಹೋಗುತ್ತದೆ. ಈ ಮಕ್ಕಳು ಶಾಲೆ ಬಿಟ್ಟು ಬಾಲಕಾರ್ಮಿಕರಾಗಲು ಇಷ್ಟೇ ಸಾಕು. ದೇಶದಲ್ಲಿ ಈಗಿರುವ ಸಾವಿರಾರು ಶಾಲೆಗಳು ಮಕ್ಕಳನ್ನು ವಾರ್ಷಿಕ ಪರೀಕ್ಷೆಯ ತನಕ ಹಿಡಿದಿರಿಸಿಕೊಳ್ಳುವಲ್ಲಿ ವಿಫಲವಾಗಿವೆ. ಬಾಲಕಾರ್ಮಿಕ ಪದ್ಧತಿಯನ್ನು ತಡೆಗಟ್ಟಲು ಬಹಳ ಪರಿಣಾಮಕಾರಿ ಮಾರ್ಗವೆಂದರೆ ಮಕ್ಕಳನ್ನು ಶಾಲಾ ಶಿಕ್ಷಣದಲ್ಲಿ ತೊಡಗಿಸುವುದು. ಈ ಸಂದರ್ಭದಲ್ಲಿ ಬಾಲಕಾರ್ಮಿಕ ಪದ್ಧತಿ ವಿರೋಧಿ ಗುಂಪುಗಳು, ಮಕ್ಕಳ ಹಕ್ಕುಗಳಿಗಾಗಿ ಕೆಲಸ ಮಾಡುತ್ತಿರುವ ಗುಂಪುಗಳು, ಶಿಕ್ಷಣ ತಜ್ಞರು ಒಟ್ಟುಗೂಡಿ ದೇಶದುದ್ದಕ್ಕೂ ೯೩ನೇ ಸಂವಿಧಾನ ತಿದ್ದುಪಡಿಯಲ್ಲಿ ಬದಲಾವಣೆ ತರಬೇಕೆಂಬ ಬೇಡಿಕೆಯನ್ನು ಮುಂದಿಟ್ಟಿದ್ದಾರೆ. ಅದಕ್ಕಾಗಿ ಸಾಕಷ್ಟು ಪ್ರಚಾರ, ಹೋರಾಟಗಳು ನಡೆದಿವೆ. ಕೊನೆಯ ಗಳಿಗೆಯಲ್ಲಾದರೂ ಸರಕಾರ ಇದನ್ನು ಅರ್ಥಮಾಡಿಕೊಳ್ಳುವುದರ ಮೂಲಕ ದೇಶದ ಕೋಟಿಗಟ್ಟಲೆ ಮಕ್ಕಳಿಗೆ ನ್ಯಾಯ ದೊರಕಿಸಿ ಕೊಡಲಿ ಎಂಬುದೇ ಇದರ ಹಿಂದಿನ ಆಶಯವಾಗಿದೆ.

**ಪಿ. ಪಿ. ಬಾಬುರಾಜ್**
೧೯೯೯, ೧೫ನೇ ಕ್ರಾಸ್, 'ಇ' ಮತ್ತು 'ಎಫ್' ಬ್ಲಾಕ್
ರಾಮಕೃಷ್ಣನಗರ, ಮೈಸೂರು-೫೭೦ ೦೨೩

# ನೋವಿಲ್ಲದೆ ನರಳುತ್ತಿದೆ ಕುದುರೆಮುಖ ರಾಷ್ಟ್ರೀಯ ಉದ್ಯಾನವನ ಯೋಜನೆ

ಶೃಂಗೇರಿಯಿಂದ ೬೦ ಕಿಲೋಮೀಟರ್ ದೂರದಲ್ಲಿ ಇರುವ ಜಿಲ್ಲಾ ಕೇಂದ್ರದಲ್ಲಿ ಕುಳಿತ ನನಗೆ ಪತ್ರಿಕೆಗಳಲ್ಲಿ ಪರಿಸರ ನಾಶದ ಬಗ್ಗೆ ಕರ್ನಾಟಕ ವಿಮೋಚನಾ ರಂಗದ ಕಲ್ಕುಳಿ ವಿಠಲ ಹೆಗ್ಡೆಯವರ ಹೇಳಿಕೆ, ಹೋರಾಟದ ಸುದ್ದಿ, ಓದಿದಾಗಲೆಲ್ಲಾ ಕುತೂಹಲದ ಅನ್ನುವುದಕಿಂತ ಗೊಂದಲದ ಪ್ರಶ್ನೆಗಳು ಮೂಡುತ್ತಿದ್ದವು.

ಕೆಲ ತಿಂಗಳುಗಳ ಹಿಂದೆ ಕುದುರೆಮುಖ ಗಣಿಗಾರಿಕೆ 'ಮುಚ್ಚುವ-ಬಿಚ್ಚುವ' ಪರ-ವಿರೋಧದ ಚಳುವಳಿಗಳು ಆರಂಭವಾದಾಗ ಸುಮ್ಮನೆ ಕೂರಲಾಗಲೇ ಇಲ್ಲ. ಹಾಗಾಗಿ ಶೃಂಗೇರಿಯಿಂದ ಕುದುರೇಮುಖದವರೆಗೆ ಎರಡು ದಿನ ಭಾರತ ಕಮ್ಯುನಿಸ್ಟ್ ಪಕ್ಷದ ರಾಜ್ಯ ಕಾರ್ಯದರ್ಶಿ ನೇತೃತ್ವದಲ್ಲಿ ಅಧ್ಯಯನ ಪ್ರವಾಸ ಮಾಡಿ ಸಂಬಂಧಿತರೆಲ್ಲ ಒಟ್ಟಿಗೆ ಚರ್ಚಿಸಿ ನದಿ ಮೂಲ, ಗಣಿಗಾರಿಕೆಗಳಂತಹ ಎಲ್ಲಾ ಪ್ರದೇಶ ಖುದ್ದು ವೀಕ್ಷಿಸಿ ''ಕುದುರೆಮುಖ ಹಾಲೀ ಗಣಿಗಾರಿಕೆ ಪ್ರದೇಶವನ್ನು ಮುಚ್ಚಬಾರದು ಮತ್ತು ಹೊಸದಾಗಿ ಕೇಳಿದ ಯಾವುದೇ ಜಾಗದಲ್ಲಿ ಗಣಿಗಾರಿಕೆ ವಿಸ್ತರಣೆಗೆ ಅವಕಾಶ ಕೊಡಬಾರದು'' ಎಂಬ ಒತ್ತಾಯ ಪತ್ರ ಸರ್ಕಾರಕ್ಕೆ ಬರೆದಿದ್ದೆವು. ಸರ್ಕಾರ ಆಶ್ಚರ್ಯವೆಂಬಂತೆ ಇದೇ ತರಹದ ಆದೇಶ ಹೊರಡಿಸಿದಾಗ ಸದ್ಯಕ್ಕೆ ತೆರೆ ಬಿತ್ತೆಂಬ ತಾತ್ಕಾಲಿಕ ಸಮಾಧಾನವೂ ಆಗಿತ್ತು.

ಆದರೆ 'ಕುದುರೆಮುಖ' ಎಂಬ ಹೆಸರಿನ ಸಂದರ್ಭವೇ ಸರಿಯಿಲ್ಲವೇನೋ ? ಗಣಿಗಾರಿಕೆ ವಿಚಾರ ತಣ್ಣಗಾಯ್ತು, ರಾಷ್ಟ್ರೀಯ ಉದ್ಯಾನವನದ ವಿವಾದ ಬಿಸಿಯೇರಿತು. ಈ ಬಗ್ಗೆ ಉದ್ಯಾನವನ ವಿರೋಧಿ ಒಕ್ಕೂಟದ ಗೆಳೆಯರು ನಮ್ಮ ನಿಲುವು ಸರಿಯಿಲ್ಲವೆಂದು ವಾದಿಸಿದ್ದರು. ಆದ್ದರಿಂದ ನಾವು ಮತ್ತೆ ಪರಿಶೀಲನೆ ನಡೆಸಿದೆವು.

ಮತ್ತೊಮ್ಮೆ ನಮ್ಮ ತಂಡ ಶೃಂಗೇರಿಗೆ ಹೊರಟಿತು. ಈ ಬಾರಿ ನಮ್ಮ ಜೊತೆ ಜಿಲ್ಲಾದ್ಯಂತ ಚಿರಪರಿಚಿತರಾದ ರಾಧಾ ಸುಂದರೇಶ್, ರೇಣುಕಾರಾಧ್ಯ, ಅಮ್ಜದ್ ಮತ್ತು ಮಂಜುನಾಥ್‌ರಂತಹ ಹೊಸ ಪೀಳಿಗೆಯ ಕಮ್ಯುನಿಸ್ಟರೂ ಇದ್ದರು. ಅಂತೆಯೇ ಕೆಲವಳ್ಳಿ ಕಳಸಪ್ಪ ಮತ್ತು ಕಾರ್ಮಿಕ ಮುಖಂಡ ಶಂಕರ್‌ನಾಥ್ ಸಹ ಇದ್ದರು. ನಮ್ಮ ತಂಡವು ಗಿರಿಜನರೇ ವಾಸವಿರುವ ಉಡತಾಡು, ಮಡಗುಂದ, ಕೆರೆಕಟ್ಟೆ, ಮೆಣಸಿನಹಾಡ್ಯ, ಮುಂಡೋಳಿ, ಶೀರಲು, ತಾರೊಳುಕೂಡಿಗೆ ಎಂಬ ಹಳ್ಳಿಗಳಿಗೆ ಭೇಟಿ ನೀಡಿತು.

> *ಈ ಕಾಡಿನೊಳಗೆ ಹಾದುಹೋಗುವ ರಾಷ್ಟ್ರೀಯ ಹೆದ್ದಾರಿ ೪೮ರಲ್ಲಿ ಅರಣ್ಯ ಇಲಾಖೆಯವರು ೨ ಚೆಕ್ ಪೋಸ್ಟ್ ಹಾಕಿದ್ದಾರೆ. ಎಲ್ಲ ವಾಹನ ಪ್ರಯಾಣಿಕರು ಪಾಸ್ ಪಡೆದೇ ಹಾದು ಹೋಗಬೇಕು. ಅರಣ್ಯ ವೀಕ್ಷಣೆಗೆ ೧೫ ರೂ. ಶುಲ್ಕ ನಿಗದಿಯಾಗಿದೆ. ನಿಗದಿತ ಅವಧಿಯೊಳಗೆ ಹಿಂತಿರುಗಬೇಕು. ಅಪರಿಚಿತರು ಅನುಮತಿ ಇಲ್ಲದೆ ಓಡಾಡುವಂತಿಲ್ಲ.*

**ಪಿ. ವಿ. ಲೋಕೇಶ್**

ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಗೆ ಬರುವ ಗಿರಿಜನೇತರ ಜಮೀನು ಹಿಡುವಳಿದಾರರನ್ನೂ, ಭೂರಹಿತ ಕೃಷಿಕರನ್ನೂ, ಬಗರ್ ಹುಕುಂದಾರ ರೈತರನ್ನೂ, ಅಂಗಡಿ ಹೋಟೆಲ್‌ನವರನ್ನೂ ಮಾತನಾಡಿಸಿದೆವು. ಶೀರಲು ಎಂಬ ಹಳ್ಳಿಯ ಗಿರಿಜನಾಂಗಕ್ಕೆ ಸೇರಿದ ಗೌಡ್ಲು ಪಂಗಡದವರೊಬ್ಬರ ಮನೆಯಲ್ಲಿ ಹಾಲು, ಕಾಫಿ ಕುಡಿದು ಅವರ ಕೋಡೆಗದ್ದೆ (ಬೇಸಿಗೆ ಬತ್ತದ ಬೆಳೆ) ಕೊಯ್ಲಿಗೆ ಬಂದಿದ್ದ ಹೆಣ್ಣು ಮಕ್ಕಳೊಂದಿಗೆ ಮಾತನಾಡಿದೆವು. ಅರಣ್ಯ ಇಲಾಖೆಯ ಡಿ.ಎಫ್.ಓ. ನಾರಾಯಣಮೂರ್ತಿ ಆಕಸ್ಮಿಕವಾಗಿ ಸಿಕ್ಕರು. ಸ್ಥಳೀಯ ರೇಂಜರ್, ಫಾರೆಸ್ಟರ್, ಗಾರ್ಡ್‌ಗಳನ್ನೂ ಕಂಡು ಮಾತನಾಡಿದೆವು. ಕೊನೆಗೆ ಶೃಂಗೇರಿಯ ಶಾರದಾಂಬೆ ಮಠದಲ್ಲಿ ಊಟ ಮಾಡುವಾಗ ಕ.ವಿ.ರಂ.ನ. ಕಾರ್ಯಕರ್ತರೂ ಸಿಕ್ಕಿ ಮಾತನಾಡಿಸಿದರು.



ಯಾರೂ ಖುಷಿಯಿಂದ, ರೋಷದಿಂದ, ಆತ್ಮವಿಶ್ವಾಸದಿಂದ ಖಡಾಖಂಡಿತವಾಗಿ ಮಾತಾಡಲಿಲ್ಲ. ಎಲ್ಲರೂ ಅನುಮಾನದಿಂದಲೇ ಮಾತನಾಡಿದರು. ಆದರೆ ಇವರೆಲ್ಲರಿಗೂ ನೋವೆಲ್ಲಿ ಬರುತ್ತಿದೆ ಎಂದು ನಿಖರವಾಗಿ ಯಾರೂ ಹೇಳಲೂ ಇಲ್ಲ! ಭಾವನಾತ್ಮಕ ಸಮೂಹ ಸನ್ನಿಗೊಳಗಾದಾಗ ಜನ ನೋವಿಲ್ಲದೆ ನರಳಬಹುದು ಮತ್ತು ವಸ್ತುನಿಷ್ಠ ಭೌತಿಕ ಗುರಿಯಿಲ್ಲದ ಹೋರಾಟ ಜನರ ನರಳಾಟ ನಿವಾರಿಸದು. ಈ ನನ್ನ ಅನಿಸಿಕೆ ಒತ್ತಟ್ಟಿಗಿರಲಿ. ಕುದುರೆಮುಖ ರಾಷ್ಟ್ರೀಯ ಉದ್ಯಾನವನ ಏನು ? ಎತ್ತ ? ಇತ್ಯಾದಿ ಬಗ್ಗೆ ನೋಡೋಣ.

ಈ ಹಿಂದೆ ಬ್ರಿಟಿಷರ ಆಡಳಿತದಲ್ಲಿ ಮಹಾರಾಜರು ಮೀಸಲು ಅರಣ್ಯವೆಂದು ಕಾಯ್ದಿರಿಸಿದ್ದ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ, ಕಾರ್ಕಳ ಮತ್ತು ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ, ಮೂಡಿಗೆರೆ, ಕೊಪ್ಪ ಹೀಗೆ ಒಟ್ಟು ೫ ತಾಲ್ಲೂಕುಗಳ ಗಡಿವ್ಯಾಪ್ತಿಯ ಒಟ್ಟು ೬೦೦ ಚದರ ಕಿಲೋಮೀಟರ್ ಸುತ್ತಳತೆಯ ಪ್ರದೇಶವನ್ನು ೧೯೮೭ರಲ್ಲಿ ರಾಜ್ಯ ಸರ್ಕಾರ ತನ್ನ ಕರಡು ಅಧಿಸೂಚನೆ ಮೂಲಕ ಘೋಷಿಸಿದ ಪಶ್ಚಿಮ ಘಟ್ಟ ಪ್ರದೇಶವೇ ಇಂದಿನ ಕುದುರೆಮುಖ ರಾಷ್ಟ್ರೀಯ ಉದ್ಯಾನವನ.

೧೯೮೭ರ ಕರಡು ಅಧಿಸೂಚನೆಯಲ್ಲಿ ಕುದುರೆಮುಖ ಗಣಿಗಾರಿಕೆ ಪ್ರದೇಶ ಹಾಗೂ ಈ ವ್ಯಾಪ್ತಿಯ ಎಲ್ಲಾ ರೈತರ ಹಿಡುವಳಿ ಭೂಮಿ ಗ್ರಾಮಗಳನ್ನೆಲ್ಲಾ ಸೇರಿಸಲಾಗಿದ್ದರೂ ಸಹಾ ಈ ಬಗ್ಗೆ ಸರಿ ಸುಮಾರು ೧೦ ವರ್ಷಗಳ ಕಾಲ ಯಾವುದೇ ರೀತಿಯ ಆಕ್ಷೇಪಣೆ ಬರಲಿಲ್ಲ. ಮುಂದೇನು ಮಾಡಬೇಕೆಂದು ಸರ್ಕಾರದ ಅರಣ್ಯ ಇಲಾಖೆ ಚಿಂತಿಸಲೂ ಇಲ್ಲ! ನಂತರ ಇದಕ್ಕೆ ಚಾಲನೆ ಸಿಕ್ಕಿದ್ದು ೧೯೯೦ರ ದಶಕದಲ್ಲಿ. ಸುಪ್ರಿಂಕೋರ್ಟ್ ರಕ್ಷಿತಾರಣ್ಯ ಪ್ರದೇಶದಲ್ಲಿ ಪರಿಸರ ಹಾನಿಕಾರಕ ಚಟುವಟಿಕೆಗಳ ಕುರಿತು ಹೊಸ ವ್ಯಾಖ್ಯಾನ ನೀಡಿ ತೀರ್ಪು ನೀಡಿದಾಗ ಕುದುರೆಮುಖ ಗಣಿಗಾರಿಕೆ ವಿವಾದ ಹುಟ್ಟಿಕೊಂಡಿತು. ಜೊತೆಗೆ ವ್ಯಾಪ್ತಿಯ ಕಾಡಿನೊಳಗಿರುವ ಹಳ್ಳಿಗಳ ಜನರ ಆಸ್ತಿ ಹಕ್ಕಿನ ಪ್ರಶ್ನೆಯೂ ಪ್ರಸ್ತಾಪಿಸಲಾಯಿತು.

ಈ ಹಿನ್ನೆಲೆಯಲ್ಲಿ ಕುದುರೆಮುಖ ರಾಷ್ಟ್ರೀಯ ಉದ್ಯಾನವನ ಯೋಜನೆಯ ವ್ಯಾಪ್ತಿಗೊಳಪಟ್ಟ ರೈತರುಗಳಿಂದ ಮೊದಲು, ನಂತರ ಕುದುರೆಮುಖ ಕಬ್ಬಿಣ ಅದಿರು ಯೋಜನೆಯ ಕಂಪನಿಯಿಂದ, ಕೊನೆಗೆ ಸ್ಥಳೀಯ ಸಂಸ್ಥೆಗಳಿಂದ ಆಕ್ಷೇಪಣೆಗಳು ದಾಖಲಾದವು. ಗಣಿಗಾರಿಕೆಯೇ ಪ್ರಥಮ ಆದ್ಯತೆ ಎಂಬಂತೆ ಹಲವು ಸಂಘ ಸಂಸ್ಥೆಗಳು ಬಿಂಬಿಸಿದರೂ ಸಹ ರೈತರ, ಹಳ್ಳಿಗರ, ಆದಿವಾಸಿ

ಗಿರಿಜನರ ಪ್ರಶ್ನೆ ಎದುರಾದಾಗ ಅರಣ್ಯ ಇಲಾಖೆಯ ಹಾಗೂ ಸರ್ಕಾರಿ ಅಧಿಕಾರಿಗಳು ತಮ್ಮ ಬುದ್ಧಿವಂತಿಕೆಯನ್ನು ಮೆರೆಸಿದರು.

ಕಾನೂನುಬದ್ಧ ಆಕ್ಷೇಪಣಾ ಅರ್ಜಿಗಳ ಹಿನ್ನೆಲೆಯಲ್ಲಿ ಈ ಉದ್ಯಾನವನದ ವ್ಯಾಪ್ತಿಗೊಳಪಡುವ ಕುದುರೆಮುಖ ಕಬ್ಬಿಣ ಅದಿರು ಯೋಜನಾ ಪ್ರದೇಶ ಹಾಗೂ ಸ್ಥಳೀಯ ಭೂ ಒಡೆತನ ಹೊಂದಿರುವ ಎಲ್ಲಾ ರೈತರ ಜಮೀನು ಮತ್ತು ಹಳ್ಳಿ-ಗ್ರಾಮಗಳ ಪ್ರದೇಶಗಳನ್ನು ಹೊರತುಪಡಿಸಿ ಒಟ್ಟಾರೆ ೪೭ ಚ.ಕಿ.ಮೀ. ಸುತ್ತಳತೆಯ ಜಾಗವನ್ನು ಕೈಬಿಟ್ಟು ಅಂತಿಮವಾಗಿ ೨೦೦೧ ಜೂನ್ ೧೮ರಂದು ಒಟ್ಟು ೫೫೩ ಚ.ಕಿ.ಮೀ. ಸುತ್ತಳತೆಯಲ್ಲಿನ ಪ್ರದೇಶವನ್ನು ಕುದುರೆಮುಖ ರಾಷ್ಟ್ರೀಯ ಉದ್ಯಾನವನವೆಂದು ಸರ್ಕಾರ ಘೋಷಿಸಿದಾಗ ಗಣಿಗಾರಿಕೆಯ ಕಾರ್ಮಿಕರೂ, ತತ್ಸಂಬಂಧಿತ ಗುತ್ತಿಗೆದಾರರೂ, ವ್ಯಾಪ್ತಿಯ ಗಿರಿಜನ ಹಾಗೂ ಇತರ ವರ್ಗದ ರೈತರೂ ಚುನಾಯಿತ ಸ್ಥಳೀಯ ಸಂಸ್ಥೆಯ ಜನ ಪ್ರತಿನಿಧಿಗಳೂ ಇದಕ್ಕಾಗಿ ಸಂತೋಷ ವ್ಯಕ್ತಪಡಿಸಿದರು.

ಯಾವಾಗ ಗಣಿಗಾರಿಕೆ ರದ್ದು ಪ್ರಶ್ನೆ ಬಂತೋ ಆಗ ಜನರ ಹಿಡುವಳಿ ಜಮೀನನ್ನೂ, ಜನ ವಾಸಿಸುವ ಕಾಡಿನೊಳಗಿನ ಹಳ್ಳಿ ಗ್ರಾಮಗಳನ್ನೂ ಅಧ್ಯಾದೇಶದ ವ್ಯಾಪ್ತಿಯಿಂದ ಹೊರಗಿಡುವುದಾಗಿ ಪ್ರಕಟಿಸುವ ಜೊತೆಗೇ ಕುದುರೆಮುಖ ಗಣಿಗಾರಿಕೆಯನ್ನು ವ್ಯಾಪ್ತಿಯ ಹೊರಗಿಡುವ ಆದೇಶವನ್ನು ಐ.ಎ.ಎಸ್.ಗಳು ಒಟ್ಟಿಗೆ ಹೊರಡಿಸಿದವು. ಇತ್ತ ಜನಕ್ಕೂ ಸಮಾಧಾನ, ಅತ್ತ ಗಣಿಗಾರಿಕೆಯೂ ಅಬಾಧಿತ ! ಇದು ಅಧಿಕಾರಿಗಳ ಜಾಣತನವೋ ಅಥವಾ ಜನರ ದಡ್ಡತನವೋ ?

ಏಕೆಂದರೆ ಅರಣ್ಯ ಇಲಾಖೆಯವರೀಗ ತೆಗೆದ ರಾಗ ಹೀಗಿದೆ: ಹಿಡುವಳಿ ಜಮೀನು ಕೃಷಿಗೆ ನಮ್ಮದೇನೂ ಅಭ್ಯಂತರವಿಲ್ಲ, ಹಳ್ಳಿಗಳಿಗೂ ಅಲ್ಲಿನ ಗಿರಿಜನರಿಗೂ ನಮ್ಮ ಉದ್ಯಾನವನಕ್ಕೂ ಯಾವ ಸಂಬಂಧವೂ ಇಲ್ಲ, ನಮ್ಮ ಜಾಗ ನಮಗೆ ಅವರ ಜಾಗ ಅವರಿಗೆ, ಅವರ ಜಾಗಕ್ಕೆ ನಾವು ಹೇಗೆ ಪ್ರವೇಶಿಸಲು ಅಧಿಕಾರವಿಲ್ಲವೋ, ಹಾಗೇ ನಮ್ಮ ಜಾಗಕ್ಕೆ ಅವರೂ ಬರುವಂತಿಲ್ಲ. ದನಕರು ಮೇಯಿಸುವಂತಿಲ್ಲ. ರಸ್ತೆ, ವಿದ್ಯುತ್, ನೀರು-ನಿಡಿಗಳ ಯೋಜನೆ ರೂಪಿಸುವಂತಿಲ್ಲ ಅಷ್ಟೇ ! ಇದು ಜಾರಿಕೆಯ ಆದರೆ ಜಾಣತನದ ಉತ್ತರ ! ಬಹುಶಃ ಇದು ವಾದಕ್ಕೆ ಸರಿಯಾಗಿರಲೂಬಹುದು. ಆದರೆ ಉದ್ಯಾನವನ ವಿರೋಧಿ ಒಕ್ಕೂಟದವರೇನು ವಾದಿಸುತ್ತಿದ್ದಾರೆ ?

ಅರಣ್ಯ ಇಲಾಖೆಯವರು ಹೀಗೆ ನಿರ್ಬಂಧಿಸುವುದಾದರೆ ಈ ರಾಷ್ಟ್ರೀಯ ಉದ್ಯಾನವನವೇ ಬೇಡ ! ತಲೆತಲಾಂತರದಿಂದ ಕಾಡಿನೊಳಗೇ ಬದುಕಿರುವ ನಾವು ಅದರೊಳಗೆ ಹೋಗಿಬರದೇ ಬದುಕುವುದಾದರೂ ಹೇಗೆ ? ಇದು ಗಿರಿಜನರ ಮುಗ್ಧತನದ ಮಾತುಗಳು ಮಾತ್ರವೆಂದು ಹೇಳಲಾಗದು. ಬಹುಶಃ ಪರಿಸರವಾದಿಗಳು ಜನಜೀವಿ ಪ್ರೇಮಿಗಳು, ಗಿರಿಜನ ಹಿತೈಷಿಗಳು ಮುಂತಾದ ಹೋರಾಟಗಾರರು ತಾಳುವ ನಿಲುವುಗಳು ಸಂದೇಹ ಹುಟ್ಟಿಸಿದರೆ ಅದಕ್ಕೆ ಅವರ ಅಸ್ಪಷ್ಟ, ದ್ವಂದ್ವ ಬೇಡಿಕೆಗಳೇ ಕಾರಣ ಎಂದರೆ ಯಾರೂ ಸಿಟ್ಟಾಗಬಾರದು !

ಬೇರೆ ಬೇರೆ ಸಂದರ್ಭಗಳಲ್ಲಿ ನನಗೆ ಓದಿನ ಮೂಲಕ ಚಿರಪರಿಚಿತರಾದ ಪ್ರೊ॥ ನಗರಿ ಬಾಬಯ್ಯ, ಪ್ರೊ॥ ರಾಜೇಂದ್ರ ಚೆನ್ನಿ, ಶಿವಸುಂದರ ದಾಸ್, ಪ್ರೊ॥ ಅನಂತ ಮೂರ್ತಿ, ಸಿರಿಮನೆ ನಾಗರಾಜ್, ವಿಠಲ ಹೆಗ್ಡೆಗಳಂತಹ ನಗರವಾಸಿಗಳೆಲ್ಲ ಇದ್ದಕ್ಕಿದ್ದಂತೆ ಪರಿಸರ ಪ್ರೇಮಿಗಳು ಗಿರಿಜನ ಪ್ರೇಮಿಗಳೂ ಆದದ್ದು ಹೇಗೆ ? ಮತ್ತು ಏಕೆ ? ಸ್ವತಃ ಆರ್.ಸಿ.ಸಿ. ಮನೆಯಲ್ಲಿ ಫೋನು, ಫ್ಯಾನು, ಫ್ರಿಡ್ಜು, ಟಿವಿಗಳಡಿ ಬದುಕುವ ಈ ಕೆಲವರಿಗೆ ಗಿರಿಜನರು ಮಾತ್ರ ಕಾಡಲ್ಲೇ ಇರಬೇಕೆಂಬ ಚಿಂತನೆ ಬಂದದ್ದಕ್ಕೆ ಕಾರಣವೇನು ? ಇಂತಹ ಅಚ್ಚರಿಯ ಪ್ರಶ್ನೆ ಹುಟ್ಟಿದರೆ ಅದಕ್ಕೆ ನಾನು ಜವಾಬ್ದಾರನಲ್ಲ.

ಮೊದಲನೆಯದಾಗಿ ಈ ರಾಷ್ಟ್ರೀಯ ಉದ್ಯಾನವನ ಬೇಕೆ, ಬೇಡವೇ ಎಂಬ ಪ್ರಶ್ನೆಗೆ ನಮ್ಮ ಸ್ಪಷ್ಟ ಉತ್ತರ : ಬೇಕು ಖಂಡಿತ. ಏಕೆಂದರೆ ದೇಶದಲ್ಲೇ ಅಷ್ಟೇಕೆ ವಿಶ್ವದಲ್ಲೇ ಅತಿ ಸೂಕ್ಷ್ಮ ನೀರಿನ ಸೆಲೆ ಹೊಂದಿರುವ, ಔಷಧೀಯ ಸಸ್ಯರಾಶಿ ಹೊಂದಿರುವ ವಿಶಿಷ್ಟ ವಿರಳ ಪ್ರದೇಶಗಳಲ್ಲಿ ಇದೂ ಒಂದು. ಇದರ ಸಂರಕ್ಷಣೆಯನ್ನು ಯಾವುದೇ ಕಾನೂನು ಭದ್ರತೆ ಇಲ್ಲದೆ ಕೇವಲ ಇಲ್ಲಿನ ಗಿರಿಜನರು ಮಾತ್ರವೇ ಸಂರಕ್ಷಿಸುತ್ತಾರೆ ಮತ್ತು ಇದಕ್ಕೆ ಇಲ್ಲಿನ ಬಹುಸಂಖ್ಯಾತ ಗಿರಿಜನೇತರ ಜನಾಂಗದವರು ಸಹಕರಿಸುತ್ತಾರೆಂದೂ, ಅದಕ್ಕೆ ಸರ್ಕಾರಗಳ ಹೊಣೆ ಅಗತ್ಯವಿಲ್ಲವೆಂದೂ ನನಗೆ ನಂಬಲಸಾಧ್ಯ ! ಹಾಗೆಂದು ವಾದಿಸುವ ದೂರದ ಊರಿನವರ ನಂಬಿಕೆಗೆ ನಮ್ಮ ಅಭ್ಯಂತರವಿಲ್ಲದಿದ್ದರೂ ಹಲವು ವಿಚಾರಗಳು ಪ್ರಶ್ನೆಗಳಾಗೇ ಉಳಿಯುತ್ತವೆ. ನಾವೇನೇ ಮಾಡಿದರೂ ಸತ್ಯ ಕಹಿಯಾಗೇ ಇರುತ್ತದೆ (ಕೆಲವೊಮ್ಮೆ).

ಕುದುರೆಮುಖ ರಾಷ್ಟ್ರೀಯ ಉದ್ಯಾನವನ ರಚನೆ ಬೇಡ ಎಂದಾದರೆ ದೇಶಾದ್ಯಂತ ಈಗಿರುವ ಸುಮಾರು ೮೫ಕ್ಕೂ ಹೆಚ್ಚಿನ ಅಥವಾ ರಾಜ್ಯದಲ್ಲಿರುವ ಬಂಡೀಪುರ, ನಾಗರಹೊಳೆ, ಬನ್ನೇರುಘಟ್ಟ, ಕುಂಶಿ ರಾಷ್ಟ್ರೀಯ ಉದ್ಯಾನ ವನಗಳೂ ಏಕಿರಬೇಕು ? ಅವೆಲ್ಲವನ್ನೂ ಗಿರಿಜನರು ಹಾಗೂ ಸ್ಥಳೀಯ ನಿವಾಸಿಗಳೇ ನಿರ್ವಹಿಸಿ ರಕ್ಷಿಸಿ ಕಾಯ್ದು ಕೊಳ್ಳುವಂತೆ ಹೇಳಬಹುದೇ ? ದೇಶದಲ್ಲಿ ಇಷ್ಟೆಲ್ಲಾ ಸಂವಿಧಾನ, ಕಾನೂನು, ಕೋರ್ಟು, ಪೊಲೀಸ್‌ಗಳಿದ್ದಾಗಲೇ ಹಣದಾಹಿ ಬಲಾಢ್ಯರು ಭೂ ಕಬಳಿಕೆ, ಸಂಪತ್ತು ಕಬಳಿಕೆ, ಲೂಟಿ, ದಂಗೆ ನಡೆಸುತ್ತಿರುವ ಈ ಹಂತದಲ್ಲಿ ಯಾವ ಕಾನೂನು ರಕ್ಷಣೆ, ಸರ್ಕಾರಗಳ ಜವಾಬ್ದಾರಿ ಇಲ್ಲದೇ ನಮ್ಮ ಮುಗ್ಧ ಗಿರಿಜನರು- ಮೂಲ ನಿವಾಸಿಗಳು ಇಂತಹ ಅರಣ್ಯ ಸಂಪತ್ತನ್ನು ರಕ್ಷಿಸುತ್ತಾರೆಂಬ ವಾದ ಗಟ್ಟಿಯಾದದ್ದೆನಿಸುವುದಿಲ್ಲ.

ಇಲ್ಲಿ ಇನ್ನೊಂದು ಅಪಾಯವನ್ನು ಗಮನಿಸಬೇಕು. ಈ ವ್ಯಾಪ್ತಿಯಲ್ಲಿ ಬರುವ ಒಟ್ಟು ೧೫೬೨ ರೈತ ಕುಟುಂಬಗಳ ಪೈಕಿ ೪೬೦ ಗಿರಿಜನ ಕುಟುಂಬಗಳಿಗೆ (ಈ ಅಂಕಿ ಅಂಶ ೧೯೮೭ಕ್ಕೆ ಮುನ್ನ ಅರಣ್ಯ ಇಲಾಖೆ ಮಾಡಿದ ಅಂದಾಜು. ಇದು ನಿಖರವಲ್ಲ ಎಂದು ಸ್ವತಃ ಅಧಿಕಾರಿಗಳು ಮತ್ತು ಸ್ಥಳೀಯರು ಒಪ್ಪುತ್ತಾರೆ. ಸೆನ್ಸಸ್ ಸರ್ವೇ ಇನ್ನೂ ಆಗಿಲ್ಲ !) ತೊಂದರೆಯಾಗುವುದರಿಂದ ಈ ಯೋಜನೆಯನ್ನು ಕೈಬಿಡುವ ಬೇಡಿಕೆಯನ್ನು ಒಂದು ವೇಳೆ ಸರ್ಕಾರ ಒಪ್ಪಿದರೆ ಗಂಗಡಿಕಲ್ಲು, ನೆಲ್ಲಿ ಬೀಡಿನ ಅದಿರು-ಅರಣ್ಯ ಪ್ರದೇಶಗಳೂ ರಕ್ಷಿತಾರಣ್ಯದ ನೋಟಿಫಿಕೇಷನ್ ವ್ಯಾಪ್ತಿಯಿಂದ ಹೊರ ಬರುತ್ತವೆ ! ಸಹಜವಾಗಿ ಸುಪ್ರೀಂ ಕೋರ್ಟ್ ವ್ಯಾಪ್ತಿಯಿಂದ ಹೊರಬಂದು ಗಣಿಗಾರಿಕೆ ಗುತ್ತಿಗೆ ಪಡೆಯಲು ಸುಲಭವಾಗುತ್ತದೆ ! ಕಾನೂನಿನ ಈ ತಾಂತ್ರಿಕ ತೊಡಕಿನ ಸೂಕ್ಷ್ಮವನ್ನು ಹೋರಾಟಗಾರರು ತಿಳಿದಿಲ್ಲವೆಂದು ನಾನು ಭಾವಿಸಿದರೆ ಉದ್ಧಟತನವೆಂದು ಜರಿಯಬಾರದು.

ಎರಡನೆಯದಾಗಿ, ರಾಷ್ಟ್ರೀಯ ಉದ್ಯಾನವನದ ಅರಣ್ಯದ ಮಧ್ಯಭಾಗಗಳಲ್ಲಿ ಗ್ರಾಮ-ಹಳ್ಳಿಗಳು ಮತ್ತು ಕೃಷಿ ಭೂಮಿ ಒಟ್ಟೊಟ್ಟಿಗೇ ಇರಲು ಸಾಧ್ಯವೇ ? ಇದಕ್ಕೆ ಸ್ಪಷ್ಟ ಉತ್ತರ : ಸಾಧ್ಯವೇ ಇಲ್ಲ. ಸಾಧುವೂ ಅಲ್ಲ ! ನಾಡು ಕಾಡು ಒಟ್ಟಿಗೇ ಏಕಕಾಲದಲ್ಲಿ ಮುಂದುವರಿಯುವುದು ಅರಣ್ಯ ಸಂರಕ್ಷಣೆ ದೃಷ್ಟಿಯಿಂದ ಸೂಕ್ತವಲ್ಲ. ಏಕೆಂದರೆ, ಕಾಡಿಲ್ಲದೆ ಪಕ್ಕದ ನಾಡಿಲ್ಲ. ನಾಡಿನ ಜನ ಕಾಡಿಗೆ ಹೋಗದೆ, ಆಶ್ರಯಿಸದೆ, ಬಳಸಿಕೊಳ್ಳದೆ ನಾಡಿರಲು ಅಸಾಧ್ಯ. ನಾಡಿಗೆ ಕಾಡಿನ ಮಧ್ಯದ ರಸ್ತೆ, ನೀರು, ಜಾನುವಾರು, ಮೇವು ಕಾಲಕ್ರಮೇಣ ನಿವೇಶನಕ್ಕಾಗಿ, ಊರಿನ ವಿಸ್ತರಣೆಗೆ ಜಾಗ, ವಿದ್ಯುತ್, ದೂರವಾಣಿ ಲೈನ್ ಇತ್ಯಾದಿ ಇತ್ಯಾದಿ ನಾಗರಿಕ ಸೌಲಭ್ಯಗಳು ಅನಿವಾರ್ಯ ಆದ್ಯತೆಗಳಾಗುತ್ತವೆ. ಕಾಡು ಉಳಿದು ನಾಡೂ ಬೆಳೆಯುವುದು ಒಟ್ಟೊಟ್ಟಿಗೇ ಆಗಲಸಾಧ್ಯ. ಇದು ಮಾನವ ಚರಿತ್ರೆಯಲ್ಲಿ ಸಾಬೀತಾದ ನಾಗರಿಕತೆಯ ಐತಿಹಾಸಿಕ ಸತ್ಯ.

ರಾಷ್ಟ್ರೀಯ ಉದ್ಯಾನವನದೊಳಗೆ ಬಹುರಾಷ್ಟ್ರೀಯ ಕಂಪನಿಗಳಿಗೆ ರೆಸಾರ್ಟ್ಸ್, ಮೋಜಿನ ಪ್ರವಾಸಿ ತಾಣಗಳ ನಿರ್ಮಾಣಕ್ಕೆ ಸರ್ಕಾರ ಜಾಗ ನೀಡುವ ಹುನ್ನಾರ ಅಡಗಿದೆ ಎಂಬ ಸಹಜ ಆರೋಪವಿದೆ, ನಿಜ. ಮಾತ್ರವಲ್ಲ, ಇಲ್ಲಿನ ವಿಶಿಷ್ಟ ಔಷಧೀಯ ಸಸ್ಯ ಸಂಪತ್ತನ್ನು ವಿದೇಶಿ ಕಂಪನಿಗಳು ಕೊಳ್ಳೆ ಹೊಡೆಯುತ್ತವೆಯಾದ್ದರಿಂದ ಇದನ್ನು ರಾಷ್ಟ್ರೀಯ ಉದ್ಯಾನವೆಂದು ಘೋಷಿಸದೆ ಇವೆಲ್ಲಾ ಪ್ರಾಕೃತಿಕ ಸಂಪತ್ತನ್ನೂ ರಕ್ಷಿಸಬೇಕೆಂದು ಒತ್ತಾಯ ಮಾಡಲಾಗಿದೆ. ಆದರೆ ಈಗಿರುವಂತೆ ಯೋಜನಾ ಪ್ರದೇಶದ ವ್ಯಾಪ್ತಿಯ ಹೊರಗಿರುವ ಖಾಸಗಿ ಜಮೀನುಗಳ ಒಡೆಯರು ಕಾಲಕ್ರಮೇಣ ತಮ್ಮ ಸ್ವಂತ ಆಸ್ತಿಯನ್ನು ಬಹುರಾಷ್ಟ್ರೀಯ ಅಥವಾ ದೇಶೀಯ ಕಂಪೆನಿಗಳಿಗೆ ಮಾರಾಟ ಮಾಡುವುದಿಲ್ಲವೆಂದು ಭರವಸೆ ಇದೆಯೇ ? ಅಂತಹ ಖಾಸಗಿ ಒಡೆತನದ ಜಾಗದಲ್ಲಿ, ಅರಣ್ಯ ಮಧ್ಯಭಾಗದಲ್ಲಿ ರೆಸಾರ್ಟ್ಸ್, ಮೋಜಿನ ತಾಣಗಳ ನಿರ್ಮಾಣ ಆಗದಿರದೆ ? ಕೃಷಿ ಲಾಭದಾಯಕವಲ್ಲದ ಇಂದಿನ ದಿನಗಳಲ್ಲಿ ದುಪ್ಪಟ್ಟು ಬೆಲೆ ಸಿಕ್ಕರೆ ಜಮೀನಿನ ಮಾರಾಟ ಶತಃಸಿದ್ಧ. ಔಷಧೀಯ ಅಮೂಲ್ಯ ಸಸ್ಯರಾಶಿ ಮುಂದೆ ಕಳ್ಳ ಸಾಗಾಣಿಕೆಯಾಗದಿರದೇ ?

*ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಗೊಳಪಟ್ಟ ಚಿಕ್ಕಮಗಳೂರು ಜಿಲ್ಲೆಯಲ್ಲಿನ 'ಗೌಡ್ಲು' ಎಂಬ ಜನಾಂಗ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ 'ಮಲೆಕುಡಿಯ' ಎಂಬ ಜನಾಂಗಗಳು ಗಿರಿಜನ ಪಂಗಡಕ್ಕೆ ಸೇರಿದವರಾಗಿದ್ದಾರೆ. ಈ ಕಾಡಿನೊಳಗೆ ಸಿಗುವ ರಾಮಪತ್ರೆ, ಮುರುಗನಹುಳಿ, ಊಟೆ ಹುಳಿ, ಕಾಡು ದಾಲ್ಚಿನ್ನಿ ಎಲೆ-ಚಕ್ಕೆ, ಸೀಗೇಕಾಯಿ, ಕಾಡು ಏಲಕ್ಕಿ, ಕೋಲು ಜೇನು, ಹೆಜ್ಜೇನು, ತುಡ್ವೆ ಜೇನು ಇತ್ಯಾದಿ ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿ ಪಟ್ಟಣವಾಸಿಗಳಿಗೆ ಮಾರಿ ವರ್ಷಕ್ಕೆ ಹೆಚ್ಚೆಂದರೆ ಐದು ಸಾವಿರದವರೆಗೆ ಗಳಿಸುತ್ತಾರೆ. ಈ ಗಿರಿಜನರ ಮೇಲೆ ಕಳ್ಳ ಸಾಗಾಣಿಕೆ ದೂರುಗಳು ಅತಿ ವಿರಳ ಎಂದು ಸ್ವತಃ ಅರಣ್ಯಾಧಿಕಾರಿ ನಾರಾಯಣಮೂರ್ತಿಯೇ ಹೇಳುತ್ತಾರೆ.*

ದುಡ್ಡಿನ ಹಾಗೂ ಮೋಜಿನ ಆಕರ್ಷಣೆಯನ್ನು ಮೀರಿ ಪ್ರಕೃತಿ ಪರಿಸರ ಉಳಿಸುವ ಜನ ನಮ್ಮ ತಲೆಮಾರಿನಲ್ಲಿ ಇದ್ದಾರೆಯೇ ಎಂಬುದು ನನಗಿರುವ ಅನುಮಾನ.

ಮೂರನೆಯದಾಗಿ, ಪರಿಸರ ಮತ್ತು ಅರಣ್ಯ ಸಂರಕ್ಷಣೆ ಆಗಬೇಕೆಂಬ ಕಾರಣಕ್ಕಾಗಿ ಕುದುರೆಮುಖ ಗಣಿಗಾರಿಕೆಯನ್ನು ಕೂಡಲೇ ಮುಚ್ಚಿ, ಅದನ್ನವಲಂಬಿಸಿರುವ ಕಾರ್ಮಿಕರಿಗೆ ಪರ್ಯಾಯ ವ್ಯವಸ್ಥೆ ಮಾಡಿ ಎನ್ನುವ ಬೇಡಿಕೆ ಇಟ್ಟಿರುವವರು ಪರಿಸರದ ಇದೇ ಕಾರಣಕ್ಕೆ ಕಾಡಿನೊಳಗಿರುವ ಗಿರಿಜನರಾದಿಯಾಗಿ ಎಲ್ಲ ಜನರಿಗೂ ಬೇರೆಡೆ ಪುನರ್ವಸತಿ ಕಲ್ಪಿಸಿ ವೈಜ್ಞಾನಿಕ ಪರಿಹಾರ ನೀಡಿ ಬದಲೀ ವ್ಯವಸ್ಥೆ ಮಾಡಿ ಎಂದು ಕೇಳುತ್ತಿಲ್ಲವೇಕೆಂದು ಅರ್ಥವಾಗುತ್ತಿಲ್ಲ !!!

ಉದ್ಯಾನವನ ಯೋಜನೆ ಬಗ್ಗೆ ಗಿರಿಜನರೊಂದಿಗೆ, ಪರಿಸರವಾದಿಗಳೊಂದಿಗೆ, ಚರ್ಚಿಸಿ ನಿರ್ಧಾರಕ್ಕೆ ಬರಬೇಕೆಂದು ಒತ್ತಾಯಿಸುವಾಗ ಇದೇ ರೀತಿಯ ಚರ್ಚೆ ಗಣಿಗಾರಿಕೆಯ ಬಗ್ಗೆಯೂ ಆಗಬೇಕಲ್ಲವೇ ? ಕಾಡಿನ ಮಧ್ಯೆ ಇರುವ ಹಳ್ಳಿಗಳಲ್ಲಿನ ಗಿರಿಜನರಿಗೆ ಕಾಡಿನೊಡನೆ ಅವಿನಾಭಾವ ಸಂಬಂಧವಿದ್ದು ಅದು ಅವರ ಬದುಕಿನ ಮೂಲಭೂತ ಹಕ್ಕಿನ ಪ್ರಶ್ನೆಯಾದ್ದರಿಂದ ಅವರೊಟ್ಟಿಗೆ ಚರ್ಚಿಸಬೇಕು ಎನ್ನುವುದು ಯಾರೂ ಕೂಡ ಒಪ್ಪುವ ಮಾತು ಹೌದು. ಹಾಗೇ ಕುದುರೆಮುಖದ ಗಣಿಗಾರಿಕೆಯನ್ನು ದೇಶಕ್ಕೆ ಬೇಕಾದ ಕಬ್ಬಿಣ ತೆಗೆಯಲು ನಡೆಸಲಾಗುತ್ತಿದೆಯೇ ವಿನಾ ಅಲ್ಲಿರುವ ನಾಲ್ಕೈದು ಸಾವಿರ ಕಾರ್ಮಿಕರನ್ನು ಸಾಕಿ ಸಲಹಲು ಅಲ್ಲ ಎಂಬುದು ನನ್ನ ತಿಳುವಳಿಕೆ. ಕಬ್ಬಿಣದ ಬಳಕೆ ಮತ್ತು ಪರಿಸರ ರಕ್ಷಣೆ ಎರಡೂ ಆಗುವಂತೆ ಮಾಡಬೇಕಾದ್ದು ಅಗತ್ಯವಲ್ಲವೇ ?

ನನ್ನ ಪ್ರಕಾರ ಯೋಜನಾ ವ್ಯಾಪ್ತಿಯ ಕಾಡಿನೊಳಗಿರುವ ಜನರೊಟ್ಟಿಗೆ ಚರ್ಚೆ ನಡೆಯಬೇಕಾಗಿರುವುದು ಬದಲೀ ಪುನರ್ವಸತಿ ಪರಿಹಾರ ಯೋಜನೆ ಬಗ್ಗೆ ಮಾತ್ರ. ಆದರೆ ಅದನ್ನು ಕುರುಡು ಸರ್ಕಾರ ಇನ್ನೂ ಪ್ರಕಟಿಸಿಲ್ಲ !! ಅದರ ಪ್ರಕಟಣೆ ಆಗದೆ ಯಾವ ವಿಷಯದ ಮೇಲೆ ಚರ್ಚೆ ನಡೆಯಬೇಕೆಂಬುದೇ ಪ್ರಶ್ನೆ. ಯೋಜನೆ ಬೇಕೆ ? ಬೇಡವೇ ? ನೀವು ಊರುಬಿಟ್ಟು ಹೋಗುತ್ತೀರೋ ? ಇರುತ್ತೀರೋ ? ಇವೆಲ್ಲದರ ಬಗ್ಗೆ ಚರ್ಚಿಸಬೇಕೆಂದು ಈ ಹಂತದಲ್ಲಿ ಒತ್ತಾಯಿಸುವುದು ವಾಸ್ತವವೂ ಅಲ್ಲ, ಜಾಣತನವೂ ಅಲ್ಲ.

ಆದ್ದರಿಂದ ಈಗ ಸರ್ಕಾರ ಕೂಡಲೇ ಕಾಡಿನೊಳಗೆ ಬರುವ ಎಲ್ಲಾ ಹಳ್ಳಿಗಳನ್ನೂ ಅಲ್ಲಿನ ಜನರ ಆಸ್ತಿ ಪಾಸ್ತಿ - ಮನೆ ಮಠಗಳೆಲ್ಲವನ್ನೂ ಉದ್ಯಾನವನಕ್ಕೆ ಸೇರಿಸಿಕೊಳ್ಳಲು ಮುಂದಾಗಿ ಸಂತ್ರಸ್ತರಿಗೆ ಮಲೆನಾಡ ಪರಿಸರ ಹೋಲುವಂತಹ ಬದಲೀ ಜಾಗ ಗುರುತಿಸಿ ಎಲ್ಲರಿಗೂ ಜಮೀನು, ಮನೆ, ನೀರು, ವಿದ್ಯುತ್, ಆಸ್ಪತ್ರೆ, ಶಾಲೆ ಇತ್ಯಾದಿ ನಾಗರಿಕ ಸೌಲಭ್ಯಗಳನ್ನು ನೀಡಿ ಆಸ್ತಿ-ಬೆಳೆಗಳಿಗೆ, ಮನೆಗಳಿಗೆ ಯೋಗ್ಯ ಪರಿಹಾರ ಮೊತ್ತ ನೀಡಲು ಸಮಗ್ರ ಯೋಜನೆಯೊಂದನ್ನು ಪ್ರಕಟಿಸಬೇಕೆಂದು ಒತ್ತಾಯಿಸುವುದು ಸೂಕ್ತ. ಸರ್ಕಾರ ಈ ಪ್ರಕಟಣೆ ಹೊರಡಿಸಿದ ನಂತರ ಅದರ ಸಾಧಕ ಬಾಧಕಗಳ ಬಗ್ಗೆ ಚರ್ಚಿಸಿ ಜಾರಿಗೆ ಮುಂದಾಗಬೇಕೆಂಬುದು ಬೇಡಿಕೆಯಾಗಿರಬೇಕು.

> *ಇದೇ ಮೇ ೧೩ರಂದು ಶೃಂಗೇರಿಗೆ ಮೇಧಾ ಪಾಟ್ಕರ್ ಭೇಟಿ ನೀಡಿ ಸಾರ್ವಜನಿಕ ಸಭೆ ನಡೆಸಿದರು. ಅಂದೇ ಸ್ಥಳೀಯ ಬಜರಂಗದಳ, ಹಿಂದೂ ಜಾಗರಣ ವೇದಿಕೆಗಳು, ಬೆಳ್ಳಿ ಚುಕ್ಕಿ ಪ್ರಕಟಣೆಯ 'ಕೋಮುವಾದ' ಪುಸ್ತಕ ಮಾರಾಟಕ್ಕೆ ಆಕ್ಷೇಪಿಸಿ ಗಲಭೆ ಎಬ್ಬಿಸಿದವು. ಮರುದಿನ ಶೃಂಗೇರಿ ಬಂದ್‌ಗೆ ಸಹ ಕರೆ ನೀಡಿ ಗಿರಿಜನರ ಹೋರಾಟದ ದಿಕ್ಕು ತಪ್ಪಿಸಲು ಶ್ರೀ ವಿಠಲ ಹೆಗ್ಡೆಯವರ ಬಂಧನಕ್ಕೆ ಮತ್ತು ವಿಚಾರ ಸಂಕಿರಣ ತಡೆಗೆ ಒತ್ತಾಯಿಸಿ, ಅದಕ್ಕೆ ಮಣಿದ ಪೊಲೀಸ್ ಕ್ರಮ ತೀವ್ರ ಖಂಡನೆಗೊಳಗಾಯಿತು.*

ಇಂತಹ ಸಮಸ್ಯೆಗಳನ್ನು ಭಾವನಾತ್ಮಕವಾಗಿ ನೋಡುವ ಬದಲು ಭೌತಿಕ ವಾಸ್ತವ ನೆಲೆಗಟ್ಟಿನಲ್ಲಿ ನೋಡಬೇಕು. ಈ ಮಾತನ್ನು ಸ್ವತಃ ಅನುಭವದ ಆಧಾರದಲ್ಲಿ ಹೇಳುತ್ತಿದ್ದೇನೆ. ಜಿಲ್ಲೆಯ ನರಸಿಂಹರಾಜಪುರ, ಚಿಕ್ಕಮಗಳೂರು ಈ ಎರಡು ತಾಲ್ಲೂಕುಗಳ ವ್ಯಾಪ್ತಿಯಲ್ಲಿರುವ ಭದ್ರಾ ಅಭಯಾರಣ್ಯದ ವ್ಯಾಪ್ತಿಯೊಳಗಿದ್ದ ಸುಮಾರು ೧೬ ಹಳ್ಳಿಗಳ ಜನರ ಸ್ಥಳಾಂತರ ವಿರೋಧಿ ಹೋರಾಟವನ್ನು ಸ್ವತಃ ನೋಡಿ ಅನುಭವಿಸಿದ್ದೇನೆ. ನನ್ನ ಸ್ವಂತ ಊರಾದ ಸಿರಿವಾಸೆ ಗ್ರಾಮ ಪಂಚಾಯಿತ್ತಿ ವ್ಯಾಪ್ತಿಗೆ ಬರುವ ಮಾಡ್ಲ-ಹಿಪ್ಲಾ ಇತ್ಯಾದಿ ೧೦ ಹಳ್ಳಿಗಳ ಜನ ಕಳೆದ ೨೦ ವರ್ಷಗಳಿಂದ ಸ್ಥಳಾಂತರಕ್ಕೆ ಒಪ್ಪದೆ ನಾಗರಿಕ ಸೌಲಭ್ಯ ಪಡೆಯಲಾಗದೆ ಭಾವನಾತ್ಮಕವಾಗಿ ನರಳುತ್ತಿದ್ದಾರೆ. ಅಂತಿಮವಾಗಿ, ಸರ್ಕಾರ ಸ್ಥಳಾಂತರ ಪರಿಹಾರ ಯೋಜನೆ ಪ್ರಕಟಿಸಿದ ಕೂಡಲೇ ಅದರ ಸಾಧಕ-ಬಾಧಕಗಳ ಬಗ್ಗೆ ಹಲವು ಸುತ್ತಿನ ಚರ್ಚೆ ನಡೆದು ಬದಲಾವಣೆಗಳೊಂದಿಗೆ ಸ್ಥಳಾಂತರಕ್ಕೊಪ್ಪಿ ಸಂತೋಷದಿಂದ ತರೀಕೆರೆ ತಾಲ್ಲೂಕಿನ ಎಂ.ಸಿ. ಹಳ್ಳಿ, ಚಿಕ್ಕಮಗಳೂರು ತಾಲ್ಲೂಕಿನ ಹಾಂದಿ ಗ್ರಾಮಗಳಲ್ಲಿ ಬದಲಿ ಜಮೀನು ಹಕ್ಕುಪತ್ರ ಪಡೆದುಕೊಂಡು ಇದೀಗ ಪರಿಹಾರದ ಹಣದ ಚೆಕ್ಕುಗಳನ್ನೂ ಪಡೆದುಕೊಳ್ಳುತ್ತಿದ್ದಾರೆ. ಆ ಜನರ ಈಗಿನ ಉತ್ಸಾಹ ನೋಡಿ ಸ್ಥಳಾಂತರಕ್ಕೆ ಒಪ್ಪಬೇಡಿ ಎಂದು ಹೇಳುವ ಧೈರ್ಯ ಭದ್ರಾ ಅಭಯಾರಣ್ಯ ಸಂತ್ರಸ್ತರ ಹೋರಾಟ ಸಮಿತಿಯ ಯಾವ ಮುಖಂಡರಿಗೂ ಇರಲಿಲ್ಲ. ನನ್ನ ಸ್ವಂತ ಕುಟುಂಬದ ತೋಟ ಗದ್ದೆ ಮನೆಗಳು ಸ್ಥಳಾಂತರಗೊಂಡ ಮಾಡ್ಲ ಎಂಬ ಗ್ರಾಮದಿಂದ ಕೇವಲ ೪ ಕಿ.ಮೀ. ಪಕ್ಕದಲ್ಲೇ ಇದೆ. ನಮ್ಮ ಊರನ್ನು ನಮ್ಮ ಆಸ್ತಿ ಮನೆಗಳನ್ನೂ ಭದ್ರಾ ಅರಣ್ಯದ ಹುಲಿ ಯೋಜನೆಯೊಳಗೇ ಸೇರಿಸಿ ಪರಿಹಾರ ಕೊಡಿಸಲು ಸಾಧ್ಯವೇ ಎಂದು ಅಕ್ಕಪಕ್ಕದವರು ಕೇಳಿದ್ದೂ ಉಂಟು !

ಈ ವೈಯಕ್ತಿಕ ಅನುಭವ ಇಲ್ಲಿ ಅನಗತ್ಯವಾಗಿದ್ದರೂ ನಾನು ಎಲ್ಲೋ ನಗರದಲ್ಲಿ ಕುಳಿತು ಶಬ್ದಾಲಂಕಾರದ ತರ್ಕ ಮಾಡಿದ್ದೇನೆಂಬ ಅಪವಾದದಿಂದ ತಪ್ಪಿಸಿಕೊಳ್ಳುವ ಅನಿವಾರ್ಯತೆ ಇದ್ದುದರಿಂದ ಉಲ್ಲೇಖಿಸಿದೆ.

ಪಿ. ವಿ. ಲೋಕೇಶ್
೨ನೇ ತಿರುವು, ಪೆನ್ಷನ್ ಮೊಹಲ್ಲಾ, ಚಿಕ್ಕಮಗಳೂರು-೫೭೭ ೧೦೧

**ತ**ಮ್ಮ ಪ್ರತಿಭೆಗೆ, ತಾವು ಪಡೆದ ಪದವಿಗಳಿಗೆ ತಕ್ಕ ಪುರಸ್ಕಾರ, ಗೌರವ, ಪ್ರತಿಫಲಗಳು ಸಿಕ್ಕುತ್ತಿಲ್ಲವೆಂದು ಭಾರತದಿಂದ ವಿದೇಶಗಳಿಗೆ ಅನೇಕ ಪ್ರತಿಭೆಗಳು ಪಲಾಯನ ಮಾಡುತ್ತಿರುವುದನ್ನು ನಾವು ಇಂದಿಗೂ ಕಾಣುತ್ತಿದ್ದೇವೆ. ವಿದೇಶಗಳಲ್ಲಿ ತಮ್ಮದೇ ಆದ ಸಂಸ್ಥೆಗಳನ್ನು ಕಟ್ಟಿಕೊಂಡು ಹಣ ಹಾಗೂ ಕೀರ್ತಿಯನ್ನು ಗಳಿಸುತ್ತಿರುವುದನ್ನೂ ನೋಡುತ್ತಿದ್ದೇವೆ. ಆದರೆ ವಿದೇಶಿ ವ್ಯಾಮೋಹವನ್ನು ತೊರೆದು, ಸ್ವದೇಶದಲ್ಲಿಯೇ ಔದ್ಯಮಿಕ ಕ್ರಾಂತಿಯನ್ನು ಹುಟ್ಟುಹಾಕಿ, ವಿದೇಶಿ ದಾಸ್ಯವನ್ನು, ವಿದೇಶಿ ಅವಲಂಬನೆಯನ್ನು ಮೆಟ್ಟಿನಿಂತು ಇಡೀ ವಿಶ್ವವೇ ತಮ್ಮೆಡೆಗೆ ವಿಸ್ಮಯದಿಂದ ನೋಡುವಂತಹ ಸಾಧನೆಗಳನ್ನು ಮಾಡಿದ ಕೆಲವೇ ಅಪರೂಪದ ಸಾಧಕರಲ್ಲಿ ಭಾರತದ ಶ್ರೇಷ್ಠ ರಸಾಯನಶಾಸ್ತ್ರಜ್ಞರಾದ ಪ್ರಫುಲ್ಲ ಚಂದ್ರ ರೇ ಅಗ್ರಗಣ್ಯರು.



# ನಿಸ್ವಾರ್ಥ ವಿಜ್ಞಾನಿ ಪ್ರಫುಲ್ಲ ಚಂದ್ರ ರೇ

**ಎ. ಎಂ. ಶ್ಯಾಮೇಶ್**

ಇಂದಿನ ಬಾಂಗ್ಲಾದೇಶದಲ್ಲಿರುವ ಬರೂಲಿ-ಕಟಿಪಾರ ಎಂಬಲ್ಲಿ ಹರೀಶ್ ಚಂದ್ರ ರೇ ಎಂಬ ಶ್ರೀಮಂತ ಜಮೀಂದಾರರಿದ್ದರು. ಇವರು ಕೇವಲ ಶ್ರೀಮಂತ ವ್ಯಕ್ತಿಯಾಗಿರದೆ, ಉದಾರ ದೃಷ್ಟಿಕೋನವುಳ್ಳ ಶಿಕ್ಷಣ ತಜ್ಞರೂ, ಬಹುಭಾಷಾ ಪ್ರವೀಣರೂ, ಸಂಗೀತ ಪ್ರೇಮಿಯೂ ಆಗಿದ್ದರು; ತಮ್ಮ ಕಲಿಕೆಗಳು ಹಾಗೂ ಸಾಮಾಜಿಕ ಚಟುವಟಿಕೆಗಳಿಂದ ಪ್ರಸಿದ್ಧರಾಗಿದ್ದರು. ಎಲ್ಲರಿಗೂ ಶಿಕ್ಷಣ ದೊರಕಿಸಬೇಕಾದ ಅಗತ್ಯವನ್ನು ಮನಗಂಡಿದ್ದ ಇವರು ತಮ್ಮ ಗ್ರಾಮದಲ್ಲಿ ಒಂದು ಮಾಧ್ಯಮಿಕ ಶಾಲೆಯನ್ನು ಹಾಗೂ ಗ್ರಾಮೀಣ ಪ್ರದೇಶದ ಹೆಣ್ಣು ಮಕ್ಕಳಿಗಾಗಿಯೇ ಪ್ರತ್ಯೇಕ ಶಾಲೆಯೊಂದನ್ನೂ ಸ್ಥಾಪಿಸಿದ್ದರು. ಇವರ ಮಗನಾಗಿ ೧೮೬೧ರ ಆಗಸ್ಟ್ ೨ರಂದು ಪ್ರಫುಲ್ಲ ಚಂದ್ರ ರೇ ಜನಿಸಿದರು. ಬಾಲಕ ಪ್ರಫುಲ್ಲನು ತನ್ನ ತಂದೆಯವರು ಆರಂಭಿಸಿದ್ದ ಶಾಲೆಯಲ್ಲಿಯೇ ವಿದ್ಯಾಭ್ಯಾಸವನ್ನು ಆರಂಭಿಸಿದನು. ಆದರೆ ಈತ ತರಗತಿಗೆ ಹಾಜರಾಗಿದ್ದಕ್ಕಿಂತ ತಪ್ಪಿಸಿಕೊಂಡಿದ್ದೇ ಹೆಚ್ಚು! ಆ ಶಾಲೆಯ ಶಿಕ್ಷಕರಿಗೆ ಈ ತುಂಟ ವಿದ್ಯಾರ್ಥಿಯು ಎಲ್ಲಿ ಅಡಗಿಕೊಂಡಿದ್ದಾನೆಂದು ಹುಡುಕುವುದು ಅವರ ದಿನಚರಿಯ ಒಂದು ಭಾಗವಾಗಿತ್ತು. ಈತನು ಶಾಲಾವರಣದಲ್ಲಿನ ಯಾವುದಾದರೊಂದು ಮರದ ಕೊಂಬೆಯ ಮೇಲೆ ಎಲೆಗಳ ಮರೆಯಲ್ಲಿ ಅವಿತು ಕುಳಿತು ಕೆಳಗೆ ನಡೆಯುವ ಮಕ್ಕಳ ಗದ್ದಲವನ್ನು ಸಂತೋಷಚಿತ್ತನಾಗಿ ನೋಡುತ್ತಾ ಇರುತ್ತಿದ್ದನು.

ಪ್ರಫುಲ್ಲನ ವಯಸ್ಸು ಹತ್ತಾಗುವ ವೇಳೆಗೆ ಆತನ ತಂದೆ ತಮ್ಮ ಕುಟುಂಬವನ್ನು ಕಲ್ಕತ್ತಾಗೆ ವರ್ಗಾಯಿಸಿದ್ದರಿಂದ ಆತನ ತುಂಟಾಟಗಳು ಕೊನೆಗೊಂಡವು. ಈತನನ್ನು ಅಲ್ಲಿನ ಪ್ರತಿಷ್ಠಿತ ಹೇರ್ ಶಾಲೆಗೆ ದಾಖಲಿಸಲಾಯಿತು. ಬಹಳ ಆಸಕ್ತಿಯಿಂದ ಓದಿನಲ್ಲಿ ತೊಡಗಿಕೊಂಡ ಆತನಿಗೆ ಪುಸ್ತಕಗಳನ್ನು ಓದುವುದು ಪ್ರಮುಖ ಹವ್ಯಾಸವಾಯಿತು. ಈ ಮಧ್ಯೆ ಸ್ಥಳ ಬದಲಾವಣೆಯ ಕಾರಣ ಇದ್ದಕ್ಕಿದ್ದಂತೆ ಅತಿಸಾರ ಕಾಯಿಲೆಯಿಂದ ತೀವ್ರವಾಗಿ ಬಳಲಿದನು. ಇದರಿಂದಾಗಿ ಆತನ ವಿದ್ಯಾಭ್ಯಾಸವು ಎರಡು ವರ್ಷಗಳ ಕಾಲ ಕುಂಠಿತಗೊಂಡಿತು. ಈ ಕಾಯಿಲೆ ಈತನನ್ನು ಜೀವನಪೂರ್ತಿ ನಿದ್ರಾಹೀನತೆ ಮತ್ತು ಅಜೀರ್ಣತೆಯಿಂದ ಬಳಲುವಂತೆ ಮಾಡಿತು. ಆದರೆ ಎಡಿಸನ್‌ಗೆ ಅವನ ಕಿವುಡುತನವು ಪ್ರಯೋಜನಕಾರಿಯಾದಂತೆಯೇ ಪ್ರಫುಲ್ಲನಿಗೂ ಮುಂದಿನ ದಿನಗಳಲ್ಲಿ ಈ ಕಾಯಿಲೆಯು ಪರೋಕ್ಷವಾಗಿ ಸಹಾಯಮಾಡಿತು. ತನ್ನ ದಿನನಿತ್ಯದ ಚಟುವಟಿಕೆಗಳ ನಡುವೆಯೂ ಕಲಿಯುವ ಅಭಿರುಚಿಯನ್ನು ಮುಂದುವರೆಸಲು ಸಾಧ್ಯವಾಯಿತು. ಅವನು ಸ್ವ-ಅಭ್ಯಾಸದಿಂದಲೇ ಇಂಗ್ಲಿಷ್ ಹಾಗೂ ಬಂಗಾಲಿ ಸಾಹಿತ್ಯದಲ್ಲಿ ಪ್ರಭುತ್ವವನ್ನು ಹೊಂದಿದನು. ಜೊತೆಗೆ ಲ್ಯಾಟಿನ್ ಗ್ರೀಕ್ ಭಾಷೆಗಳನ್ನು ಕಲಿತನು. ಪ್ರಾಚೀನ ಇತಿಹಾಸವನ್ನು ಅದರಲ್ಲೂ ಇಂಗ್ಲೆಂಡ್, ರೋಂ ಹಾಗೂ ಸ್ಪೇನ್‌ಗಳ ಇತಿಹಾಸವನ್ನು ಆಳವಾಗಿ ಅಧ್ಯಯನ ಮಾಡಿದನು. ಆಗ ಆತ ಹದಿಹರಯದವನು ಸಹ ಆಗಿರಲಿಲ್ಲ!

೧೮೭೪ರಲ್ಲಿ ಪ್ರಫುಲ್ಲನು ಮತ್ತೆ ಶಾಲೆಗೆ ಹೋಗಲು ಸಮರ್ಥನಾದನು. ಈ ಬಾರಿ ಆತ ಆಲ್ಬರ್ಟ್ ಶಾಲೆಗೆ ದಾಖಲಾದನು. ಬ್ರಹ್ಮಸಮಾಜ ಚಳುವಳಿಯ ಪ್ರಮುಖರಲ್ಲಿ ಒಬ್ಬರಾಗಿದ್ದ ಕೇಶವಚಂದ್ರ ಸೇನರಿಂದ ಸ್ಥಾಪಿತವಾಗಿದ್ದ ಶಾಲೆ ಇದಾಗಿತ್ತು. ಇಲ್ಲಿ ಆತ ಶಿಕ್ಷಕರ ಅಚ್ಚುಮೆಚ್ಚಿನ ವಿದ್ಯಾರ್ಥಿಯಾದನು. ೧೮೭೯ರಲ್ಲಿ ಮೆಟ್ರೊಪಾಲಿಟನ್ ಇನ್‌ಸ್ಟಿಟ್ಯೂಟ್‌ನಲ್ಲಿನ ಪ್ರವೇಶ ಪರೀಕ್ಷೆಯನ್ನು ಪಾಸು ಮಾಡಿ ಅಲ್ಲಿ ಸೇರಿಕೊಂಡನು. ಅಲ್ಲಿ ಶಿಕ್ಷಕರಾದ ಪ್ರಸನ್ನಕುಮಾರ ಲಹರಿ ಹಾಗೂ ಸುರೇಂದ್ರನಾಥ ಬ್ಯಾನರ್ಜಿಯವರ ಉತ್ತಮ ಮಾರ್ಗದರ್ಶನದಿಂದ ಪ್ರಫುಲ್ಲನಿಗೆ ಹೆಚ್ಚು ಅನುಕೂಲವಾಯ್ತು. ಅಲ್ಲದೆ ತನ್ನ ಬಿಡುವಿನ ವೇಳೆಯಲ್ಲಿ ಪ್ರೆಸಿಡೆನ್ಸಿ ಕಾಲೇಜಿನ ಅಲೆಕ್ಸಾಂಡರ್ ಪೆಡ್ಲರ್‌ನ ರಸಾಯನ ಶಾಸ್ತ್ರದ ತರಗತಿಗಳಿಗೂ ಹಾಜರಾಗುತ್ತಿದ್ದ ಈತ. ಲಹರಿ ಮತ್ತು ಬ್ಯಾನರ್ಜಿಯವರಿಂದ ರಾಷ್ಟ್ರಪ್ರೇಮದ ಉತ್ಸಾಹವನ್ನೂ, ಪೆಡ್ಲರ್‌ರಿಂದಾಗಿ ರಸಾಯನಶಾಸ್ತ್ರದ ಕುರಿತ ಪ್ರೀತಿಯನ್ನೂ ಬೆಳೆಸಿಕೊಂಡು ತನ್ನ ಪದವಿಪೂರ್ವ ತರಗತಿಯಲ್ಲಿ ರಸಾಯನಶಾಸ್ತ್ರವನ್ನೇ ಆಯ್ಕೆ ಮಾಡಿಕೊಂಡನು. ವಿವಿಧ ಭಾಷೆಗಳ ಮೇಲೆ ಆತನಿಗಿದ್ದ ಹಿಡಿತವು ಗಿಲ್‌ಕ್ರಿಸ್ಟ್ ಸ್ಮಾರಕ ವಿದ್ಯಾರ್ಥಿ ವೇತನದ ಪರೀಕ್ಷೆಯನ್ನು ಬರೆಯುವಂತೆ ಪ್ರೇರೇಪಿಸಿತು. ಇದೊಂದು ಪ್ರತಿಷ್ಠಿತ ಪ್ರಶಸ್ತಿ ಆಗಿದ್ದು ಇದರ ವಿಜೇತರಿಗೆ ಉನ್ನತ ಶಿಕ್ಷಣಕ್ಕಾಗಿ ವಿದೇಶಕ್ಕೆ ಹೋಗಲು ಅವಕಾಶವು ದೊರಕುತ್ತಿತ್ತು. ಈ ಪರೀಕ್ಷೆಯಲ್ಲಿ ಪ್ರಫುಲ್ಲ ಚಂದ್ರ ಹಾಗೂ ಮುಂಬೈನ ಪಾರ್ಸಿ ಹುಡುಗ ಬಹದ್ದೂರ್ ಜೀ ಆಯ್ಕೆಯಾದರು. ಸುದೀರ್ಘ ಕಾಲದವರೆಗೆ ದೂರದ ದೇಶಕ್ಕೆ ಮಗನನ್ನು ಕಳುಹಿಸಲು ಒಪ್ಪದ ತನ್ನ ತಾಯಿಯ ಮನವೊಲಿಸಿ ೧೮೮೨ರಲ್ಲಿ ಪ್ರಫುಲ್ಲನು· ಇಂಗ್ಲೆಂಡಿಗೆ ಪ್ರಯಾಣ ಬೆಳೆಸಿ ಎಡಿನ್‌ಬರೋ ವಿಶ್ವವಿದ್ಯಾನಿಲಯದಲ್ಲಿ ಬಿ.ಎಸ್‌ಸಿ. ವ್ಯಾಸಂಗ ಮಾಡಲು ಸೇರಿಕೊಂಡನು.

೧೮೮೫ರಲ್ಲಿ 'ದಂಗೆಯ ಮೊದಲು ಹಾಗೂ ನಂತರದ ಭಾರತ' ಎಂಬ ವಿಷಯದ ಕುರಿತ ಪ್ರಬಂಧ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ಈ ಸ್ಪರ್ಧೆಯಲ್ಲಿ ಪ್ರಫುಲ್ಲನು ಬಹುಮಾನ ಗೆಲ್ಲಲಾಗಲಿಲ್ಲ. ಆದರೂ ಆತ ತನ್ನ ಪ್ರಬಂಧದಲ್ಲಿ ಬ್ರಿಟಿಷ್ ಸರ್ಕಾರವು ದಂಗೆಯನ್ನು ನಿರ್ವಹಿಸಿದ ರೀತಿಯನ್ನು ಕುರಿತು ಕಟುನುಡಿಗಳಲ್ಲಿ ಬರೆದದ್ದು ಎಲ್ಲರಿಗೂ ಮೆಚ್ಚುಗೆಯಾಯಿತು. ಜಾನ್ ಬ್ರೈಟ್ ಎಂಬ ಸಂಸತ್ ಸದಸ್ಯರು ಈತನನ್ನು ಬಹಳವಾಗಿ ಹೊಗಳಿದರು. ಪ್ರಫುಲ್ಲನು ಈ ಪ್ರಬಂಧವನ್ನು ತನ್ನ ಸ್ವಂತ ಖರ್ಚಿನಲ್ಲಿಯೇ ಮುದ್ರಿಸಿ ಎಲ್ಲರಿಗೂ ಹಂಚಿದನು. ಇದು ಭಾರತವನ್ನು ಸ್ವತಂತ್ರವಾಗುವಂತೆ ಮಾಡಲು ಮೊಳಗಿಸಿದ ತುತ್ತೂರಿಯಾಗಿತ್ತು. ೧೮೮೫ರಲ್ಲಿ ಈತನಿಗೆ ರಸಾಯನ ಶಾಸ್ತ್ರದಲ್ಲಿ ಬಿ.ಎಸ್‌ಸಿ. ಪದವಿಯು ದೊರಕಿತು. ಇದರಿಂದಾಗಿ ಆತ ಮತ್ತೆ ಎರಡು ವರ್ಷಗಳ ಕಾಲ ಡಿ.ಎಸ್‌ಸಿ. ಪದವಿಗಾಗಿ ಸಂಶೋಧನೆ ನಡೆಸಲು ಅವಕಾಶವಾಯ್ತು.

೧೮೮೮ರಲ್ಲಿ ರೇಯವರು ರಸಾಯನಶಾಸ್ತ್ರದಲ್ಲಿ ಡಿ.ಎಸ್‌ಸಿ. ಪದವಿ ಹಾಗೂ ಹಲವಾರು ಪ್ರಶಂಸಾ ಪತ್ರಗಳನ್ನು ಪಡೆದುಕೊಂಡು ಸ್ವದೇಶಕ್ಕೆ ಹಿಂದಿರುಗಿದರು. ತಮ್ಮ ನೆಲದಲ್ಲೇ ತಮಗೊಂದು ಬೋಧಕ ವೃತ್ತಿ ದೊರಕಬಹುದೆಂದು ನಂಬಿಕೆ ಹೊಂದಿದ್ದರು. ಆದರೆ ಮೇಲುಸ್ತರದ ಹುದ್ದೆಗಳೆಲ್ಲಾ ಇಂಗ್ಲಿಷರಿಗೇ ಮೀಸಲಾಗಿದ್ದದ್ದರಿಂದ ತಮ್ಮ ಆಸಕ್ತಿಯನ್ನು ಅದುಮಿಟ್ಟುಕೊಳ್ಳಬೇಕಾಯ್ತು. ಈ ಸಂದರ್ಭದಲ್ಲಿ ಅವರು ತಮ್ಮ ಮಿತ್ರ ಜಗದೀಶ್‌ಚಂದ್ರ ಬೋಸರ ಜೊತೆಗೂಡಿ ವಿಚಾರ ವಿನಿಮಯ ನಡೆಸಿದರು. ಕೊನೆಗೆ ೧೮೮೯ರಲ್ಲಿ ರೇಯವರು ಕಲ್ಕತ್ತಾದ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ರಸಾಯನ ಶಾಸ್ತ್ರದ ಸಹಾಯಕ ಪ್ರೊಫೆಸರ್ ಆಗಿ ನೇಮಕಗೊಂಡರು.

ಅವರ ಸಂಬಳ ಮಾಸಿಕ ಇನ್ನೂರ ಐವತ್ತು ರೂಪಾಯಿಗಳಾಗಿತ್ತು. ತಮ್ಮ ಬೋಧನೆಯಲ್ಲಿ ಟಾಗೋರರ ಕವಿತೆಗಳನ್ನು ಮೆಂಡಲೀವ್‌ರಂತಹ ವಿಜ್ಞಾನಿಗಳ ಜೀವನ ಕಥನಗಳನ್ನು ಉಲ್ಲೇಖಿಸುತ್ತಾ ಬೋಧನೆ ಹೆಚ್ಚು ಆಸಕ್ತಪೂರ್ಣವಾಗಿರುವಂತೆ ಮಾಡಿಕೊಳ್ಳುತ್ತಿದ್ದರು. ಅತಿ ಶೀಘ್ರವಾಗಿ ಶ್ರೇಷ್ಠ ಶಿಕ್ಷಕನೆಂಬ ಗೌರವಕ್ಕೆ ಪಾತ್ರರಾದರು.

ರೇಯವರು ಒಬ್ಬ ಅಸಾಮಾನ್ಯ ಕನಸುಗಾರರಾಗಿದ್ದರು. ಭಾರತವು ಒಂದು ಗುಲಾಮಿ ರಾಷ್ಟ್ರವಾಗಿ, ಬಡತನ ವಿಮೋಚನೆಗಾಗಿ ಹಾಗೂ ಉದ್ಯೋಗಕ್ಕಾಗಿ ತನ್ನನ್ನು ಆಳುತ್ತಿರುವವರ ಕಡೆಗೆ ನೋಡುತ್ತಿರುವ ಅದರ ದುರವಸ್ಥೆಯನ್ನು ಗಮನಿಸಿದ್ದರು. ತನ್ನ ದುರಾದೃಷ್ಟದಿಂದ ಈ ದೇಶವು ಹೊರಬರಬೇಕಾದರೆ ಇಲ್ಲಿನ ಜನರಿಗೆ ಅಧಿಕಾರ ದೊರಕಬೇಕೆಂದು ಅವರು ತಿಳಿದಿದ್ದರು. ಇಂತಹ ಸ್ವಾತಂತ್ರ್ಯವು ತಾನಾಗಿಯೇ ದಕ್ಕುವುದಿಲ್ಲ. ಕಠಿಣವಾದ ಸಾಧನೆಯಿಂದ ಹಾಗು ತ್ಯಾಗದಿಂದ ಮಾತ್ರ ಇದನ್ನು ಪಡೆಯಲು ಸಾಧ್ಯ ಎಂಬುದನ್ನೂ ಮನಗಂಡಿದ್ದರು. ಕೇವಲ ಎಂಟುನೂರು ರೂಪಾಯಿಗಳ ಮೂಲ ಬಂಡವಾಳದೊಂದಿಗೆ ರೇಯವರು 'ದಿ ಬೆಂಗಾಲ್ ಕೆಮಿಕಲ್ ಅಂಡ್ ಫಾರ್ಮಸ್ಯುಟಿಕಲ್ಸ್ ವರ್ಕ್ಸ್' ಎಂಬ ಸಂಸ್ಥೆಯನ್ನು ಆರಂಭಿಸಿದರು. ಇದರ ಮೊದಲ ಗುರಿಯು ಜನಸಾಮಾನ್ಯರನ್ನು ತಲುಪುವಂತಹ ಔಷಧಿಗಳನ್ನು ದೇಶೀಯವಾಗಿ ತಯಾರಿಸುವುದೇ ಆಗಿತ್ತು. ಅಲ್ಲದೆ ಉದ್ಯೋಗಗಳನ್ನು ಸೃಷ್ಟಿಸಿದ್ದು ಈ ಸಂಸ್ಥೆಯ ಹೆಗ್ಗಳಿಕೆಯೂ ಆಗಿತ್ತು. ಪ್ರಾರಂಭದಲ್ಲಿ ಇಲ್ಲಿ ತಯಾರಿಸಲ್ಪಟ್ಟ ದೇಶೀಯ ಔಷಧಿಗಳಿಗೆ ಕೊಳ್ಳುವವರನ್ನು ಹುಡುಕುವುದು ಕಷ್ಟದ ಕೆಲಸವಾಗಿತ್ತು. ಆದರೆ ಡಾ|| ಅಮೂಲ್ಯ ಚರಣಬೋಸ್ ಎಂಬ ಖ್ಯಾತ ವೈದ್ಯರು ಈ ಸಂಸ್ಥೆಯ ಔಷಧಿಗಳ ಸಹಾಯಕ್ಕೆ ಮುಂದೆ ಬಂದರು. ಅವರ ಶಿಫಾರಸ್ಸಿನಿಂದಾಗಿ ಸಂಸ್ಥೆಯ ಪರವಾದ ಬದಲಾವಣೆಯ ಗಾಳಿ ಬೀಸಿತು. ಆದರೆ ತೊಂದರೆಯ ಮೋಡಗಳು ಮತ್ತೊಮ್ಮೆ ರೇಯವರ ಮೇಲೆ ಕವಿದುಕೊಂಡವು. ೧೮೯೪ರಲ್ಲಿ ತಂದೆ ಹರೀಶ್ ಚಂದ್ರರು ತೀರಿಕೊಂಡಾಗ ಅವರ ಸಾಲಗಳನ್ನು ತೀರಿಸಲು ಪಿತ್ರಾರ್ಜಿತ ಆಸ್ತಿಯನ್ನೆಲ್ಲಾ ಮಾರಬೇಕಾಯ್ತು. ಮತ್ತೆ ನಾಲ್ಕು ವರ್ಷಗಳ ನಂತರ ರೇಯವರ ಬೆನ್ನೆಲುಬೇ ಆಗಿದ್ದ ಡಾ|| ಬೋಸ್‌ರವರು ಪ್ಲೇಗ್‌ಗೆ ಬಲಿಯಾದರು. ಅಲ್ಲದೆ ಕಂಪನಿಯಲ್ಲಿ ದಕ್ಷ ಕೆಮಿಸ್ಟ್ ಆಗಿದ್ದ ಡಾ|| ಬೋಸ್‌ರ ಸಂಬಂಧಿಯೂ ನಿಧನರಾದರು. ಆದರೆ ರೇಯವರ ವ್ಯಕ್ತಿತ್ವದ ಪ್ರಭಾವದಿಂದಾಗಿ ಬೇರೆ ಪ್ರತಿಭಾವಂತ ಯುವಕರು ಅಲ್ಲಿ ಬಂದು ಸೇರಿ ಪರಿಸ್ಥಿತಿ ಸುಧಾರಿಸಿತು. ರೇಯವರ ಸಮರ್ಥ ನಾಯಕತ್ವವು ಬೇರೆ ಸಂಸ್ಥೆಗಳಿಗೂ ಮಾರ್ಗದರ್ಶಕವಾಯ್ತು. ಅವರು ಬೆಂಗಾಲ್ ಪಾಟರೀಸ್, ಬೆಂಗಾಲ್ ಎನಾಮೆಲ್ ವರ್ಕ್ಸ್, ಕಲ್ಕತ್ತಾ ಸೋಪ್ ವರ್ಕ್ಸ್, ನ್ಯಾಷನಲ್ ಟ್ಯಾನರೀಸ್ ಮುಂತಾದ ಅನೇಕ ಸಂಸ್ಥೆಗಳೊಂದಿಗೆ ಜೊತೆಗೂಡಿದರು. ಇದರಿಂದಾಗಿ ಭಾರತೀಯ ಉದ್ಯಮಗಳ ಬಾಗಿಲುಗಳು ತೆರೆದುಕೊಳ್ಳಲಾರಂಭಿಸಿದವು. ಭಾರತದಲ್ಲಿ ದೇಶೀಯ ಕೈಗಾರಿಕೆಗಳನ್ನು ಹುಟ್ಟುಹಾಕಿದ ಕೀರ್ತಿಯು ನಿಸ್ಸಂದೇಹವಾಗಿಯೂ ರೇಯವರಿಗೇ ಸಲ್ಲಬೇಕು.

ಬೆಂಗಾಲ್ ಕೆಮಿಕಲ್ಸ್‌ಅನ್ನು ಅಭಿವೃದ್ಧಿಪಡಿಸುವತ್ತ ತಮ್ಮ ಮನಸ್ಸನ್ನು ಕೇಂದ್ರೀಕರಿಸಿದರೂ ಸಹ ರೇಯವರು ತಮ್ಮ ಸಂಶೋಧನೆಗಳಿಂದ ವಿಮುಖರಾಗಲಿಲ್ಲ. ೧೮೯೬ರಲ್ಲಿ ಅವರು ಪಾದರಸದ ನೈಟ್ರೇಟಿನ ಮೇಲೆ ನಡೆಸಿದ ಪ್ರಯೋಗಗಳಿಂದಾಗಿ ವಿಶ್ವಪ್ರಸಿದ್ಧಿ ಪಡೆದರು. ಅವರ ಆತ್ಮಕಥನವಾದ 'ದಿ ಲೈಫ್ ಅಂಡ್ ಎಕ್ಸ್‌ಪೀರಿಯನ್ಸ್ ಆಫ್ ಎ ಬೆಂಗಾಲೀ ಕೆಮಿಸ್ಟ್' ಎಂಬ ಕೃತಿಯು (ಮುಂದೆ ಅವರೇ ಇದನ್ನು 'ಆತ್ಮಚರಿತ' ಎಂಬ ಹೆಸರಿನಲ್ಲಿ ಬಂಗಾಲಿ ಭಾಷೆಗೆ ತರ್ಜುಮೆ ಮಾಡಿದರು) ಪ್ರಶಂಸೆಗೆ ಪಾತ್ರವಾಯಿತು. 'ಗ್ರೀಕ್ ಆಲ್ಕೆಮಿ' ಎಂಬ ಪುಸ್ತಕ ಇವರಿಗೆ ವಿಜ್ಞಾನಕ್ಕೆ ಪ್ರಾಚೀನ ಭಾರತದ ಕೊಡುಗೆಗಳನ್ನು ಕುರಿತು ಕುತೂಹಲವನ್ನು ಬೆಳೆಸಿಕೊಳ್ಳುವಂತೆ ಪ್ರೇರೇಪಿಸಿತು. 'ದಿ ಫ್ರೆಂಚ್ ಪ್ರೆಸ್' ರೇಯವರು ವಿಜ್ಞಾನಕ್ಕೆ ಭಾರತೀಯರ ಕೊಡುಗೆಗಳ ಕುರಿತು ಬರೆದದ್ದನ್ನು ಆಸಕ್ತಿಯಿಂದ ಪ್ರಕಟಿಸಿತು. ಇವರ ಪುಸ್ತಕ 'ದಿ ಹಿಸ್ಟರಿ ಆಫ್ ಹಿಂದೂ ಕೆಮಿಸ್ಟ್ರಿ' ಎಂಬುದು ರಸಾಯನಶಾಸ್ತ್ರಕ್ಕೆ ಪ್ರಾಚೀನ ಭಾರತೀಯ ವಿಜ್ಞಾನಿಗಳ ಕೊಡುಗೆಗಳನ್ನು ಕುರಿತು ತಿಳಿಸುತ್ತದೆ. ಇದರಿಂದಾಗಿ ವಿದೇಶೀ ದಾಸ್ಯದ ವಿರುದ್ಧವಾಗಿ ಜನರಲ್ಲಿ ರಾಷ್ಟ್ರಾಭಿಮಾನ ಮೂಡಲು ಹಾಗೂ ವಿಶ್ವಮಟ್ಟದಲ್ಲಿ ಭಾರತದ ಕೀರ್ತಿಯು ಪುನರ್‌ಸ್ಥಾಪನೆಯಾಗಲು ಸಹಾಯಕವಾಯ್ತು.

೧೯೦೪ರಲ್ಲಿ ರೇಯವರು ಯುರೋಪ್ ಖಂಡಕ್ಕೆ ಶೈಕ್ಷಣಿಕ ಪ್ರವಾಸ ಕೈಗೊಂಡಾಗ ಅಲ್ಲಿ ಅನೇಕ ಕಡೆಗಳಲ್ಲಿ ಆತ್ಮೀಯ ಸತ್ಕಾರವನ್ನು, ಕೆಲವು ವಿಶ್ವವಿದ್ಯಾಲಯಗಳಿಂದ ಗೌರವ ಡಾಕ್ಟರೇಟ್ ಪದವಿಗಳನ್ನು ಪಡೆದರು. ೧೯೧೨ರಲ್ಲಿ ಕಲ್ಕತ್ತಾ ವಿಶ್ವವಿದ್ಯಾಲಯದ ಪ್ರತಿನಿಧಿಯಾಗಿ ಬ್ರಿಟಿಷ್ ವಸಾಹತುಗಳಲ್ಲಿನ ವಿಶ್ವವಿದ್ಯಾಲಯ ಸಮ್ಮೇಳನದಲ್ಲಿ ಭಾಗವಹಿಸಲು ಲಂಡನ್‌ಗೆ ತೆರಳಿದರು. ೧೯೧೬ರಲ್ಲಿ ಪ್ರೆಸಿಡೆನ್ಸಿ ಕಾಲೇಜಿನಿಂದ ಅವರು ನಿವೃತ್ತರಾದರೂ ಸಹ ಕಲ್ಕತ್ತಾ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದ ಆಶುತೋಷ್ ಮುಖರ್ಜಿಯವರು ಅವರನ್ನು ಹೊಸದಾಗಿ ಪ್ರಾರಂಭಿಸಿದ್ದ ವಿಜ್ಞಾನ ಕಾಲೇಜಿಗೆ ರಸಾಯನಶಾಸ್ತ್ರದ ಪ್ರೊಫೆಸರನ್ನಾಗಿ ನೇಮಿಸಿಕೊಂಡರು. ಈ ಸಂಸ್ಥೆಯಲ್ಲಿ ಎಲ್ಲರೂ ಭಾರತೀಯ ಪ್ರೊಫೆಸರ್‌ಗಳೇ ಇದ್ದುದರಿಂದ ಬ್ರಿಟಿಷ್ ಸರ್ಕಾರವು ಇಲ್ಲಿಗೆ ಸಕಾಲದಲ್ಲಿ ಆರ್ಥಿಕ ಅನುದಾನವನ್ನು ನೀಡುತ್ತಿರಲಿಲ್ಲ. ಹೀಗಿದ್ದರೂ ರೇಯವರ ನೇತೃತ್ವದ ರಸಾಯನಶಾಸ್ತ್ರ ವಿಭಾಗವು ಗಮನಾರ್ಹವಾದ ಪ್ರಗತಿಯನ್ನು ಸಾಧಿಸಿತು. ತಮ್ಮ ಎಪ್ಪತ್ತೈದನೆಯ ವಯಸ್ಸಿನಲ್ಲಿ ಇಲ್ಲಿಂದ ನಿವೃತ್ತರಾದ ಅವರು ೧೯೨೧ರಲ್ಲಿಯೇ ತಾವು ಮುಂದೆ ಕೆಲಸ ನಿರ್ವಹಿಸುವವರೆಗೂ ಬರುವ ಸಂಪೂರ್ಣ ಸಂಬಳವನ್ನು ರಸಾಯನಶಾಸ್ತ್ರ ವಿಭಾಗಕ್ಕೆ ಮುಂಗಡವಾಗಿ ಕೊಡುಗೆಯಾಗಿ ನೀಡಿದ್ದರು. ಪ್ರತಿವರ್ಷವೂ ರಸಾಯನಶಾಸ್ತ್ರದಲ್ಲಿನ ಸಂಶೋಧನೆ ಕೈಗೊಳ್ಳುವವರಿಗೆ ನೀಡಲು ಪ್ರಾಚೀನ ರಸಾಯನಶಾಸ್ತ್ರಜ್ಞ ನಾಗಾರ್ಜುನನ ಹೆಸರಿನಲ್ಲಿ ಹಾಗೂ ಬಂಗಾಳದ ಹುಲಿ ಆಶುತೋಷ್ ಮುಖರ್ಜಿಯವರ ಹೆಸರಿನಲ್ಲಿ ಎರಡು ಪ್ರಶಸ್ತಿಗಳನ್ನು ಸ್ಥಾಪಿಸಿದರು.

> ಪ್ರತಿಯೊಬ್ಬನೂ ಜಗತ್ತನ್ನು ಬದಲಿಸುವ ಆಲೋಚನೆ ಮಾಡುತ್ತಾನೆ; ಆದರೆ ತಾನು ಬದಲಾಗಬೇಕೆಂದು ಆಲೋಚನೆ ಎಂದಿಗೂ ಮಾಡುವುದಿಲ್ಲ.
>
> *– ಲಿಯೋ ಟಾಲ್‌ಸ್ಟಾಯ್*

ರೇಯವರು ಸಮಾಜ ಸೇವೆಯ ಕುರಿತ ಆಸಕ್ತಿಯನ್ನು ತಮ್ಮ ತಂದೆಯವರಿಂದ ಬಳುವಳಿಯಾಗಿ ಪಡೆದಿದ್ದರು. ಪ್ರವಾಹ, ಭೂಕಂಪ, ಕ್ಷಾಮ ಇಂತಹ ಸಂದರ್ಭಗಳಲ್ಲಿ ಯಾರೂ ಸಹಾಯಕ್ಕಾಗಿ ಎದುರು ನೋಡದಂತೆ ಇವರು ನೋಡಿಕೊಂಡರು. ಒಮ್ಮೆ ಭೀಕರ ಪ್ರವಾಹದಿಂದಾಗಿ ಬಂಗಾಳವು ತತ್ತರಿಸಿದಾಗ ಇವರು ಸಂಘಟಿಸಿದ ಪರಿಹಾರ ಕಾರ್ಯವನ್ನು ಗಮನಿಸಿದ ಗಾಂಧೀಜಿಯವರು 'ಪ್ರವಾಹಗಳ ವೈದ್ಯ' ಎಂದು ಇವರನ್ನು ಕರೆದರು. ಬೆಂಗಾಲ್ ಕೆಮಿಕಲ್ಸ್‌ನಲ್ಲಿನ ಲಕ್ಷಾಂತರ ರೂಪಾಯಿಗಳನ್ನು ದತ್ತಿಯಲ್ಲಿ ತೊಡಗಿಸಿ, ಅದರಿಂದ ಬಂದ ಲಾಭವನ್ನು ವಿಧವೆಯರಿಗಾಗಿ, ಅನಾಥರಿಗಾಗಿ ಬಳಸಿದರು. ಬಹಳ ಸರಳ ಜೀವನ ನಡೆಸುತ್ತಿದ್ದ ಇವರ ಬಹುಪಾಲು ಉಳಿತಾಯವೆಲ್ಲಾ ಬ್ರಹ್ಮಸಮಾಜಕ್ಕೆ ಮತ್ತು ತಮ್ಮ ತಂದೆಯವರ ಹೆಸರಿನಲ್ಲಿ ಬರೌಲಿಯಲ್ಲಿ ಸ್ಥಾಪಿಸಿದ್ದ ಶಾಲೆಗೆ ನೀಡಲ್ಪಟ್ಟಿತು. ತಮ್ಮ ಜೀವನದ ಬಹುಭಾಗ ಖಾದಿಯನ್ನೇ ಧರಿಸುತ್ತಿದ್ದ ಇವರು ಪ್ರತಿದಿನ ಒಂದು ಘಂಟೆ ಚರಕದಲ್ಲಿ ನೂಲುತ್ತಾ ಸ್ನೇಹಿತರಿಂದ ಆತ್ಮೀಯವಾಗಿ 'ಚರಕಶ್ರೀ' ಎನ್ನಿಸಿಕೊಂಡಿದ್ದರು. ತಮ್ಮ ವಿದ್ಯಾರ್ಥಿಗಳನ್ನೇ ಸ್ವಂತ ಮಕ್ಕಳಂತೆ ಕಾಣುತ್ತಾ ಅವರ ಜೊತೆ ಸಹಜೀವನ ನಡೆಸುತ್ತಾ ಜೀವನಪೂರ್ತಿ ಬ್ರಹ್ಮಚಾರಿಯಾಗಿಯೇ ಉಳಿದರು. ತಮ್ಮ ಸ್ವಂತ ವಿದ್ಯಾರ್ಥಿಗಳಿಂದಲೇ ಸೋಲನ್ನು ಸ್ವೀಕರಿಸಲು ಬಯಸುತ್ತಿದ್ದ ಇವರು ಅವರಿಗೆ ಕೇವಲ ಪದವಿಗಳನ್ನು ಗಳಿಸಿಕೊಂಡರೆ ಸಾಕಾಗುವುದಿಲ್ಲ, ನಿಜವಾದ ಜ್ಞಾನದ ಸಂಪಾದನೆ ಹಾಗೂ ಅದರ ಸದ್ಬಳಕೆಯಾಗಬೇಕೆಂದು ಹೇಳುತ್ತಿದ್ದರು.

ನಿರಂತರವಾಗಿ ಇಪ್ಪತ್ತೈದು ವರ್ಷಗಳ ಕಾಲ ತಾವು ವಾಸಿಸುತ್ತಿದ್ದ ಸಾಧಾರಣ ಕೊಠಡಿಯಲ್ಲೇ ರೇಯವರು ೧೯೪೪ರ ಜೂನ್ ೧೬ರಂದು ನಿಧನರಾದರು. ಒಬ್ಬ ದೇಶಪ್ರೇಮಿ, ಶ್ರೇಷ್ಠ ವಿಜ್ಞಾನಿ, ಅಗ್ರಗಣ್ಯ ಕೈಗಾರಿಕೋದ್ಯಮಿ, ಸಮರ್ಪಣಾಭಾವದ ಸಮಾಜ ಸೇವಕ ಎಲ್ಲವೂ ಆಗಿದ್ದ ಇವರು ತಮ್ಮ ಇಡೀ ಜೀವನವನ್ನು ದೇಶಕ್ಕಾಗಿ ಸಮರ್ಪಿಸಿಕೊಂಡರು. ಇವರ ವಿಜ್ಞಾನ ದೇಶದ ಸಮೂಹದ ಕರೆಗೆ ಉತ್ತರಿಸುವಂತಹದ್ದು; ಕಾಲಕ್ಕೆ ತಕ್ಕಂತಹ ಅಗತ್ಯಗಳ ಜೊತೆಯಲ್ಲಿ ಸಾಗುವಂತಹದ್ದೂ ಆಗಿತ್ತು. ಸ್ವಾವಲಂಬಿತ್ವವನ್ನು ಪ್ರತಿಪಾದಿಸಿದ ಇವರು ತಮಗೂ, ಭಾರತೀಯ ವಿಜ್ಞಾನಕ್ಕೂ ಗೌರವವನ್ನು ಆಗ್ರಹಿಸಿದರು ಮತ್ತು ಪಡೆದರು. ಒಂದು ಕಾಲದಲ್ಲಿ ಭಾರತೀಯರು ದೇಶಾಭಿಮಾನವನ್ನೇ ಮರೆತಿದ್ದಾಗ ರೇಯವರು ಏಕಾಂಗಿಯಾಗಿ ದೇಶದ ಸಹಾಯಕ್ಕೆ ಬಂದು ಇಡೀ ವಿಶ್ವವೇ ಭಾರತದತ್ತ ಹೊರಳಿ ನೋಡುವಂತಹ ಸಾಧನೆಗಳನ್ನು ಮಾಡಿದರು. ಭಾರತೀಯ ವಿಜ್ಞಾನದ ಕಂಪನ್ನು ಎಂದೆಂದಿಗೂ ಹರಡಲು ಸಾಧ್ಯವಾಗುವಂತೆ ರೇಯವರ ಚೈತನ್ಯವು ಸದಾ ಸ್ಫೂರ್ತಿ ನೀಡಬಲ್ಲದು.

(ಆಧಾರ : ಸೈನ್ಸ್ ರಿಪೋರ್ಟರ್)

ಎ. ಎಂ. ಶ್ಯಾಮೇಶ್
೭೮೩, ಟೌನ್‌ಕ್ಲಬ್ ಬಳಿ, ಕೆ. ಆರ್. ಪೇಟೆ - ೫೭೧೪೨೬

# ಸೌಂದರ್ಯದ ಖನಿ - ಚಂಬಾ



*ಚಂಬಾದ ಲಕ್ಷ್ಮೀನಾರಾಯಣ ದೇವಾಲಯ*

"ಆಹಾ....." ಬಸ್ಸು ಬ್ರೇಕ್ ಹಾಕಿದೊಡನೆ ತೂಕಡಿಸುತ್ತಿದ್ದ ನಾನು ಎಚ್ಚರಗೊಂಡು, ಹೊರಗಿನ ದೃಶ್ಯವನ್ನು ನೋಡಿ ಹೊರಡಿಸಿದ ಉದ್ಗಾರವಿದು. ಬೆಂಗಳೂರಿನ ಕಾಂಕ್ರೀಟ್ ಕಟ್ಟಡಗಳ ನಡುವೆ ಹುಟ್ಟಿ ಬೆಳೆದ ನನಗೆ ಹಿಮಾಚಲದ ಈ ಹಿಮಾಚ್ಛಾದಿತ ಪರ್ವತಗಳ ವಿಹಂಗಮ ನೋಟ ಭೂಲೋಕದ ಸ್ವರ್ಗ ಎಂದು ಎನಿಸಿದ್ದರಲ್ಲಿ ಆಶ್ಚರ್ಯವಿರಲಿಲ್ಲ.

ಹಿಂದಿನ ದಿನದ ಅಮೃತಸರದಲ್ಲಿನ ನಮ್ಮ ವಾಸ ಎಷ್ಟು ಧೂಳುಮಯವಾಗಿತ್ತೆಂದರೆ ಹಿಮಾಚಲದ ಈ ಶುದ್ಧ ವಾತಾವರಣ ಅಮೃತಸರದ ವಾತಾವರಣಕ್ಕೆ ತದ್ವಿರುದ್ಧವಾಗಿದ್ದು ನನ್ನನ್ನು ಆಶ್ಚರ್ಯಗೊಳಿಸಿತು. ೧೦ನೇ ತರಗತಿಯ ಪರೀಕ್ಷೆಗಳನ್ನು ಬರೆದು, ರಜೆಗಾಗಿ ಹಿಮಾಚಲ ಪ್ರದೇಶಕ್ಕೆ ಬಂದಿದ್ದ ನನಗೆ ನನ್ನ ರಜೆಯ ನೆನಪಿನ ಅಂಗಳದಲ್ಲಿ ಇಷ್ಟು ಸುಂದರವಾದ ಹೂಗಳು ಅರಳುತ್ತವೆಂದು ಗೊತ್ತಿರಲಿಲ್ಲ.

ಹಿಮಾಚಲ ಪ್ರದೇಶಕ್ಕೆ ಹೊರಟಿರುವೆವು ಎಂದು ಯಾರೊಡನೆಯಾದರೂ ಹೇಳಿದರೆ, ಅವರು ಕೇಳುತ್ತಿದ್ದುದು : 'ಓ ಸಿಮ್ಲಾ, ಕುಲು , ಮನಾಲಿಗೆ ಹೊರಟಿದ್ದೀರಾ ?' ಎಂದು. ಹಿಮಾಚಲದಲ್ಲಿ ಬಹಳ ಪ್ರಸಿದ್ಧಿಯನ್ನು ಗಳಿಸಿರುವ ಈ ಗಿರಿಧಾಮಗಳಿಗೆ ನಾವು ಭೇಟಿ ನೀಡಲೇ ಇಲ್ಲ. ನಮ್ಮ ತಂದೆಯ ಸ್ನೇಹಿತರು ಕಾಂಗ್ಡಾ ಎಂಬ ಊರಿನಲ್ಲಿ ವಾಸವಾಗಿರುವರು. ಅವರು ನಮ್ಮನ್ನು ಕಾಂಗ್ಡಾ ಕಣಿವೆಯ ಹತ್ತಿರದಲ್ಲಿರುವ ಚಂಬಾ ಕಣಿವೆಗೆ ಕರೆದೊಯ್ದರು.

ಚಂಬಾ ಜಿಲ್ಲೆಯು ಬಹಳ ಸುಂದರವಾಗಿದೆ. ಈ ಕಣಿವೆಯು ಹಾಥಿ, ಪಂಜಿ, ದಗನಿ, ಜಾಸ್ಕರ್ ಮುಂತಾದ ಪರ್ವತ ಶ್ರೇಣಿಗಳಿಂದ ಕೂಡಿದ್ದು ಚಂದ್ರಬಾಘಾ (ಚೇನಾಬ್) ಮತ್ತು ರಾವಿ ಇಲ್ಲಿ ಹರಿಯುವ ಪ್ರಮುಖ ನದಿಗಳಾಗಿವೆ. ಚಂಬಾ ಜಿಲ್ಲೆಯಲ್ಲಿ ಹೆಚ್ಚಾಗಿ ಬುಡಕಟ್ಟು ಜನಾಂಗದವರೇ ವಾಸಿಸುತ್ತಿದ್ದಾರೆ. ಇಲ್ಲಿನ ಪ್ರಮುಖ ಭಾಷೆಗಳು ಚಂಬ್ಯಾಲಿ, ಹಿಂದಿ, ಪಹಾಡಿ, ಚುರಾಹಿ, ಗಡ್ಡಿ ಅಥವಾ ಭರ್ಮೌರಿ, ಭಟಿಯಾಲಿ ಮತ್ತು ನಿಹುಂಟ. ೨೧ನೆಯ ಶತಮಾನದ ಪ್ರಭಾವಕ್ಕೆ ಈಗ ಒಳಗಾಗುತ್ತಿರುವ ಈ ಜಿಲ್ಲೆಯ ಜನ ಬಹಳ ಸರಳವಾದವರು. ತಮ್ಮ ರೀತಿ ರಿವಾಜುಗಳಲ್ಲಿ ಅಚಲವಾದ ನಂಬಿಕೆಯಿಟ್ಟವರು.

ಚರಿತ್ರೆಯ ಪ್ರಕಾರ ಚಂಬಾ ರಾಜ್ಯದ ಸ್ಥಾಪನೆ ಸುಮಾರು ಆರನೆಯ ಶತಮಾನದ ಮಧ್ಯದಲ್ಲಿ ಆಯಿತು. ಆಗಿನ ಚಂಬಾದ ರಾಜಧಾನಿ ಬ್ರಹ್ಮಾಪುರ (ಈಗಿನ ಭರ್ಮೌರ್). ಚಂಬಾದ ರಾಜರು ಸೂರ್ಯವಂಶದವರು. ಇವರ ರಾಜ ಸಾಹಿಲ ವರ್ಮನ ಆಳ್ವಿಕೆಯ ಕಾಲದಲ್ಲೇ ಈ ರಾಜ್ಯಕ್ಕೆ ಚಂಬಾ ಎಂಬ ಹೆಸರು ಬಂದದ್ದು. ಮಕ್ಕಳಿಲ್ಲದ ಇವನಿಗೆ ಋಷಿಗಳ ಆಶೀರ್ವಾದದಿಂದ ೧೦ ಗಂಡು ಮಕ್ಕಳು, ಒಬ್ಬಳು ಮಗಳು ಹುಟ್ಟಿದರಂತೆ. ಅವಳಿಗೆ ಚಂಪಾವತಿ ಎಂದು ಹೆಸರಿಟ್ಟರು. ರಾಜ ಸಾಹಿಲ ವರ್ಮನು ತನ್ನ ಮಗಳ ನೆನಪಿನಲ್ಲಿ ಚಂಬಾ ಎಂಬ ಊರನ್ನು ಸ್ಥಾಪಿಸಿದನು. ನಂತರ ರಾಜಧಾನಿಯನ್ನು ಬ್ರಹ್ಮಾಪುರದಿಂದ ಚಂಬಾಗೆ ವರ್ಗಾಯಿಸಿದನು.

**ಹಿಮಾಲಯಕ್ಕೆ ಹೋಗಿಬಂದವರು ಯಾರೂ ಅದೊಂದು ವ್ಯರ್ಥದ ಪ್ರವಾಸವೆಂದು ಹೇಳಿದ್ದಿಲ್ಲ. ಶಾಲಾ ಬಾಲಕಿಯೊಬ್ಬರ ಮೊದಲ ಹಿಮಾಲಯ ದರ್ಶನದ ಅನುಭವ ಇಲ್ಲಿದೆ.**

**ಬಿ. ಮೈತ್ರಿ**

ಇಷ್ಟು ಸಮೃದ್ಧ ಚರಿತ್ರೆಯುಳ್ಳ ಚಂಬಾ ಜಿಲ್ಲೆ ಸುಂದರವಾದ ಚಿತ್ರವಿದ್ದಂತೆ ! ಕಣ್ಣು ಹಾಯಿಸಿದೆತ್ತರಕ್ಕೂ ಹಸಿರಿನಿಂದ ಕೂಡಿದ ಬೆಟ್ಟಗಳು. ಆ ಬೆಟ್ಟಗಳಿಗೆ ಕಿರೀಟ ವಿಟ್ಟಂತೆ ಹಿಮಾಚ್ಛಾದಿತ ಪರ್ವತಗಳು, ಪ್ರಯಾಣ ಮಾಡುವ ಪ್ರವಾಸಿಗರಿಗೆ ಅಲ್ಲಿನ ದೃಶ್ಯ ರಸದೌತಣ ವಿದ್ದಂತೆ. ಎತ್ತರ ಹೆಚ್ಚಿದಂತೆ ವಿವಿಧ ಗಿಡ ಮರಗಳ ಜಾಗವನ್ನು ದೇವದಾರು ಹಾಗೂ ಪೈನ್ ಮರಗಳು ಆಕ್ರಮಿಸಿಕೊಳ್ಳುತ್ತವೆ. ಇಲ್ಲಿನ ಪ್ರಾಣಿ, ಪಕ್ಷಿ, ಸಂಪತ್ತೂ ಅಪಾರ.

ಚಂಬಾ ಬಹಳ ಸುಂದರವಾದ ಚಿಕ್ಕ ಪಟ್ಟಣ. ಅದರ ಬದಿಯಲ್ಲೇ ರಾವಿ ನದಿ ಮೌನವಾಗಿ ಹರಿಯುತ್ತದೆಂದರೆ ಆ ಜಾಗದ ಅಪ್ರತಿಮ ಸೌಂದರ್ಯದ ಬಗ್ಗೆ ಯಾರಿಗಾದರೂ ಮನದಟ್ಟಾಗುತ್ತದೆ. ನದಿಯೂ ನಿಷ್ಕಲ್ಮಷವಾದ, ತಿಳಿಯಾದ ನೀರನ್ನು ಹೊಂದಿದೆ. ಪಟ್ಟಣದ ಮಧ್ಯದಲ್ಲಿ ಚೌಗನ್ ಎಂಬ ದೊಡ್ಡದೊಂದು ಮೈದಾನವಿದೆ. ಇದರ ಉದ್ದ ೧ ಕಿ.ಮೀ. ಹಾಗೂ ಅಗಲ ೭೫ ಮೀ. ಇದೆ. ಸಂಜೆಯ ಹೊತ್ತಿನಲ್ಲಿ ಇಲ್ಲಿ ಮಕ್ಕಳು ತಮ್ಮ ಪೋಷಕರೊಡನೆ ಬಂದು ಆಟಗಳಾಡುವುದನ್ನು ನೋಡುವುದೇ ಚೆನ್ನ. ಪ್ರತಿವರ್ಷ ಇಲ್ಲಿ ಒಂದು ವಾರದ ಜಾತ್ರೆ ನಡೆಯುತ್ತದೆ. ಆಗ ಈ ಚೌಗನ್ ಮೈದಾನವು ಸುತ್ತಮುತ್ತಲಿನ ಹಳ್ಳಿಯಿಂದ ಬರುವವರಿಗೆ ಮುಖ್ಯವಾದ ವ್ಯಾಪಾರ ಕೇಂದ್ರವಾಗಿರುತ್ತದೆ. ಆಗ ಇಲ್ಲಿ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳು ಹಾಗೂ ಕ್ರೀಡಾಕೂಟಗಳನ್ನು ಆಯೋಜಿಸಲಾಗುತ್ತದೆ. ಈ ಮೈದಾನದಿಂದ 'ಮಿಂಜರ್' ಎಂಬ ಮೆರವಣಿಗೆಯೂ ಈ ಜಾತ್ರೆಯ ಸಮಯದಲ್ಲಿ ಹೊರಡುತ್ತದೆ.

ಚಂಬಾ ಜಿಲ್ಲೆ ದೇವಸ್ಥಾನಗಳಿಗೆ ಪ್ರಸಿದ್ಧವಾಗಿದೆ. ಇಲ್ಲಿ ದೇವಾಲಯ ಸಂಕೀರ್ಣಗಳೇ ಹೆಚ್ಚು ಪ್ರಮುಖವಾಗಿ ಕಂಡುಬರುತ್ತವೆ. ಅದರಲ್ಲಿ ಪ್ರಮುಖವಾದುದು ಲಕ್ಷ್ಮೀ ನಾರಾಯಣ ದೇವಾಲಯ ಸಂಕೀರ್ಣ. ಶಿವ ಮತ್ತು ವಿಷ್ಣುವಿಗೆ ಅರ್ಪಿತವಾದ ಈ ಸಂಕೀರ್ಣವನ್ನು ಸುಮಾರು ೮ರಿಂದ ೧೦ನೇ ಶತಮಾನದ ಅವಧಿಯಲ್ಲಿ ನಿರ್ಮಿಸಲಾಗಿತ್ತು. ಈ ದೇವಾಲಯಗಳನ್ನು ಶಿಖರ ಶೈಲಿಯಲ್ಲಿ ನಿರ್ಮಿಸಲಾಗಿದೆ.

ಇಲ್ಲಿನ ಹರಿರಾಯ ದೇವಾಲಯ, ಬನ್ನಿ ಗೋಪಾಲ ದೇವಾಲಯ, ಶ್ರೀ ಬಜ್ರೇಶ್ವರಿ ದೇವಾಲಯ, ಶ್ರೀ ಚಾಮುಂಡಾದೇವಿ ದೇವಾಲಯಗಳೂ ಬಹಳ ಪ್ರಸಿದ್ಧ.

ಚಂಬಾದ ಮತ್ತೊಂದು ಪ್ರಮುಖ ಆಕರ್ಷಣೆಯೆಂದರೆ ಭೂರಿಸಿಂಗ್ ವಸ್ತು ಸಂಗ್ರಹಾಲಯ. ರಾಜ ಭೂರಿಸಿಂಗನ ಹೆಸರಿನಲ್ಲಿ ನಿರ್ಮಿಸಲಾಗಿರುವ ಈ ವಸ್ತು ಸಂಗ್ರಹಾಲಯ, ಚಂಬಾದ ಸಂಸ್ಕೃತಿ, ವೈಭವಕ್ಕೆ ಹಿಡಿದ ಕನ್ನಡಿಯಾಗಿದೆ. ಇಲ್ಲಿ ಹಳೆಯ ಶಾಸನಗಳು, ತಾಳೆಗರಿಗಳು, ಕಾಂಗ್ಡಾ ಮತ್ತು ಬಶೋಲಿ ಶೈಲಿಯ ಅನೇಕ ಮಿನಿಯೇಚರ್ ತೈಲ ಚಿತ್ರಗಳು, ಅಲ್ಲಿನ ಜನರ ಉಡುಗೆ, ಆಭರಣಗಳು, ಅವರು ಬಳಸುತ್ತಿದ್ದ ನಾಣ್ಯಗಳು, ಉಪಕರಣಗಳನ್ನು ಬಹಳ ಅಂದವಾಗಿ ಮತ್ತು ಅಚ್ಚುಕಟ್ಟಾಗಿ ಪ್ರದರ್ಶಿಸಲಾಗಿದೆ.

ಚಂಬಾಕ್ಕೆ ಹೋದವರು ಅಲ್ಲಿನ ಒಂದಾದರೂ ವಿಶೇಷತೆಯನ್ನು ಕೊಳ್ಳದೆ ಬರುವಂತಿಲ್ಲ. ಚಂಬಾನಗರ ಚಪ್ಪಲಿಗಳು, ಬೆಳ್ಳಿ ಆಭರಣಗಳು ಹಾಗೂ ಕಸೂತಿ ಮಾಡಿದ ಕರವಸ್ತ್ರಗಳಿಗೆ ಪ್ರಸಿದ್ಧ. ತಿಳಿಗುಲಾಬಿ ಬಣ್ಣದ

ಚಂಬಾ ಚಪ್ಪಲಿಗಳು ಪ್ರವಾಸಿಗರ ಮನಗಳನ್ನು ತಕ್ಷಣ ಸೂರೆಗೊಳ್ಳುತ್ತವೆ. ಕರಕುಶಲತೆಯಿಂದ ಮಾಡಿದ ಬೆಳ್ಳಿಯ ಆಭರಣಗಳೂ ಬಹಳ ಸೂಕ್ಷ್ಮವಾಗಿರುತ್ತವೆ. ಚಂಬಾದ ಕರವಸ್ತ್ರಗಳ ವೈಶಿಷ್ಟ್ಯವೇನೆಂದರೆ ಅದರ ಮೇಲೆ ಮಾಡಿರುವ ಕಸೂತಿ ಎರಡೂ ಬದಿಗಳಲ್ಲಿ ಒಂದೇ ಆಗಿರುತ್ತದೆ.

ಚಂಬಾದಿಂದ ಹೊರಟು, ರಾವಿ ನದಿಯ ಬದಿಯೇ ಪ್ರಯಾಣ ಮಾಡಿದೆವು ನಾವು. ಸುತ್ತಮುತ್ತಲೂ ಬೆಟ್ಟಗಳು. ಬೆಟ್ಟಗಳನ್ನು ಮೆಟ್ಟಿಲುಗಳಂತೆ ಕತ್ತರಿಸಿ ವ್ಯವಸಾಯ ಮಾಡುತ್ತಾರೆ. ಇಲ್ಲಿನ ಜನರು, ಇಷ್ಟು ದಿನ ಈ ರೀತಿಯ ವ್ಯವಸಾಯದ ಬಗ್ಗೆ ಪಠ್ಯಪುಸ್ತಕಗಳಲ್ಲಿ ಓದಿ ತಿಳಿದಿದ್ದೆ ಅಷ್ಟೆ. ಆದರೆ ಇಲ್ಲಿ ನನಗೆ ಪ್ರತ್ಯಕ್ಷವಾಗಿ ನೋಡುವ ಅವಕಾಶ ದೊರೆಯಿತು. ನಮ್ಮನ್ನು ಆಶ್ಚರ್ಯಪಡಿಸಿದ ಇನ್ನೊಂದು ಸಂಗತಿಯೆಂದರೆ, ಬೆಟ್ಟದ ತುದಿಗಳಲ್ಲಿ ಮನೆಗಳನ್ನು ಕಟ್ಟಿಕೊಂಡು ಜನ ಕುರಿ ಮೇಯಿಸುತ್ತ, ನಿರಾಳವಾಗಿ ವಾಸಿಸುತ್ತಿದ್ದದ್ದು. ಇವರು ಅಷ್ಟು ಎತ್ತರದಲ್ಲಿ ಮನೆ ಹೇಗೆ ಕಟ್ಟುತ್ತಾರೆಂಬುದು ನನಗೆ ಪ್ರಶ್ನೆಯಾಗಿಯೇ ಉಳಿಯಿತು.

ಚಂಬಾದಿಂದ ಹೊರಟು, ನಾವು ತಲುಪಿದ್ದು ಭರ್ಮೌರನ್ನು. ರಾಜ ಸಾಹಿಲ ವರ್ಮನ ಆಳ್ವಿಕೆಯ ವರೆಗೂ ಇದು ಚಂಬಾ ರಾಜ್ಯದ ರಾಜಧಾನಿಯಾಗಿತ್ತು. ಇದು ಇರುವುದು ೨೧೯೫ ಮೀ. ಎತ್ತರದಲ್ಲಿ. ಈ ಹಳ್ಳಿಯು ನಾಲ್ಕು ಕಡೆಗಳಿಂದಲೂ ಹಿಮಪರ್ವತಗಳಿಂದ ಸುತ್ತುವರೆದಿದೆ. ಇಲ್ಲಿ ಗಡ್ಡಿ ಎಂಬ ಬುಡಕಟ್ಟು ಜನಾಂಗದ ಜನರನ್ನು ಕಾಣುತ್ತೇವೆ. ಬೆಟ್ಟಗಳಲ್ಲದೆ ಇಲ್ಲಿನ ಪ್ರಮುಖ ಆಕರ್ಷಣೆಯೆಂದರೆ ಚೌರಾಸಿ ದೇವಾಲಯ ಸಂಕೀರ್ಣ. ಇಲ್ಲಿ ೮೪ ದೇವರುಗಳಿವೆ. ಅವುಗಳಲ್ಲಿ ಪ್ರಮುಖವಾದವು ಗಣೇಶ, ಲಕ್ಷ್ಣದೇವಿ, ನರಸಿಂಹ ದೇವರುಗಳ ಗುಡಿಗಳು. ಇಲ್ಲಿನ ಮುಖ್ಯ ದೇವಾಲಯವನ್ನು ಸುಮಾರು ಏಳನೆಯ ಶತಮಾನದಲ್ಲಿ ಕಟ್ಟಲಾಗಿತ್ತು. ಇದನ್ನು ಸಂಪೂರ್ಣವಾಗಿ ಮರದಿಂದಲೇ ಕಟ್ಟಿದ್ದಾರೆ. ಮರದ ಬಾಗಿಲು ಮತ್ತು ತೊಲೆಗಳ ಮೇಲೆ ಬಹಳ ಸುಂದರವಾದ ಕೆತ್ತನೆಯನ್ನು ನೋಡಬಹುದು. ಶಿಥಿಲವಾಗಿರುವ ಭಾಗವನ್ನು ಸರಿಪಡಿಸಿ ದೇವಾಲಯವನ್ನು ಹಾಳಾಗದಂತೆ ಕಾಪಾಡಿದ್ದಾರೆ. ಸುತ್ತಲಿನ ಪ್ರಾಕೃತಿಕ ಸೌಂದರ್ಯ ಈ ದೇವಾಲಯ ಸಂಕೀರ್ಣಕ್ಕೆ ಹೆಚ್ಚಿನ ಮೆರುಗನ್ನು ಕೊಟ್ಟಿದೆ. ನನ್ನ ಅನಿಸಿಕೆಯೇನೆಂದರೆ ನಾವು ನೋಡಿದ ಜಾಗಗಳಲ್ಲೆಲ್ಲ ಅತಿ ಪ್ರಶಾಂತ ಹಾಗೂ ಸುಂದರವಾದದ್ದು ಭರ್ಮೌರ್. ಭರ್ಮೌರಿನಿಂದ ೨೬ ಕಿ.ಮೀ. ದೂರದಲ್ಲಿ ಕೈಲಾಸ ಮಣಿಮಹೇಶ್ ಎಂಬ ಅತ್ಯಂತ ಸುಂದರವಾದ ಜಾಗವಿದೆ. ಅಲ್ಲಿ ನಡುವೆ ಒಂದು ದೊಡ್ಡ ಕೆರೆ ಇದೆ. ಕೃಷ್ಣಜನ್ಮಾಷ್ಟಮಿಯ ಸಮಯದಲ್ಲಿ ಮಾತ್ರ ಇಲ್ಲಿ ೨ ವಾರಗಳ ಮಟ್ಟಿಗೆ ಒಂದು ದೊಡ್ಡ ಜಾತ್ರೆ ನಡೆಯುತ್ತದೆ. ದೇಶದ ನಾನಾ ಕಡೆಗಳಿಂದ ಜನ ಈ ಜಾತ್ರೆಗೆ ಬರುತ್ತಾರೆ. ಆ ಜಾತ್ರೆ ನಡೆಯುವ ಸಮಯದಲ್ಲಿ ಮಾತ್ರ ಮಣಿಮಹೇಶದಲ್ಲಿ ಜನಗಳ ವಾಸ. ವರ್ಷದ ಬಾಕಿ ತಿಂಗಳುಗಳಲ್ಲಿ ಈ ಜಾಗ ಸಂಪೂರ್ಣವಾಗಿ ನಿರ್ಜನವಾಗಿರುತ್ತದೆ.

ಚಂಬಾದಿಂದ ಡಾಲ್‌ಹೌಸಿಗೆ ಪ್ರಯಾಣ ಮಾಡುವಾಗ ಬೆಟ್ಟಗಳ ನಡುವೆ ತಕ್ಷಣ ಸಮತಟ್ಟಾದ ಜಾಗವೊಂದು ಕಂಡುಬರುತ್ತದೆ. ನಾಲ್ಕು ಕಡೆಗಳಿಂದಲೂ ದೇವದಾರು ಮರಗಳಿಂದ ಆವೃತಗೊಂಡಿರುವ ಈ ಸ್ಥಳದ ಮಧ್ಯದಲ್ಲಿ ಸುಂದರವಾದ ಕೊಳವೊಂದಿದೆ. ಇದರ ಸೌಂದರ್ಯಕ್ಕೆ ಮಾರುಹೋದ ಬ್ರಿಟಿಷ್ ಅಧಿಕಾರಿಯೊಬ್ಬ ಇದನ್ನು 'ಮಿನಿ ಸ್ವಿಟ್ಜರ್‌ಲೆಂಡ್' ಎಂದು ಕರೆದ. ೬೦೦೦ ಅಡಿ ಎತ್ತರದಲ್ಲಿರುವ ಈ ಜಾಗವೇ ಖಜ್ಜಿಯಾರ್. ಅನೇಕ ತರಹದ ಸಸ್ಯಗಳು, ಹುಳ ಹುಪ್ಪಟೆಗಳು ಕಂಡುಬರುವ ಈ ಜಾಗಕ್ಕೆ ಯಾವುದೇ ಜೀವಶಾಸ್ತ್ರದ ವಿದ್ಯಾರ್ಥಿಯ ಆಸಕ್ತಿಯನ್ನು ಕೆರಳಿಸುವ ಸಾಮರ್ಥ್ಯವಿದೆ. ಪ್ರವಾಸಿಗರಿಗೆ ಮನರಂಜನೆಗಾಗಿ ಕುದುರೆ ಸವಾರಿ ಮಾಡುವ ಸೌಲಭ್ಯವೂ ಉಂಟು. ಇಲ್ಲಿ ಖಜಿನಾಗನಿಗೆ ಅರ್ಪಿತವಾದ ಒಂದು ದೇವಸ್ಥಾನವೂ ಇದೆ.



*ಖಜ್ಜಿಯಾರ್ ಲೇಕ್*



*ಭರ್ಮೌರ್‌ನ ಚೌರಾಸಿ ದೇವಾಲಯ*

ಭರ್ಮೌರ್ ಮತ್ತು ಖಜ್ಜಿಯಾರ್‌ನ ಸೌಂದರ್ಯವನ್ನು ಸವಿದು ಬಂದಿದ್ದ ನಮಗೆ ಡಾಲ್‌ಹೌಸಿಯನ್ನು ಕಂಡು ಸ್ವಲ್ಪ ನಿರಾಶೆಯಾಯಿತು. ಬೇರೆ ಗಿರಿಧಾಮಗಳಂತೆ ಡಾಲ್‌ಹೌಸಿಯ ಸುತ್ತಲೂ ಸುಂದರವಾದ ಬೆಟ್ಟ, ಗುಡ್ಡಗಳಿದ್ದರೂ ಆ ಊರು ವಾಣಿಜ್ಯ ವ್ಯಾಪಾರ ಕೇಂದ್ರವಾಗುತ್ತಿರುವುದರಿಂದ ಅದರ ಸೌಂದರ್ಯ ಕಡಿಮೆಯಾಗುತ್ತಿದೆ. ಭರ್ಮೌರ್ ಟ್ಯೂಬ್ ಲೈಟಾದರೆ, ಡಾಲ್‌ಹೌಸಿ ೪೦ ವ್ಯಾಟ್ ಬಲ್ಬ್ ಇದ್ದಂತೆ! ಇಲ್ಲಿನ ಜನರ ಜೀವನದ ಮೇಲೆ ಆಂಗ್ಲರ ಪ್ರಭಾವವನ್ನು ಕಾಣಬಹುದು. ಲಾರ್ಡ್ ಡಾಲ್‌ಹೌಸಿಯ ಬೇಸಿಗೆಯ ನಿವಾಸವಾಗಿದ್ದ ಈ ಊರಿನಲ್ಲಿ ಸಂತ ಜಾನ್, ಸಂತ ಫ್ರಾನ್ಸಿಸ್, ಸಂತ ಆಂಡ್ರ್ಯೂಸ್, ಸಂತ ಪ್ಯಾಟ್ರಿಕ್‌ರ ಚರ್ಚುಗಳಿವೆ.

ಹಿಮಾಚಲ ಪ್ರದೇಶ ಒಂದು ಚಿಕ್ಕ ರಾಜ್ಯ ಆದರೂ ಇಲ್ಲಿ ಅತ್ಯುತ್ತಮವಾದ ರಸ್ತೆಗಳಿವೆ. ಬೆಟ್ಟಗಳ ಎತ್ತರ ಪ್ರದೇಶಗಳಲ್ಲಿ ಹಾಗೂ ಕಣಿವೆಗಳ ನಡುವಿನಲ್ಲಿ ರಸ್ತೆಗಳು ನಮ್ಮ ಉದ್ಯಾನ ನಗರಿಯ ರಸ್ತೆಗಳಿಗಿಂತ ಚೆನ್ನಾಗಿವೆ. ಇಲ್ಲಿನ ಸಮಾಜದಲ್ಲಿ ಮಹಿಳೆಯರಿಗೆ ಒಳ್ಳೆಯ ಸ್ಥಾನವಿದೆ. ಅವರೇ ಈ ಸಮಾಜದ ಬೆನ್ನುಮೂಳೆಯಿದ್ದಂತೆ. ಹಿಮಾಚಲದ ಹೆಂಗಸರು ಗಂಡಸರಿಗಿಂತ ಹೆಚ್ಚು ಶ್ರಮಪಟ್ಟು ದುಡಿಯುತ್ತಾರೆ. ಈ ರಾಜ್ಯದ ಸಾಕ್ಷರತೆಯ ಮಟ್ಟ ಶೇಕಡ ೭೭.೧೩ರಷ್ಟಿದೆ.

ಹಿಮಾಲಯದ ಮಡಿಲಲ್ಲಿ ಹುದುಗಿರುವ ಈ ಚಂಬಾ ಜಿಲ್ಲೆ ಸೌಂದರ್ಯದ ಖನಿ. ಆದರೆ ನಿಧಾನವಾಗಿ ೨೧ನೆಯ ಶತಮಾನದ ಪ್ರಭಾವ ಹಿಮಾಚಲ ಪ್ರದೇಶದ ಮೇಲೆ ಬೀಳುತ್ತಿದೆ. ಅದರ ನಡುವೆ ಭೂಸ್ವರ್ಗದಂತಿರುವ ಈ ರಾಜ್ಯದ ಪ್ರಾಕೃತಿಕ ಸೌಂದರ್ಯ ನಮ್ಮ ಮುಂದಿನ ಪೀಳಿಗೆ ಸವಿಯುವಂತೆ ಆಧುನಿಕತೆ ಮತ್ತು ವ್ಯಾಪಾರೀಕರಣದ ಭರಾಟೆಯಲ್ಲಿ ನಶಿಸಿ ಹೋಗದಂತೆ ಉಳಿಯಲಿ ಎಂದು ಹಾರೈಸಬೇಕಾಗಿದೆ.

ಬಿ. ಮೈತ್ರಿ
೧೦೮, ಸ್ಕೈಲೈನ್ ಸುರಭಿ, ವಿದ್ಯಾಪೀಠ ರಸ್ತೆ, ಬನಶಂಕರಿ ೩ನೇ ಹಂತ,
ಬೆಂಗಳೂರು - ೫೬೦ ೦೮೫

# ತರ್ಕ




ಮಾನವ ಮತ್ತು ಮೂಕ ಪ್ರಾಣಿಗಳ ನಡುವೆ ಒಂದು ಮುಖ್ಯ ವ್ಯತ್ಯಾಸವಿದೆ. ಅದು ವಿಚಾರಶಕ್ತಿ. ವಿಚಾರ ಸದ್ವಿಚಾರವಾಗಬೇಕಾದರೆ ಅದೊಂದು ಶಿಸ್ತಿಗೆ ಒಳಪಡಬೇಕು, ತರ್ಕಬದ್ಧವಾಗಿರಬೇಕು. ನಮ್ಮ ನಂಬಿಕೆಗಳು ಅಥವಾ ಅಭಿಪ್ರಾಯಗಳು ಹೇಗೆ ಮೂಡುತ್ತವೆ ಮತ್ತು ಅವುಗಳ ಪರಿಣಾಮಗಳೇನಾಗಬಹುದು ಎಂಬ ವಿವೇಚನೆ ನಮಗಿರಬೇಕಾಗುತ್ತದೆ. ಪೂರ್ವಾಪರ ಆಲೋಚನೆ ಮಾಡುವುದು ಮನುಷ್ಯನ ಸಹಜ ಸ್ವಭಾವ.

ವಿಚಾರ ಮಾಡುವ ವಿಧಾನದಲ್ಲಿ ಅನೇಕ ಎಡರು ತೊಡರುಗಳಿವೆ. ತಪ್ಪು ಮಾಡುವುದು ಮಾನವ ಸ್ವಭಾವ. ನಾವೆಲ್ಲಿ ಮುಗ್ಗರಿಸಬಹುದು ಎಂಬುದನ್ನು ನಾವು ಮೊದಲೇ ತಿಳಿದು ಎಚ್ಚರಿಕೆಯಿಂದ ನಡೆಯ ಬೇಕಾಗುತ್ತದೆ. ತರ್ಕವಿದ್ಯೆ ಅಥವಾ ತರ್ಕಶಾಸ್ತ್ರ ನಮಗೆ ಅದನ್ನು ತಿಳಿಸುತ್ತದೆ.

ಭಾರತದಲ್ಲಿ ಗೌತಮನು (ಗೌತಮ ಬುದ್ಧನಲ್ಲ) ತರ್ಕಶಾಸ್ತ್ರದ ಪ್ರಧಾನ ಆಚಾರ್ಯ, ಅವನಿಗೆ ಮೊದಲೇ ತರ್ಕವಿದ್ದಿರಬಹುದು. ಆದರೆ ಅವನು ಅದಕ್ಕೊಂದು ವ್ಯವಸ್ಥಿತ ರೂಪವನ್ನು ನೀಡಿದ. ಅದನ್ನು ತರ್ಕವಿದ್ಯೆ, ಆನ್ವೀಷಕೀ, ನ್ಯಾಯವಿದ್ಯೆ ಎಂಬ ಭಿನ್ನ ಹೆಸರುಗಳಲ್ಲಿ ಗುರುತಿಸಲಾಗಿದೆ.

ಅದೇ ರೀತಿ ಪ್ರಾಚೀನ ಗ್ರೀಸಿನಲ್ಲಿ ತರ್ಕಶಾಸ್ತ್ರವನ್ನು ಸ್ಥಾಪಿಸಿದವನು ಅರಿಸ್ಟಾಟಲ್. ಅವನಿಗಿಂತ ಮೊದಲೇ ವಿಚಾರ ಮಂಥನಕ್ಕೆ ಸಾಕಷ್ಟು ಶ್ರಮಿಸಿದವನು ಸಾಕ್ರಟಿಸ್. ಸಾಕ್ರಟಿಸನು ಗ್ರೀಸಿನ ಸುತ್ತೆಲ್ಲಾ ಮಹಾಜ್ಞಾನಿಯೆಂದು ಪ್ರಖ್ಯಾತನಾಗಿದ್ದ. ಅವನ ಬಗ್ಗೆ ಅಸೂಯೆಗೊಂಡ ಕೆಲವು ವಿದೇಶಿ ತಾರ್ಕಿಕರು ಒಮ್ಮೆ ಅವನನ್ನು ವಾದದಲ್ಲಿ ಸೋಲಿಸಬೇಕೆಂದು ನಿರ್ಧರಿಸಿ ಸಿದ್ಧರಾಗಿ ಅವನ ಬಳಿಗೆ ಬಂದರು. ಅವರು ಬಂದ ಕಾರಣವನ್ನು ಅರಿತ ಸಾಕ್ರಟಿಸ್ 'ಏನು ಬಂದಿರಿ' ಎಂದ. 'ನಮ್ಮ ಕೆಲವು ಪ್ರಶ್ನೆಗಳಿಗೆ ನಿನ್ನಿಂದ ಉತ್ತರ ಪಡೆಯಲು ಬಂದಿದ್ದೇವೆ' ಎಂದರು. 'ಏನು ನಿಮ್ಮ ಪ್ರಶ್ನೆ' ಎಂದ. ಅವರು ಒಂದು ಗಹನವಾದ ಪ್ರಶ್ನೆಯನ್ನು ಮುಂದಿಟ್ಟರು. ಸಾಕ್ರಟಿಸ್ ಸ್ವಲ್ಪ ಯೋಚಿಸಿ 'ಉತ್ತರ ಗೊತ್ತಿಲ್ಲ' ಎಂದ. ವಾದಕ್ಕೆ ಬಂದವರಿಗೆ ಖುಷಿಯಾಯಿತು. ಇನ್ನೊಂದು ಪ್ರಶ್ನೆ ಹಾಕಿದರು. ಅದಕ್ಕೂ 'ಗೊತ್ತಿಲ್ಲ' ಎಂದ. ಅವರು ಪ್ರಶ್ನೆ ಕೇಳಿದಂತೆಲ್ಲಾ ಇವನು 'ಗೊತ್ತಿಲ್ಲ' ಎನ್ನುತ್ತಿದ್ದ. ಎದುರಾಳಿಗಳು ವಿಜಯೋತ್ಸಾಹದಿಂದ 'ನೀನೇನೋ ಮಹಾಜ್ಞಾನಿ ಎಂದುಕೊಂಡಿದ್ದೆವು, ನಿನಗೆ ಏನೂ ಗೊತ್ತಿಲ್ಲ' ಎಂದು ಬೀಗಿದರು. ಆಗ ಸಾಕ್ರಟಿಸ್ 'ಹೌದು, ನನಗೆ ಗೊತ್ತಿಲ್ಲ ಎಂಬುದಾದರೂ ಗೊತ್ತಿದೆ, ಆದರೆ ನಿಮಗೆ ಅದೂ ಗೊತ್ತಿದೆಯೋ ಇಲ್ಲವೋ ಗೊತ್ತಿಲ್ಲ' ಎಂದ. ಇದರಿಂದ ಯಾರು ನಿಜವಾದ ಜ್ಞಾನಿಗಳು ಎಂಬುದು ಗೊತ್ತಾಗುತ್ತದೆ.

ಯಾವುದೇ ವಿಚಾರದ ಗುರಿ ಒಂದು ನಿರ್ಣಯವನ್ನು ತಲುಪುವುದಾಗಿರುತ್ತದೆ. ನಿರ್ಣಯಕ್ಕೆ ಆಧಾರವಾಗಿರುವುದು ಅನುಮಾನ ಅಥವಾ ತರ್ಕ ಎನ್ನಿಸಿಕೊಳ್ಳುತ್ತದೆ. ಅನುಮಾನಕ್ಕೆ ಆಧಾರ ಅನುಭವವೆಂಬುದನ್ನು ಭಾರತೀಯ ತರ್ಕಶಾಸ್ತ್ರ ಪ್ರತಿಪಾದಿಸುತ್ತದೆ. ಅನುಭವದಲ್ಲಿ ಎರಡು ಬಗೆಯುಂಟು. ಒಂದು ಯಥಾರ್ಥಾನುಭವ, ಇನ್ನೊಂದು ಅಯಥಾರ್ಥ. ಯಾವ ವಸ್ತು ಹೇಗಿದೆ ಎಂಬುದನ್ನು ಅನುಭವದಿಂದ ತಿಳಿದು ಆ ವಸ್ತು ಹೀಗಿದೆ ಎಂದು ಹೇಳುವುದು ಯಥಾರ್ಥಾನುಭವ. ವಸ್ತುವಿನಲ್ಲಿ ಇಲ್ಲದುದನ್ನು ಆರೋಪ ಮಾಡುವುದು ಅಯಥಾರ್ಥ. ಉದಾಹರಣೆಗೆ, 'ಗುಲಾಬಿ ಕೆಂಪಗಿದೆ', 'ಅಂಜೂರ' ಕೆಂಪಗಿದೆ. ಗುಲಾಬಿ ಒಂದು ಹೂವು; ಆದ್ದರಿಂದ 'ಅಂಜೂರ ಒಂದು ಹೂವು' ಎಂದು ಹೇಳಿದರೆ ಅದು ನಿಜವಾದ ಅನುಭವವಾಗುವುದಿಲ್ಲ.

ಇನ್ನೊಂದು ಉದಾಹರಣೆಯನ್ನು ಗಮನಿಸೋಣ : ಆನೆ ಇರುವೆಗಿಂತ ದೊಡ್ಡದು. ದೊಡ್ಡ ಆನೆ ದೊಡ್ಡ ಇರುವೆಗಿಂತ ದೊಡ್ಡದು. ಆದ್ದರಿಂದ ಸಣ್ಣ ಆನೆ ಸಣ್ಣ ಇರುವೆಗಿಂತ ಸಣ್ಣದು. – ಇಂತಹ ನಿರ್ಣಯ ತರ್ಕಾಭಾಸವಾಗುತ್ತದೆ.

ಕಾರ್ಯಕಾರಣ ಸಂಬಂಧವನ್ನು ಜಾನ್ ಸ್ಟೂವರ್ಟ್ ಮಿಲ್ ಎಂಬ ಪಾಶ್ಚಾತ್ಯ ತಾರ್ಕಿಕ ಈ ರೀತಿ ವಿವರಿಸುತ್ತಾನೆ : ಕಾರ್ಯಕಾರಣ ಸಂಬಂಧವನ್ನು ಕಂಡುಹಿಡಿಯಲು ಮತ್ತು ಸ್ಥಾಪಿಸಲು ಐದು ರೀತಿಗಳಿವೆ. ಅನ್ವಯ ರೀತಿ, ವ್ಯತಿರೇಕ ರೀತಿ, ಸಂಯುಕ್ತ ಅನ್ವಯ ವ್ಯತಿರೇಕ ರೀತಿ, ಸಹಪರಿವರ್ತನ ರೀತಿ ಮತ್ತು ಪರಿಶಿಷ್ಟ ರೀತಿ.

ಅನ್ವಯ ರೀತಿಯಿಂದ ಕಾರಣವಿದ್ದರೆ ಕಾರ್ಯವಿರುತ್ತದೆ ಎಂದು ತಿಳಿಯುತ್ತದೆ. ವ್ಯತಿರೇಕ ರೀತಿಯಿಂದ ಕಾರಣವಿಲ್ಲದಿದ್ದಾಗ ಕಾರ್ಯವಿರಲಾರದು ಎಂದು ತಿಳಿಯುತ್ತದೆ. ಸಂಯುಕ್ತ ಅನ್ವಯ ವ್ಯತಿರೇಕ ರೀತಿಯಿಂದ ಕಾರಣವಿದ್ದರೆ ಕಾರ್ಯ, ಕಾರಣವಿಲ್ಲದಿದ್ದರೆ ಕಾರ್ಯವಿಲ್ಲ ಎಂದು ತಿಳಿಯುತ್ತದೆ. ಸಹಪರಿವರ್ತನ ರೀತಿಯಿಂದ ಕಾರಣದಲ್ಲಿ ಪರಿವರ್ತನೆಯಾದಾಗ ಕಾರ್ಯದಲ್ಲೂ ಪರಿವರ್ತನವಾಗುತ್ತದೆ ಎಂದು ತಿಳಿಯುತ್ತದೆ ಹಾಗೂ ಪರಿಶಿಷ್ಟ ರೀತಿಯಿಂದ ಒಂದು ಕಾರ್ಯದ ಕಾರಣ ಮತ್ತೊಂದು ಕಾರ್ಯದ ಕಾರಣವಾಗಲಾರದು ಎಂದು ತಿಳಿಯುತ್ತದೆ.

ಈ ವಿಧಾನಗಳಿಂದ ಘಟನೆಗಳ ಕಾರ್ಯಕಾರಣ ಸಂಬಂಧವನ್ನು ಸ್ಥಾಪಿಸಬಹುದು.

ಒಬ್ಬನನ್ನು ಪ್ರಶ್ನೆ ಕೇಳಿ ಅವನಿಂದ ಉತ್ತರ ಪಡೆಯದ ಪ್ರಶ್ನೆಗೆ ಉತ್ತರ ಬಂದಂತೆ ನಟಿಸಿ ಅದರ ಮೇಲೆ 'ಹೌದು' ಅಥವಾ 'ಇಲ್ಲ' ಎನ್ನುವ ಉತ್ತರವನ್ನು ನಿರೀಕ್ಷಿಸುವುದು ತರ್ಕಾಭಾಸ ಎನ್ನಿಸಿಕೊಳ್ಳುತ್ತದೆ. ಉದಾಹರಣೆಗೆ, ಒಬ್ಬ ಇನ್ನೊಬ್ಬನನ್ನು ಕೇಳಿದ: 'ಏನಯ್ಯ, ನಿನ್ನ ಹೆಂಡತಿಯನ್ನು ಹೊಡೆಯುವುದನ್ನು ಬಿಟ್ಟಿದ್ದೀಯ ?' ಈ ಪ್ರಶ್ನೆಗೆ 'ಹೌದು' ಎನ್ನಲಿ 'ಇಲ್ಲ' ಎನ್ನಲಿ ಎರಡು ಸಂದರ್ಭಗಳಲ್ಲಿಯೂ ಅವನು ಹೆಂಡತಿಯನ್ನು ಹೊಡೆಯುತ್ತಿದ್ದ ಎಂದು ಒಪ್ಪಿಕೊಂಡಂತಾಯಿತು. ಇದೊಂದು ತರ್ಕಾಭಾಸ. ಒಮ್ಮೊಮ್ಮೆ ವಕೀಲರು ಪುಕ್ಕಲು ಸ್ವಭಾವದ ಸಾಕ್ಷಿಗೆ ಈ ರೀತಿ ಪ್ರಶ್ನೆ ಕೇಳುವುದುಂಟು. ಆಗ ಪ್ರತಿವಾದಿಯ ಪರ ವಕೀಲರು ಇದನ್ನು ಪ್ರತಿಭಟಿಸುವುದು ನ್ಯಾಯ ಸಮ್ಮತವಾಗಿದೆ. ಇನ್ನೊಂದು ಬಗೆಯ ತರ್ಕಾಭಾಸವನ್ನು ಚಕ್ರಕ ತರ್ಕಾಭಾಸ ಎನ್ನುತ್ತಾರೆ. ಸಾಧಿಸಬೇಕಾದ ವಿಷಯವನ್ನೇ ಸಿದ್ಧವೆಂದು ಇಟ್ಟುಕೊಳ್ಳುವ ತರ್ಕಾಭಾಸಕ್ಕೆ ಹೀಗೆಂದು ಕರೆಯುತ್ತಾರೆ. ಉದಾಹರಣೆಗೆ, 'ಒಬ್ಬ ನನಗೆ ಹೇಳಿದ : 'ಅವನು ದೇವತೆಗಳೊಡನೆ ಮಾತನಾಡುತ್ತಾನೆ' ಎಂದು. ನಾನು ಕೇಳಿದೆ 'ನಿನಗೆ ಹೇಗೆ ಗೊತ್ತು ?' ಎಂದು. ಅದಕ್ಕೆ ಅವನೆಂದ 'ಅವನೇ ಹಾಗೆ ಹೇಳಿದ' ಎಂದು. ನಾನೆಂದೆ 'ಅವನು ಸುಳ್ಳು ಹೇಳಿದ್ದರೆ ?' ಎಂದು. ಅದಕ್ಕೆ ಅವನೆಂದ 'ಏನು ! ಎಲ್ಲಿಯಾದರೂ ಉಂಟೆ. ದೇವತೆಗಳೊಡನೆ ಮಾತನಾಡಬಲ್ಲವನು ಎಂದಾದರೂ ಸುಳ್ಳು ಹೇಳುತ್ತಾನೆಯೇ ?'

ತರ್ಕವನ್ನು ಕುರಿತು ವಚನಕಾರ ಅಲ್ಲಮಪ್ರಭು 'ತರ್ಕವೆಂಬುದು ಟಗರ ಹೋರಟೆ' ಎಂದಿರುವುದು ಮೇಲಿನಂತಹ ತರ್ಕಾಭಾಸ, ವಿತಂಡವಾದಗಳನ್ನು ಕುರಿತೇ ಇರಬೇಕು. ತರ್ಕ ನಮ್ಮ ವಿಚಾರ ತರಂಗಗಳನ್ನು ಎಡರು ತೊಡರುಗಳಿಂದ ಬಿಡಿಸಿ ನಮ್ಮನ್ನು ನಿಷ್ಪಕ್ಷಪಾತವಾದ ನಿರ್ಣಯದತ್ತ ಕೊಂಡೊಯ್ಯುವಂತಿರಬೇಕು.

ಬಿ. ವಿ. ವೀರಭದ್ರಪ್ಪ
ಬಿ.೧೮, ವಿದ್ಯಾನಗರ, ದಾವಣಗೆರೆ-೫೭೭ ೦೦೫

ಒಳ್ಳೆಯ ಸಮಾಜ ಕಾಣಬೇಕಾದರೆ ಪ್ರತಿಯೊಬ್ಬ ವ್ಯಕ್ತಿಯೂ ಮೊದಲಿಗೆ ಅನ್ಯರ ಒಳಿತಿಗಾಗಿ, ಆ ಬಳಿಕ ತನ್ನ ಒಳಿತಿಗಾಗಿ ದುಡಿಯುವ ಮನೋಬಲವನ್ನು ರೂಢಿಸಿಕೊಳ್ಳುವುದು ಅಗತ್ಯ.
*- ಡಾ॥ ರಾಧಾಕೃಷ್ಣನ್*

ಜನರ ಬಡತನ ತೊಲಗಿಸಬೇಕಾದರೆ ಕಡ್ಡಾಯ ಶಿಕ್ಷಣದ ಮೂಲಕ ಅವರಲ್ಲಿರುವ ಅಜ್ಞಾನವನ್ನು ತೊಲಗಿಸಿ ಮತ್ತು ಮಿತವ್ಯಯದ ಪಾಠ ಅವರಿಗೆ ಕಲಿಸಿ.
*- ಸರ್. ಎಂ. ವಿಶ್ವೇಶ್ವರಯ್ಯ*

# ನಿಮ್ಮ ತಾರುಣ್ಯದ ರಹಸ್ಯ!




ಎಲ್ಲಾ ಹೊಸ ಸಂತೂರಿನಲ್ಲಿ ಶ್ರೀಗಂಧ ಮತ್ತು ಹರಿಶಿನದ ಸಾರ ಅಡಗಿದೆ. ಈಗ ಸಮೃದ್ಧ ನೊರೆ ಮತ್ತು ಸದಾ ಸುಳಿದಾಡುವ ಸುಗಂಧದೊಡನೆ ದೊಡ್ಡದಾದ, ಉತ್ತಮ ಆಕಾರದೊಡನೆ, ಬಹುಕಾಲ ಬಾಳಿಕೆ ಬರುವ,

# ಸಂತೂರ್

FCB◆ULKA-42723

**HOSATHU** Kannada Monthly / July 2002 Rs. 10
RNI Regn. No. KARKAN/1999/614 REGD. CPMG / KA / BGE – 7 / 2002 Licenced to post without prepayment. Licence No. WPP-14